ಈ ಮಾಲೆಯ ಸಂಪಾದಕರು ಮತ್ತು ಪ್ರಕಾಶಕರು :
ಎಚ್. ಎಂ. ಶಂಕರನಾರಾಯಣರಾವ್, ಎಂ.ಎ.
ಅಸಿಸ್ಟೆಂಟ್ ಪ್ರೊಫೆಸರ್ ಮತ್ತು ಕನ್ನಡ ಶಾಖೆಯ ಮುಖ್ಯಾಧಿಕಾರಿಗಳು
ಶಾರದಾವಿಲಾಸ ಕಾಲೇಜು, ಮೈಸೂರು.

ಮೊದಲನೆಯ ಮುದ್ರಣ : ೧೯೫೫



ಬೆಲೆ : ಸಾಧಾರಣ ಪ್ರತಿ ೧ ೮ ೦
ಕ್ಯಾಲಿಕೊ ಪ್ರತಿ ೨ ೮ ೦

ಮುದ್ರಕರು :
ಪಿ. ಆರ್. ಸೀತಾರಾಮ್, ಬಿ.ಎಸ್‌ಸಿ., ಎಲ್.ಎ.ಎಂ.ಎಸ್.,
ಶ್ರೀ ಸೀತಾರಾಘವ ಪ್ರೆಸ್, ಮೈಸೂರು.

# ಅರಿಕೆ

ಜಗತ್ತಿನ ಇಂದಿನ ಪ್ರಕ್ಷುಬ್ಧ ವಾತಾವರಣದಲ್ಲಿ ಶಾಂತಿಯ ಮಾತು ಎಲ್ಲೆಲ್ಲೂ ಕೇಳಿಬರುತ್ತಿದೆ. ವಿರುದ್ಧ ರಾಜಕೀಯ ಜಗಳ, ಪರಸ್ಪರ ತಿಕ್ಕಾಟ ದಿಂದ ಉಂಟಾಗಿರುವ ಯುದ್ಧದ ಕಾರ್ಮೋಡಗಳಿಂದ ಜಗತ್ತನ್ನು ಉದ್ಧರಿಸಲು ಎಲ್ಲ ರಾಷ್ಟ್ರಗಳು ಭಾರತದತ್ತ ಆಶಾ ದೃಷ್ಟಿಯಿಂದ ನೋಡುತ್ತಿವೆ. ಇಂದು ಭಾರತ 'ಯಾವ ವ್ಯಕ್ತಿಯೇ ಆಗಲಿ, ರಾಷ್ಟ್ರವೇ ಆಗಲಿ ಬದುಕುವ ದಾರಿ ಯುದ್ಧವಲ್ಲ....ದ್ವೇಷ, ಹಗೆತನ ವಿನಾಶದ ಹಾದಿ. ಯುದ್ಧದಿಂದ ವೈರಿ ನಿರ್ನಾಮವಾಗುತ್ತಾನೆ. ಆದರೆ ವೈರತ್ವ ಅಳಿಯುವುದಿಲ್ಲ....ನಿಜವಾದ ಬದುಕುವ ದಾರಿ ಶಾಂತಿ, ಸ್ನೇಹಗಳೇ ಹೊರತು ಯುದ್ಧವಲ್ಲ' ಎನ್ನುವ ಸತ್ಯವನ್ನು ಬುದ್ಧ, ಬಸವಣ್ಣ, ಗಾಂಧಿ ಮೊದಲಾದ ವಿಭೂತಿ ಪುರುಷರು ಸಾರಿದ ಸತ್ಯಪ್ರೇಮ ಅಹಿಂಸೆಗಳ ದಿವ್ಯ ಸಂದೇಶವನ್ನು ಜಗತ್ತಿಗೆ ನೀಡಬೇಕಾಗಿದೆ. ಈ ಗುರುತರವಾದ ಜವಾಬ್ದಾರಿಯಲ್ಲೂ, ಭಾರತ ತನ್ನ ಗತ ಜೀವನದ ಇತಿಹಾಸದಿಂದ ಸ್ಫೂರ್ತಿಯನ್ನು ಪಡೆಯಬೇಕಾಗಿದೆ.

ಸುಮಾರು ಮೂರು ಶತಮಾನಗಳವರೆಗೆ ಭವ್ಯವಾಗಿ ಬಾಳಿ ಬದುಕಿ, ನಾಗರಿಕತೆಯ ಮುಗಿಲನ್ನು ಮುಟ್ಟಿದ್ದ ವಿಜಯನಗರ ಸಾಮ್ರಾಜ್ಯದ ವಿನಾಶಕ್ಕೆ ಕೃಷ್ಣದೇವರಾಯನು ನೆರೆಯ ಮಹಮದೀಯ ಸುಲ್ತಾನರನ್ನು ನಡೆಸಿಕೊಂಡ ರೀತಿ ಬಹುಮಟ್ಟಿಗೆ ಕಾರಣವಾಯಿತೆಂಬುವನ್ನು ಇತಿಹಾಸ ಓದಿದವರು ಬಲ್ಲರು. ಕೃಷ್ಣದೇವರಾಯನು ಹಿಂದಣ ವೈರವನ್ನು ಮರೆತು, ಪ್ರತೀಕಾರವನ್ನು ತೀರಿಸಿಕೊಳ್ಳುವ ಆಸೆಗೆ ಹೋಗದೆ, ಜನಮನದ ಆಸೆಯಂತೆ ಬಿಜಾಪುರದ ಸುಲ್ತಾನನನ್ನು ಸ್ನೇಹದಿಂದ ನೋಡಿದ್ದರೆ ರಕ್ಕಸ ತಂಗಡಿಯ ಯುದ್ಧ ನಡೆಯುತ್ತಿರಲಿಲ್ಲವೇನೋ! ಇದು 'ರೆ' ಸಾಮ್ರಾಜ್ಯದ ಊಹೆ.

ಈ ಕಾದಂಬರಿಯಲ್ಲೂ ಬರುವ ಶಾಂತಿವಾದಿ ಜನತೆಯ ಆಸೆ ಅಭೀಷ್ಟಗಳ ಪ್ರತೀಕವಾಗಿದ್ದಾನೆ. ಈ ಕಾದಂಬರಿಯಲ್ಲಿ ಬರುವ ಷಂಷರ್ ಖಾನನ ವೃತ್ತಾಂತ ಉಳಿದು, ಉಳಿದುದೆಲ್ಲ ಐತಿಹಾಸಿಕ ಸಂಗತಿಗಳನ್ನು ಆಧರಿಸಿ ಬರೆದುದು. ಅವುಗಳಲ್ಲಿ ಮುಖ್ಯವಾದ ಗ್ರಂಥಗಳನ್ನು ಉಲ್ಲೇಖಿಸಿದ್ದೇನೆ.

1 S. Krishnaswamy Iyengar — Sources of Vijayanagar History

2. K. A. Neelakanta Sastry, N. Venkataramaiah — Further Sources of Vijayanagar History

3. R. Sewell — A Forgotten Empire.

4. Saltore — Social and Political History in Vijayangar Empire Vol· I and II.

5. HayavadanaRao — Mysore Gazetter.

6. Vijayanagar Sexcentenary CommemorationVolume

ಈ ಕಾದಂಬರಿಯಲ್ಲಿ ಕೃಷ್ಣದೇವರಾಯನ ಬಿಜಾಪುರದ ದಂಡ ಯಾತ್ರೆಯ ಕಥೆಯನ್ನು ಹೇಳಿದ್ದರೂ, ಪರ್ಯಾಯವಾಗಿ ಆಗಿನ ಕಾಲದ ಜನ ಜೀವನವನ್ನು ಚಿತ್ರಿಸಿದ್ದೇನೆ. ಕೃಷ್ಣದೇವರಾಯನ ಯೌವನದ ದಿನ ಗಳ ಕಥೆಯನ್ನು 'ಜಗನ್ಮೋಹಿನಿ'ಯಲ್ಲೂ, ಕೊನೆಯ ದಿನಗಳ ಕಥೆಯನ್ನು 'ರಾಜದ್ರೋಹಿ' ಯಲ್ಲೂ ಹೇಳಿದ್ದೇನೆ. ಈ ಕಾದಂಬರಿಯ ಮೂಲಕ ನನ್ನ ಉಳಿದ ಐತಿಹಾಸಿಕ ಕಾದಂಬರಿಗಳ ಕಡೆಗೆ ಓದುಗರ ಕುತೂಹಲ ಕೆರಳಿದರೆ ಈ ಬರಹ ಬರೆದುದಕ್ಕೆ ಸಾರ್ಥಕ.

ಈ ಕಾದಂಬರಿಯನ್ನು ಬರೆಯುವಾಗ ಅನೇಕ ಉಪಯುಕ್ತ ಸಲಹೆ ಗಳನ್ನಿತ್ತು ಹಸ್ತಪ್ರತಿಯನ್ನು ತಯಾರಿಸಿ ಸಹಕರಿಸಿದ ಸೌ. ಮಂಜುಳೆಗೆ ನನ್ನ ನೆನಕೆಗಳು. ಈ ಅಲ್ಪಕೃತಿ ಕವಿಕಾವ್ಯ ಮಾಲೆಯಲ್ಲಿ ಪ್ರಕಟವಾಗು ತ್ತಿರುವುದು ಶ್ರೀ ಎಚ್. ಎಂ. ಶಂಕರನಾರಾಯಣರಾವ್ ಎಂ. ಎ. ಅವರ ಉದಾರಾಶ್ರಯ, ಸ್ನೇಹಾಂತಃಕರಣಗಳಿಂದಲ್ಲದೆ ಕೃತಿಯ ಹೆಗ್ಗಳಿಕೆಯಿಂದಲ್ಲ. ಅವರ ವಿಶ್ವಾಸಕ್ಕಾಗಿ ನಾನು ಚಿರಋಣಿಯಾಗಿದ್ದೇನೆ. ಇದನ್ನು ಸುಂದರ ವಾಗಿ ಮುದ್ರಿಸಿ ಕೊಟ್ಟ ಸೀತಾರಾಘವ ಮುದ್ರಣಾಲಯದ ಒಡೆಯರಿಗೂ ನನ್ನ ವಂದನೆಗಳು ಸಲ್ಲಬೇಕು.

೨೬-೯-೧೯೫೫ — ಶ್ರೀನಿವಾಸರಾವ್ ಕೊರಟಿ

# ಸಂಪಾದಕರ ನುಡಿ

ಶ್ರೀಮಾನ್ ಕೊರಟಿ ಶ್ರೀನಿವಾಸರಾಯರ ಈ ಐತಿಹಾಸಿಕ ಕಾದಂಬರಿಯನ್ನು ನಾನು ಸಂತೋಷದಿಂದ ಪ್ರಕಟಿಸಿದ್ದೇನೆ.

ಲೇಖಕರನ್ನು ನಾನು ಪ್ರತ್ಯೇಕವಾಗಿ ಕನ್ನಡ ಜನತೆಗೆ ಪರಿಚಯ ಮಾಡಿಕೊಡಬೇಕಾಗಿಲ್ಲ. ಅವರ ಸಾಮಾಜಿಕ ಕಾದಂಬರಿಗಳು ಜನರಲ್ಲಿ ಈಗಾಗಲೇ ಪ್ರಚಾರಗೊಂಡು ಲೇಖಕರಿಗೆ ಕೀರ್ತಿಯನ್ನು ತಂದಿವೆ. ಆದರೆ ಈಗ ಕೃತವಿದ್ಯರಾದ ಇವರ ದೃಷ್ಟಿ, ತಮ್ಮ ಕಾದಂಬರಿಗೆ ಇತಿಹಾಸದ ವಸ್ತುವನ್ನು ಹುಡುಕಿಕೊಂಡು ಹೊರಟಿರುವುದು ಒಂದು ಶುಭ ಸೂಚನೆ. ಕನ್ನಡವನ್ನೇ ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಅಭ್ಯಾಸ ಮುಗಿಸುತ್ತಿರುವ ಈ ತರುಣ ಲೇಖಕರಿಗೆ ಉತ್ತಮೋತ್ತಮವಾದ ಭವಿಷ್ಯವಿದೆ. ಈ ಅವಕಾಶವನ್ನು ಅವರು ಸದುಪಯೋಗಪಡಿಸಿಕೊಂಡು ಇದೇ ರೀತಿಯ, ಇದಕ್ಕಿಂತಲೂ ಉತ್ತಮ ರೀತಿಯ ಐತಿಹಾಸಿಕ ಕೃತಿಗಳನ್ನು ರಚಿಸಿ, ನಾಡನುಡಿಗಳ ಸೇವೆಯನ್ನು ಮಾಡಿ ತನ್ಮೂಲಕ ಉದಯಪರಂಪರೆಯನ್ನೂ ಕೀರ್ತಿಯನ್ನೂ ಪಡೆಯಲೆಂದು ನನ್ನ ಹಾರೈಕೆ.

ಕೊನೆಯದಾಗಿ ನಾನು ಕೊಟ್ಟ ತೊಂದರೆಗಳನ್ನು ತಾಳ್ಮೆಯಿಂದ ಸಹಿಸಿಕೊಂಡು, ಈ ಕೃತಿಯನ್ನು ಮುದ್ದಾಗಿ ಮುದ್ರಿಸಿ ಕೊಟ್ಟ ಮಿತ್ರ ಶ್ರೀ ಪಿ. ಆರ್. ಸೀತಾರಾಂ, ಬಿ.ಎಸ್.ಸಿ. ಅವರಿಗೆ ನಾನು ಋಣಿ.

ಶಾರದಾಮಂದಿರ
ಮೈಸೂರು.
೨-೧೧-೫೫

**ಎಚ್. ಎಂ. ಶಂಕರನಾರಾಯಣರಾವ್**
ಸಂಪಾದಕ

# ಶಾಂತಿವಾದಿ

## ೧

ರಾಜಧಾನಿಯಲ್ಲಿ ಮಹಾನವಮಿಯ ಸಂಭ್ರಮ. ಸಾಮ್ರಾಟ್ ಶ್ರೀ ಕೃಷ್ಣದೇವರಾಯನು ಇಂದು ವಿಜಯ ಮಂದಿರದಲ್ಲಿ ವಿಶೇಷ ಒಡ್ಡೋಲಗ ಕೊಡಲಿದ್ದಾನೆ. ಸಾಮ್ರಾಜ್ಯದ ಮೂಲೆಮೂಲೆಗಳಿಂದ ಸಾಮಂತರು, ಮಂಡಲೇಶ್ವರರು, ದೊಡ್ಡಪುಟ್ಟ ಪಾಳೆಯಗಾರರು ತಮ್ಮ ಸಮಸ್ತ ಸೇನಾ ಬಲದೊಂದಿಗೆ ರಾಜಧಾನಿಗೆ ಆಗಮಿಸಿದ್ದಾರೆ. ಶ್ರೀರಂಗಪಟ್ಟಣ, ಮಲೆಯ ಬೆನ್ನೂರು, ಘನಗಿರಿ, ಮುಳುವೈ, ಗುತ್ತಿ, ಕೊಂಡನವೊಲ್, ಸಿದ್ದವಟ್ಟ, ಸಿದ್ಧಾಪುರ, ನಾಗಮಂಗಲ, ಮುಳುವಾಡು, ರಾಯದುರ್ಗ, ಮೊದಲಾದ ಹದಿನೆಂಟು ಸೀಮೆಗಳ ಮಂಡಲೇಶ್ವರರೂ, ಕಳಸ, ಮಂಗಳೂರು, ಬಾರಕೂರೊಡೆಯರೂ, ದಕ್ಷಿಣಾಪಥದ ಇನ್ನೂ ಅನೇಕ ಸಣ್ಣಪುಟ್ಟ ಸಂಸ್ಥಾನಿಕರೂ ಸಾಮ್ರಾಟನ ವಿಶೇಷ ಆಮಂತ್ರಣದ ಮೇರೆಗೆ ರಾಜಧಾನಿಗೆ ಬಂದಿದ್ದಾರೆ.

ಸಾಮಾನ್ಯವಾಗಿ ಸಾಮಂತರೂ, ಮಂಡಲೇಶ್ವರರೂ, ರಾಜಬೊಕ್ಕಸಕ್ಕೆ ಸಲ್ಲಬೇಕಾದ ರಾಜಾದಾಯವನ್ನೂ, ಕಪ್ಪ ಕಾಣಿಕೆಗಳನ್ನೂ ನವರಾತ್ರಿಯ ವೇಳೆಗೆ ತಂದು ಒಪ್ಪಿಸುವುದು ಹಿಂದಿನಿಂದ ಬಂದಿದ್ದ ಪದ್ಧತಿ. ಈ ರಾಜಾದಾಯವನ್ನು ಆಯಾ ಸಂಸ್ಥಾನಿಕ ಮಂಡಲೇಶ್ವರರೇ ಬಂದು ಒಪ್ಪಿಸಬೇಕೆಂಬ ನಿಯಮವೇನೂ ಇರಲಿಲ್ಲವಾದರೂ ನವರಾತ್ರಿಯ ವೈಭವವನ್ನು ನೋಡಲು ಸಾಮಂತರೂ ಮಂಡಲೇಶ್ವರರೂ ರಾಜಧಾನಿಗೆ ಬರುತ್ತಿದ್ದರು. ಈ ಬಾರಿ ರಾಯನು ನವರಾತ್ರಿಯ ಉತ್ಸವಕ್ಕೆ ತಮ್ಮ ಚತುರಂಗ ಸೇನಾಬಲ ಸಮೇತವಾಗಿ ರಾಜಧಾನಿಗೆ ಬರಲು ವಿಶೇಷ ರೀತಿಯ ಆಮಂತ್ರಣ ಕೊಟ್ಟಿದ್ದನು. ಇದರ ಅರ್ಥ ರಾಯನು ಮತ್ತೆ ಯಾರ ಮೇಲೆಯೊ ಯುದ್ಧ ಸನ್ನಾಹ ಮಾಡುತ್ತಿರುವನೆಂದು. ಆಮಂತ್ರಣ ಕೇವಲ ಸೌಜನ್ಯದ ಕರೆಯಾಗದೆ ರಾಯನ ಕಟ್ಟಪ್ಪಣೆಯೇ ಆಗಿತ್ತು. ಇದನ್ನು ತಿರಸ್ಕರಿಸುವ ಎದೆ

ಗಾರಿಕೆಯಾಗಲೀ, ಮೀರುವ ಧೈರ್ಯವಾಗಲೀ ಯಾರಿಗಿದೆ ? ಕೃಷ್ಣದೇವ ರಾಯನ ಹೆಸರೆತ್ತಿದರೆ ಸಾಕು, ವೈರಿಗಳು ತತ್ತರಿಸುತ್ತಿದ್ದರು. ಅರಿರಾಯ ಭಯಂಕರನೆಂದೇ ರಾಯನ ಬಿರುದು. ಹೀಗಿರುವಲ್ಲಿ ಸಾಮಂತರು ರಾಯನ ಆಣತಿಯನ್ನು ಮೀರಿ ನಡೆಯಲು ಸಾಧ್ಯವೇ ? ಎಲ್ಲರೂ ರಾಯನ ಆಜ್ಞೆ ಯಂತೆ ತಮ್ಮ ಸೈನ್ಯದೊಂದಿಗೆ ರಾಜಧಾನಿಗೆ ಆಗಮಿಸಿದ್ದರು.

ಎಲ್ಲರಿಗೂ ಆಶ್ಚರ್ಯ–ರಾಯನು ಈ ಬಾರಿ ಯಾರ ಮೇಲೆ ಯುದ್ಧ ಸನ್ನದ್ಧನಾಗುತ್ತಿರುವನೆಂದು. ಏಕೆಂದರೆ ಈ ವೇಳೆಗಾಗಲೇ ರಾಯನ ಪರಾಕ್ರ ಮಕ್ಕೆ ದಕ್ಷಿಣಾಪಥದ ಅನೇಕ ರಾಜರು ಹೆದರಿ, ತಾವಾಗಿಯೋ, ಇಲ್ಲವೇ ಸೋತೋ ಅಂತೂ ಶರಣಾಗಿ ಬಂದಿದ್ದರು. ವಿಜಯನಗರದ ಅರಸರುಗಳ ಪ್ರಬಲ ವಿರೋಧಿಯಾಗಿದ್ದ ಉತ್ಕಲದ ಗಜಪತಿ ಕಟಕ್ ಯುದ್ಧದಲ್ಲಿ ಸೋತು, ರಾಯನಿಗೆ ಶರಣಾಗತನಾಗಿ ಬಂದಿದ್ದನು. ತನ್ನ ಮಗಳಾದ ಜಗನ್ಮೋಹಿನಿಯನ್ನು ಕೃಷ್ಣದೇವರಾಯನಿಗೆ ಮದುವೆ ಮಾಡಿಕೊಟ್ಟು ಬಾಂಧವ್ಯದ ಮೂಲಕ ಉತ್ಕಲ ದೇಶದ ಮಾಂಡಲಿಕನಾಗಿದ್ದನು. ಇತ್ತ ದಕ್ಷಿಣದಲ್ಲಿ ಶ್ರೀರಂಗಪಟ್ಟಣ, ಶಿವಸಮುದ್ರಗಳ ರಾಜರುಗಳು ಸೋತು, ರಾಯನ ಪ್ರಭುತ್ವವನ್ನು ಒಪ್ಪಿಕೊಂಡಿದ್ದರು. ವಿಜಯನಗರ ಸಾಮ್ರಾಜ್ಯವು ಉತ್ತರದಲ್ಲಿ ಕೃಷ್ಣಾನದಿ ತೀರದಿಂದ ಹಿಡಿದು ಸಿಂಹಳ ದ್ವೀಪಗಳವರೆಗೂ, ಪೂರ್ವ ಮತ್ತು ಪಶ್ಚಿಮ ಸಮುದ್ರಗಳನ್ನು ಅಪ್ಪಿಕೊಂಡು ಅಖಂಡವಾದ ಹಿಂದೂ ಸಾಮ್ರಾಜ್ಯವಾಗಿತ್ತು. ಉತ್ತರದ ಬಹಮನಿ ಸುಲ್ತಾನರು ಕೃಷ್ಣ ದೇವರಾಯನ ಹೆಸರು ಕೇಳಿದರೆ ನಡುಗುವ ಸ್ಥಿತಿಗೆ ಬಂದಿದ್ದರು. ಪಶ್ಚಿ ಮದ ಪೋರ್ಚುಗೀಸರೂ, ಸಿಂಹಳದ ಅರಸ ಏಳನೆ ಭುವನೈಕಬಾಹು ರಾಯ ನೊಂದಿಗೆ ಸ್ನೇಹಾಕಾಂಕ್ಷಿಗಳಾಗಿದ್ದರು.

ಕೃಷ್ಣದೇವರಾಯನ ಕಾಲದಲ್ಲಿ ಹತ್ತು ವರ್ಷಗಳ ಕಾಲ ಸಂತತವಾದ ಶ್ರಮ, ಬಲಿದಾನ, ಹಣವ್ಯಯಗಳಿಂದ, ಹಂಚಿ ಹೋಗಿದ್ದ ಸಾಮ್ರಾಜ್ಯ ವನ್ನು ಮತ್ತೆ ಕೂಡಿಸಿ, ಶತ್ರುಗಳ ಭಯವನ್ನು ನಿರ್ಮೂಲಮಾಡಿ, ರಾಜ್ಯಾ ಡಳಿತವನ್ನು ಒಂದು ವ್ಯವಸ್ಥೆಗೆ ತರಲಾಗಿತ್ತು. ಸಾಮ್ರಾಜ್ಯದ ದಿಗಂತದಲ್ಲಿ ಅನೇಕ ವರ್ಷಗಳಿಂದ ಮುಸುಕಿದ್ದ ಯುದ್ಧದ ಕಾರ್ಮೋಡ, ಉತ್ಕಲ ವಿಜಯದೊಂದಿಗೆ ಚಲಿಸಿ, ದೇಶದಲ್ಲಿ ಶಾಂತಿ, ಸುಭಿಕ್ಷಗಳ ಬೆಳುದಿಂಗಳು

ಮೂಡಿತ್ತು. ಪ್ರಜಾವರ್ಗದ ಆಸೆ, ಆಕಾಂಕ್ಷೆಗಳ ಸಂಕೇತವಾಗಿ ರಾಜಧಾನಿಯಲ್ಲಿ ಮಹೋನ್ನತವೂ, ದಿವ್ಯವೂ, ಭವ್ಯವೂ ಆಗಿದ್ದ 'ವಿಜಯಮಂದಿರ'ವು ರೂಪಗೊಂಡಿತ್ತು. ಅದು ಶತ್ರುಗಳ ಮೇಲಣ ವಿಜಯದ ಸಂಕೇತ ಮಾತ್ರವಾಗಿರದೆ, ಜನತೆಯ ಶಾಂತಿ, ಸುಖ ಸಂವೃದ್ಧಿಗಳ ದ್ಯೋತಕವೂ ಆಗಿತ್ತು.

ಇಂತಿರುವಲ್ಲಿ ಮತ್ತೆ ಯುದ್ಧದ ಮಾತು!

ಜನತೆಗೆ ಯುದ್ಧದ ಮಾತನ್ನು ನೆನೆಯಲೂ ಅಂಜಿಕೆಯಿತ್ತು. ಯುದ್ಧದ ದೆಸೆಯಿಂದ ಹಲವು ಬಗೆಯ ಸಾವು ನೋವುಗಳಿಗೆ ಬಲಿಯಾಗಿದ್ದ ಜನತೆಗೆ ಯುದ್ಧವೆಂದರೆ ಜಿಗುಪ್ಸೆ ಬಂದಿತ್ತು. ಯುದ್ಧವೆಂದರೆ ತಮ್ಮ ಸಮಸ್ತ ಸಂಪತ್ತಿನ ಸೂರೆ, ಬಂಧು ಬಾಂಧವರ ಕೊಲೆ, ತಮ್ಮ ನೆಮ್ಮದಿ ಬದುಕಿನ ಸುಖಸಂಪತ್ತಿನ ಬಲಿ ಎಂದೇ ಅವರ ಭಾವನೆ. ಅಂತಲೇ ಅವರಿಗೆ ಯುದ್ಧ ಸಾಕಾಗಿತ್ತು. ಶಾಂತಿಯನ್ನು ಬಯಸುತ್ತಿದ್ದ ಜನತೆಗೆ ಈಗ ಕೇಳಿ ಬಂದಿದ್ದು ಯುದ್ಧ ಸನ್ನಾಹ! ಅವರ ಊಹೆಯನ್ನು ಸಮರ್ಥಿಸುವಂತೆ ರಾಜಧಾನಿಗೆ ರಾಜಪ್ರತಿನಿಧಿಗಳು, ಸಾಮಂತರು, ತಮ್ಮ ಚತುರಂಗ ಸೈನ್ಯದೊಡನೆ ಬಂದಿದ್ದರು. ರಾಜಧಾನಿಗೆ ಬಂದ ಸೈನ್ಯವನ್ನು ಕಂಡೇ ಜನತೆ ಇದು ಯುದ್ಧ ಪ್ರಯತ್ನವೆಂದು ಅರಿತರು. ಆದರೆ ಇದುವರೆಗೆ ಈ ಸುದ್ದಿ ಕೇವಲ ಊಹೆಯಾಗಿಯೇ ಉಳಿದಿತ್ತು. ಸಾಮ್ರಾಟರು ಈ ವಿಷಯದಲ್ಲಿ ಯಾವ ಘೋಷಣೆಯನ್ನೂ ಹೊರಡಿಸಿರಲಿಲ್ಲ. ಎಲ್ಲರೂ ಇಂದು ನಡೆಯುವ ದರ್ಬಾರಿನಲ್ಲಿ ಈ ಸಂಧಿ ವಿಗ್ರಹಗಳ ವಿಷಯ ತೀರ್ಮಾನವಾಗುವುದೆಂದು ಭಾವಿಸಿದ್ದರು. ಅಂತಲೇ ಜನಸಮುದಾಯಕ್ಕೆ ಇಂದಿನ ಮಹಾನವಮಿ ಉತ್ಸವದ ಬಗೆಗೆ ವಿಶೇಷ ಸಂಭ್ರಮ, ಸಡಗರ!

ಸಾಮ್ರಾಟ್ ಕೃಷ್ಣದೇವರಾಯನು ಉಷಃಕಾಲಕ್ಕೆ ಎದ್ದು ತನ್ನ ಅನುದಿನದ ಅಂಗಸಾಧನೆಯನ್ನು ತೀರಿಸಿಕೊಂಡು ಚಂದ್ರಶಾಲೆಗೆ ಬಂದನು. ಅಲ್ಲಿ ಸುಮಂಗಲಿಯರು ರಾಯನಿಗೆ ಶಾಸ್ತ್ರೋಕ್ತವಾಗಿ ಸುಗಂಧ ಪೂರಿತವಾದ ತೈಲವನ್ನು ಲೇಪಿಸಿ, ಎಣ್ಣೆ ಮಜ್ಜನದ ಶಾಸ್ತ್ರವನ್ನು ಮುಗಿಸಿದರು. ಮಜ್ಜನ ಮುಗಿದನಂತರ ರಾಯನು ಶುಭ್ರವಸನಧಾರಿಯಾಗಿ, ಹಣೆಗೆ ತಿಲಕವಿಟ್ಟು ಕೊಂಡು, ಪೂಜಾಸಾಮಗ್ರಿಯೊಂದಿಗೆ, ತನ್ನ ಇಷ್ಟ ದೈವವಾದ ಪಂಪಾ

ಪತಿಯ ಆರಾಧನೆಗೆ ಹೊರಟನು. ಶರನ್ನವರಾತ್ರಿಯ ಒಂಭತ್ತು ದಿನಗಳೂ, ಶ್ರೀ ವಿರೂಪಾಕ್ಷ ಸ್ವಾಮಿಗೆ ಅಖಂಡವಾದ ಪೂಜೆ ಪುರಸ್ಕಾರಗಳು ನಡೆಯುತ್ತಿತ್ತು. ಇಂದು ಮಹಾ ಪೂಜೆ. ಹೊನ್ನ ಪುತ್ಥಳಿಯಿದ್ದ ಪೂಜಾಮಂದಿರದ ಬಳಿ ಸುಳಿಯಲು ಯಾರಿಗೂ ಅವಕಾಶವಿಲ್ಲದಂತೆ ಎಲ್ಲೆಡೆಯಲ್ಲೂ ಬಲವಾದ ರಕ್ಷಣೆ. ರಾಯನು ಪುರೋಹಿತರ ಸಮ್ಮುಖದಲ್ಲಿ ತನ್ನ ಇಷ್ಟ ದೈವವನ್ನು ಶ್ರದ್ಧಾಭಕ್ತಿಗಳಿಂದ ಆರಾಧಿಸಿ, ವಿಗ್ರಹವನ್ನು ಬಲವಂದು ಸಾಷ್ಟಾಂಗ ನಮಸ್ಕರಿಸಿ, ಅನಂತರ ಯಾಗಶಾಲೆಗೆ ಹೊರಟು ಬಂದನು.

ಯಾಗಶಾಲೆಯಲ್ಲಿ ಶರನ್ನವರಾತ್ರಿಯ ಅಭಿಮಾನ ದೇವತೆಗಳಾದ ಮಹಾ ಸರಸ್ವತಿ, ಮಹಾಲಕ್ಷ್ಮಿ ಮತ್ತು ಮಹಾಕಾಳಿ ಇವರ ಪ್ರೀತ್ಯರ್ಥವಾಗಿ ಪ್ರತಿದಿನವೂ ಹವನ ಹೋಮಗಳು ಅವ್ಯಾಹತವಾಗಿ ನಡೆಯುತ್ತಿದ್ದವು. ಇಂದು ಪೂಜೆಯ ಕೊನೆಯದಿನ. ಅಭಿಮಾನ ದೇವತೆಗಳಿಗೆ ಪೂರ್ಣಾಹುತಿ. ಇದಕ್ಕಾಗಿ ಪದ್ಧತಿಯಂತೆ ಬಲಿ ಕೊಡಲು ಅನೇಕ ಸಂಖ್ಯೆಯಲ್ಲಿ ಕುರಿ ಕೋಣಗಳನ್ನು ತಂದು ನಿಲ್ಲಿಸಿದ್ದರು. ಇವುಗಳನ್ನು ಬಲಿಕೊಟ್ಟನಂತರ ಸಕಲ ದೇವತೆಗಳ ಪ್ರೀತ್ಯರ್ಥವಾಗಿ ಹವಿಸ್ಸನ್ನು ಕೊಟ್ಟು ಹೋಮಕುಂಡದಲ್ಲಿ ಕೆಂಪು, ಮುತ್ತು, ರತ್ನ, ವಜ್ರಗಳನ್ನು ದೊರೆ ಅಗ್ನಿದೇವನಿಗೆ ಸಮರ್ಪಿಸಿದನು. ಪಂಚಭೂತಗಳ ತೃಪ್ತಿಗಾಗಿ ಯಥೇಚ್ಛವಾದ ದಾನ ಧರ್ಮಗಳೂ ಅನ್ನ ಸಂತರ್ಪಣೆಗಳೂ ನಡೆದವು. ಇಲ್ಲಿಗೆ ಯಾಗ ಸಮಾಪ್ತಿಗೊಂಡಂತೆ ಆಯಿತು.

ಸಂಜೆ ವಿಜಯಮಂದಿರದಲ್ಲಿ ಸಾಮ್ರಾಟ್ ಕೃಷ್ಣದೇವರಾಯನ ವಿಶೇಷ ದರ್ಬಾರು.

ಮಧ್ಯಾಹ್ನದಿಂದಲೇ ಜನಸ್ತೋಮ ವಿಜಯ ಮಂದಿರದ ಹೊರವಲಯಕ್ಕೆ ಬರತೊಡಗಿದ್ದರು. ಆಹ್ವಾನಿತರೆಲ್ಲರೂ ಬಿಸಿಲು ಬಾಡುವ ಮುನ್ನವೇ ಆಗಮಿಸತೊಡಗಿದ್ದರು. ಇಂದಿನ ಸಭೆಗೆ ವಿಶೇಷ ಆಹ್ವಾನದ ಮೇಲೆ ಆಗಮಿಸಿದ್ದ ಮಂಡಲೇಶ್ವರರೂ, ಸಂಸ್ಥಾನಿಕರೂ ಪ್ರಮುಖ ಸೇನಾನಿಗಳೂ, ಸಾಮ್ರಾಜ್ಯದ ಇತರ ಉನ್ನತ ಅಧಿಕಾರಿಗಳು ಗಣ್ಯ ವ್ಯಕ್ತಿಗಳೂ ವಿದ್ವಜ್ಜನರೂ, ಕಲಾವಿದರೂ, ತಮಗೆಂದೇ ಗೊತ್ತುಪಡಿಸಿದ್ದ ಪೀಠಗಳಲ್ಲಿ ಮಂಡಿಸಿದರು. ರಾಜ ಬಂಧುಗಳಿಗಾಗಿ, ಅಂತಃಪುರದ ಸ್ತ್ರೀಯರ ಸಲುವಾಗಿ

ವಿಶೇಷ ವ್ಯವಸ್ಥೆಯನ್ನು ಮಾಡಲಾಗಿತ್ತು.

ಎತ್ತರವಾದ ಪ್ರದೇಶವಲ್ಲಿ ಸಾಮ್ರಾಟರ ರತ್ನ ಸಿಂಹಾಸನ. ಅದರ ಸುತ್ತಲೂ ಭವ್ಯವಾದ ಅಮೃತ ಶಿಲಾಸ್ತಂಭರಾಜಿ. ಈ ಸ್ತಂಭರಾಜಿಯಲ್ಲಿ ಅನೇಕ ಕಡೆ ಗಜಸಿಂಹಗಳನ್ನು ಕೆತ್ತಿದ್ದರು. ಆನೆಯ ಸೊಂಡಲಿನಲ್ಲಿ ಮುತ್ತಿನ ಸರ ಜೋಲಾಡುತ್ತಿತ್ತು. ಸಭಾ ಮಂದಿರದ ನಾಲ್ಕು ದಿಕ್ಕಿನಲ್ಲೂ ನೆಲ ವನ್ನು ನವುರಾದ ರತ್ನಗಂಬಳಿ ಮುಚ್ಚಿತ್ತು. ಗೋಡೆಗಳಿಗೆ ರೇಶಿಮೆಯ ನವು ರಾದ ಜಾಲರಿಗಳು. ಸಿಂಹಾಸನಕ್ಕೆ ಹೋಗುವ ದಾರಿಯಲ್ಲಿ ರತ್ನಗಂಬಳಿಯ ಮೇಲೆ ಮಖಮಲ್ಲಿನ ನಿಡುಹಾಸು. ಸಿಂಹಾಸನದ ಅಕ್ಕಪಕ್ಕಗಳಲ್ಲಿ ಮುತ್ತು, ರತ್ನಖಚಿತವಾದ ನಿಮ್ನಾಸನಗಳು ಅಪೂರ್ವ ರೀತಿಯಲ್ಲಿ ಶೋಭಿಸುತ್ತಿದ್ದವು. ಈ ರಾಜಾಸ್ಥಾನ ದೇವಲೋಕದ ಇಂದ್ರನ ವೈಭವಕ್ಕೆ ಸರಿಸಾಟಿಯಾಗಿತ್ತು.

ನಿಶ್ಚಿತ ವೇಳೆಗೆ ಸಾಮ್ರಾಟರ ಸವಾರಿ ಚಿತ್ತೈಸಿತು.

ಅವರ ಆಗಮನವನ್ನು ನಿರ್ದೇಶಿಸಲು ಬತೇರಿಗಳಿಂದ ತೋಪುಗಳು ಹಾರಿದವು. ಜನಸ್ತೋಮ ಜಯಘೋಷ ಮಾಡಿತು. ವೇದ ಮಂತ್ರ ಗಳನ್ನು ಘೋಷಿಸುತ್ತ ವೈದಿಕರು ಪುರೋಹಿತರು ಮುಂದೆ ನಡೆದರು. ಅವರ ಹಿಂದೆ ಬೆಳ್ಳಿ ಕೋಲಿನ, ಛತ್ರಿ ಚಾಮರಗಳ ವೈತಾಳಿಕರು. ಅವರನ್ನು ಅನು ಸರಿಸಿ ರಾಯನ ಬಿರುದು ಬಾವುಟಗಳನ್ನು ಹೇಳುವ ಭಟ್ಟಂಗಿಗಳು. ಪ್ರಭು ಗಳು ಬರುತ್ತಿದ್ದಂತೆ ವಂದಿ ಮಾಗಧರು ಬಿರುದುಗಳನ್ನು ಉಚ್ಚ ಕಂಠದಲ್ಲಿ ಗಂಭೀರವಾಗಿ ಸಾರಿದರು:

'ಸ್ವಸ್ತಿ ಶ್ರೀಮತ್ಸಮಸ್ತ ಭುವನಾಶ್ರಯ,
ದಕ್ಷಿಣ ಭಾರತ ಪೃಥ್ವೀವಲ್ಲಭ,
ಶ್ರೀಮನ್ಮಹಾರಾಜಾಧಿರಾಜ,
ರಾಜ ಪರಮೇಶ್ವರ,
ಭಕ್ತ ಪರಮ ಭಟ್ಟಾರಕರ,
ಸತ್ಯಾಶ್ರಯ,
ವೇದ ವಾಕ್ಯ ಪ್ರಮಾಣ ಸಂವಾದ ಪಾರೀಣ,
ಪ್ರತ್ಯರ್ಥಿ ರಾಜ ವಿಭಾಡ,
ಶ್ರೀ ವಿರೂಪಾಕ್ಷ ಪಾದ ಪದ್ಮಾರಾಧಕ,

ಶ್ರೀ ವೀರ ಪ್ರತಾಪ,
ಆಸೇತು ವಿಂದ್ಯಾಧಿ ಭೂಮಂಡಲೈಕ ಛತ್ರಾಧಿಪ,
ಸಕಲ ವರ್ಣಾಶ್ರಮಾಚಾರ,
ಸನಾತನ ಧರ್ಮ ಪ್ರತಿಪಾಲಕ,
ಸಕಲ ಕಲಾ ನಿಪುಣ,
ಆಂಧ್ರ ಭೋಜ,
ಶ್ರೀಮದ್ ವಿದ್ಯಾನಗರ ರಾಜಧಾನಿ ರತ್ನ ಸಿಂಹಾಸನಾಧೀಶ್ವರ
ಕರ್ಣಾಟಕ ರಾಜ್ಯ ರಮಾರಮಣ,
ಶ್ರೀಮನ್ನರಸರಾಜೇಂದ್ರ ಕುಮಾರ,
ಶ್ರೀ ಕೃಷ್ಣದೇವರಾಯ ಮಹಾರಾಯ,
ಪರಾಕ್ ! ಬಹು ಪರಾಕ್ !!

ಸಭಾ ಸದರು ಎದ್ದು ನಿಂತು ಜಯಘೋಷ ಮಾಡಿದರು. ಸಾಮ್ರಾಟರು ರತ್ನ ಸಿಂಹಾಸನದಲ್ಲಿ ಮಂಡಿಸಿದರು.

ಅರಮನೆಯ ಕೋಟೆಯ ಬತೇರಿಗಳಿಂದ ಕುಶಾಲ ತೋಪುಗಳು ಹಾರಿದುವು.

ಒಂದೆಡೆ ವೀಣೆ, ವೇಣು, ಮೃದಂಗಗಳ ಮಂಜುಳರವ; ಮತ್ತೊಂದೆಡೆಯಲ್ಲಿ, ಶಂಖ, ಭೇರಿ, ತುತ್ತೂರಿ; ಕೊಂಬು ಕಹಳೆಗಳ ಭಯಂಕರ ನಾದ. ಇವುಗಳೊಂದಿಗೆ ಜನಸ್ತೋಮದ ಜಯಘೋಷ. ಗಿರಿಕಂದರಗಳು ಈ ಪ್ರಚಂಡ ಶಬ್ದದಿಂದ ಅದುರಿ ಆಕಾಶವೇ ಬಿರಿದಂತೆ ಭಾಸವಾಯಿತು. ಪ್ರಧಾನ ಅಮಾತ್ಯನಾದ ತಿಮ್ಮರಸನು ಕೈಯಲ್ಲಿದ್ದ ದಂಡದಿಂದ ಶಬ್ದ ಮಾಡಿದೊಡನೆ ಸಭೆಯ ಗದ್ದಲ ಅಡಗಿತು.

ಸಭಾಸದರೆಲ್ಲರೂ ತಮ್ಮ ಅಂತಸ್ತಿಗೆ ತಕ್ಕಂತೆ ಮುಜುರೆಯನ್ನು ಒಪ್ಪಿಸಿದರು.

ಈಗ ನೃತ್ಯ. ಸರ್ವಾಲಂಕಾರ ಭೂಷಿತೆಯರಾಗಿ, ಸ್ವರ್ಗಲೋಕದ ಅಪ್ಸರೆಯಂತೆ ಕಾಣುವ ನರ್ತಕಿಯರು ನೃತ್ಯಕ್ಕೆ ಆರಂಭಿಸಿದರು. ನವುರಾದ ಚೀನಾಂಬರವನ್ನು ಉಟ್ಟು, ಹೆಳಲನ್ನು ದಿವ್ಯವಾಗಿ ಕಟ್ಟಿ ಮುತ್ತುರತ್ನಗಳ ಹೂ ಮುಡಿದಿದ್ದರು. ಕೊರಳಿಗೆ ಪಚ್ಚೆ, ಕೆಂಪು ವಜ್ರಗಳ ಅನರ್ಘ್ಯ

ರತ್ನಾಭರಣ, ಕೊರಳಿಗೆ ಮುತ್ತಿನ ಕೊರಳಬಂದಿ, ನಡುವಿಗೆ ನವರತ್ನ ಖಚಿತವಾದ ಚಿನ್ನದ ವಡ್ಯಾಣಗಳಿಂದ ಒಪ್ಪಿದ ಅವರು ಸುರ ಸುಂದರಿಯರಂತೆ ಕಂಡರು. ಎಲ್ಲರೂ ಒಂದೊಂದು ಸುವರ್ಣ ಕಲಶಗಳನ್ನು ಹೊತ್ತಿದ್ದರು. ಅವುಗಳಲ್ಲಿ ಸುವರ್ಣ ದೀಪಗಳು ಬೆಳಗುತ್ತಿದ್ದವು. ಅವರು ದೀಪೋತ್ಸವದ ನೃತ್ಯವನ್ನು ಪ್ರದರ್ಶಿಸಿದರು.

ನೃತ್ಯ ಪ್ರದರ್ಶನ ಮುಗಿದ ಮೇಲೆ ವಿದ್ವನ್ಮಣಿಗಳ ಗೋಷ್ಠಿ, ಸಾಹಿತ್ಯ ಸಂಗೀತಗಳ ಕಾರ್ಯಕ್ರಮಗಳು ನಡೆದವು.

ಇವುಗಳ ಹಿಂದೆಯೇ ವಿಜಯ ಮಂದಿರದ ಹೊರವಲಯದಲ್ಲಿ ಏರ್ಪಡಿಸಿದ್ದ ಕ್ರೀಡಾರಂಗದಲ್ಲಿ ವಿವಿಧ ಆಟಪಾಟಗಳಿಗೆ ಪ್ರಾರಂಭವಾಯಿತು.

ಮಲ್ಲಯುದ್ಧದಲ್ಲಿ ಪಾರಂಗತರಾದ ಜಗಜಟ್ಟಿಗಳ ಕಾಳಗ. ಇದರಲ್ಲಿ ಏಟುತಿಂದು ಅಂಗ ಊನಗೊಂಡವರೆಷ್ಟೋ ಮಂದಿ. ರಕ್ತ ಕಾರಿ ಸತ್ತವರೆಷ್ಟೋ ಮಂದಿ. ಸಾಮ್ರಾಟರಿಂದ ಬಹುಮಾನ ಪಡೆಯಲು ಅವರು ಮಲ್ಲಯುದ್ಧದಲ್ಲಿ ಅನೇಕ ಚಮತ್ಕಾರಗಳನ್ನು ಪ್ರದರ್ಶಿಸಿದರು.

ದೀವಟಿಗೆಗಳ ಪ್ರಕಾಶಮಾನವಾದ ಬೆಳಕಿನಲ್ಲಿ ಒಂದೊಂದಾದ ಮೇಲೊಂದರಂತೆ ಅನೇಕ ಮನರಂಜನೆಯ ಪ್ರದರ್ಶನಗಳು ನಡೆದವು. ವೇಷ ಕಟ್ಟುವವರು, ಕತ್ತಿವರಸೆ, ದೊಂಬರಾಟ ಮೊದಲಾದ ಜನಪ್ರಿಯ ಪ್ರದರ್ಶನಗಳೊಂದಿಗೆ ಗೋಲಂದಾಜರು ಮಾಡುವ ಚಮತ್ಕಾರಗಳು, ಬಾಣ ಬಿರುಸುಗಳ ಪ್ರದರ್ಶನಗಳು ನಡೆದು ಜನರು ಬಣ್ಣದ ಹಬ್ಬದಿಂದ ವೈ ಮರೆತರು.

ವಿನೋದಗಳೆಲ್ಲ ಮುಗಿದ ಮೇಲೆ ಪದ್ಧತಿಯಂತೆ ಪಟ್ಟದ ಆನೆ, ಕುದುರೆ, ಹಸು, ಪಟ್ಟದ ಕತ್ತಿ, ಛತ್ರ ಚಾಮರಗಳನ್ನು ಪೂಜಿಸಲಾಯಿತು.

ಜನರು ಹರ್ಷಧ್ವನಿ ಮಾಡಿದರು. ಸೈನಿಕರು ಜಯಘೋಷ ಮಾಡಿ ಶಸ್ತ್ರಾಸ್ತ್ರಗಳನ್ನು ತಮ್ಮ ಒರೆಯಿಂದ ಎಳೆದು ಶಬ್ದಮಾಡಿ ಸಂತೋಷವನ್ನು ವ್ಯಕ್ತಪಡಿಸಿದರು. ಕುದುರೆಗಳು ಕೆನೆದವು. ಆನೆಗಳು ಘೀಂಕರಿಸಿದವು. ಫಿರಂಗಿಗಳು ಹಾರಿದವು. ನೆಲಮುಗಿಲುಗಳು ಒಂದಾದಂತೆ ಗದ್ದಲದಿಂದ ಎಲ್ಲೆಡೆಯೂ ತುಂಬಿಹೋಯಿತು.

ಕೆಲವೇ ನಿಮಿಷಗಳಲ್ಲಿ ರಾಜ ಸಭೆಯಲ್ಲಿ ಮತ್ತೆ ಮೌನ ಆವರಿಸಿತು. ಸಾಮ್ರಾಟ್ ಕೃಷ್ಣದೇವರಾಯನು ಭಾಷಣ ಮಾಡಲು ಎದ್ದು ನಿಂತನು.

ಕೃಷ್ಣದೇವರಾಯನು ಸಾಮಾನ್ಯ ಎತ್ತರದ ಆಳು. ವೀರರಿಗೊಪ್ಪುವ ಸುದೃಢವಾದ ಮೈಕಟ್ಟು, ಎಣ್ಣೆಗೆಂಪಿನ ಬಣ್ಣ. ಮುಖದಲ್ಲಿ ರಾಜಕಳೆ. ಅಲ್ಲಲ್ಲಿ ಅಸ್ಪಷ್ಟವಾದ ಸಿಡುಬಿನ ಕಲೆ. ಅಗಲವಾದ ತುಂಬು ಮುಖದಲ್ಲಿ ತೇಜಃಪುಂಜವಾದ ಕಣ್ಣುಗಳು. ವಿಶಾಲವಾದ ಲಲಾಟ ಪ್ರದೇಶ. ಅವನು ಮಹಾಪುರುಷನೆಂದು ಸಾರಲು ಅವನು ಇಂತ ನಿಲುವೇ ಸಾಕು !

ಜನ ಗದ್ದಲ ಮಾಡದೆ ರಾಯನ ಸಂದೇಶವನ್ನು ಆಲಿಸಿದರು. ಕೃಷ್ಣದೇವರಾಯನು ಗಂಭೀರವಾಗಿ ತನ್ನ ಭಾಷಣಕ್ಕೆ ಆರಂಭಿಸಿದನು. 'ಶ್ರೀ ಭಗವತೀ ಭುವನೇಶ್ವರೀ ಕೃಪಾಪೋಷಿತ, ಶ್ರೀಮದ್ ವಿದ್ಯಾರಣ್ಯ ಮುನೀಂದ್ರ ಸಂಸ್ಥಾಪಿತ, ವಿದ್ಯಾನಗರ ರಾಜಧಾನಿ ರತ್ನ ಸಿಂಹಾಸನದ ಅವಿಚ್ಛಿನ್ನ ಸ್ವಾಮಿನಿಷ್ಠ ಸೇವಕರೇ ಮತ್ತು ಮಹಾಜನರೇ, ವಿಜಯ ದಶಮಿಯ ಈ ಶುಭ ದಿನದಂದು ನಿಮ್ಮೆಲ್ಲರಿಗೆ ಶ್ರೀ ಪಂಪಾಪತಿ ವಿರೂಪಾಕ್ಷ ಸ್ವಾಮಿಯು ಸಕಲ ಸನ್ಮಂಗಳವನ್ನು ಉಂಟು ಮಾಡಲೆಂದು ಪ್ರಾರ್ಥಿಸುತ್ತೇನೆ.

'ನೀವು ತೋರಿಸಿರುವ ರಾಜಭಕ್ತಿಯನ್ನು ಕಂಡು ನನಗೆ ಅಪಾರ ಹರ್ಷವುಂಟಾಗಿದೆ. ನಿಮ್ಮಂತಹ ರಾಜನಿಷ್ಠ ಸೇವಕರನ್ನು ಪಡೆದಿರುವ ನಾನೇ ಧನ್ಯನು ಎಂದು ತಿಳಿದಿದ್ದೇನೆ.

'ಇಂದು ನಾಡಿನ ಮೂಲೆ ಮೂಲೆಗಳಿಂದ ಆಗಮಿಸಿರುವ ನೀವು ಇಲ್ಲಿ ಒಂದು ಮಹತ್ಕಾರ್ಯ ಸಾಧನೆಗಾಗಿ ಸೇರಿದ್ದೀರಿ. ಇಲ್ಲಿ ನಾವು ನಾಲ್ಕನೆಯ ಮಹಾನವಮಿಯ ವಿಜಯೋತ್ಸವವನ್ನು ಆಚರಿಸುತ್ತಿದ್ದೇವೆ. ಈ ನಾಲ್ಕು ವರ್ಷಗಳಲ್ಲಿ ನಾವು ಅನೇಕ ಮಹತ್ಕಾರ್ಯಗಳನ್ನು ಸಾಧಿಸಿದ್ದೇವೆ. ಉತ್ಕಲದ ಸೀಮೆಯನ್ನು ಜಯಿಸಿದ್ದೇವೆ. ದಕ್ಷಿಣಾಪಥವನ್ನು ಗೆದ್ದು ನಮ್ಮ ಅಂಕೆಯಲ್ಲಿ ಇರಿಸಿಕೊಂಡಿದ್ದೇವೆ. ಹಿಂದೆ ನಮ್ಮ ಪೂರ್ವಿಕರ ಕಾಲದಲ್ಲಿ ಕೈಬಿಟ್ಟು ಹೋಗಿದ್ದ ಅನೇಕ ಪ್ರದೇಶಗಳನ್ನು ವಶಮಾಡಿಕೊಂಡು ಸಾಮ್ರಾಜ್ಯದ ಗಡಿಯನ್ನು ಮುಂದೊತ್ತಿದ್ದೇವೆ. ಇಂದು ಪಂಪಾಪತಿಯ ಅನುಗ್ರಹದಿಂದ, ಕೃಷ್ಣೆಯಿಂದ ಕನ್ಯಾಕುಮಾರಿಯವರೆಗೆ ವಿಜಯನಗರ ಸಾಮ್ರಾಜ್ಯವನ್ನು ವಿಸ್ತರಿಸಿದ್ದೇವೆ. ನಾವು ಉತ್ಕಲದ ಅಧಿಪತಿಗಳನ್ನು ಗೆದ್ದು ಸಾಮಂತರನ್ನಾಗಿ ಮಾಡಿಕೊಂಡಿದ್ದೇವೆ, ದಿಟ. ಅನೇಕ ವಿದ್ರೋಹಿಗಳನ್ನು ಸದೆಬಡಿದಿದ್ದೇವೆ; ದಿಟ. ಇಲ್ಲಿಗೇ ನಮ್ಮ ಕಾರ್ಯ ಮುಗಿದಂತೆ ಆಗಲಿಲ್ಲ. ನಾವು

ಇನ್ನೂ ಬಹಮನಿ ಸುಲ್ತಾನರನ್ನು ಸೋಲಿಸಲಿಲ್ಲ ಅವರ ಸೊಕ್ಕನ್ನು ಅಡಗಿಸಲಿಲ್ಲ. ಅವರು ಎಂದಿನಂತೆ ಪ್ರಬಲರಾಗಿದ್ದಾರೆ. ಹಿಂದೆ ಪೂಜ್ಯ ಪಿತಾಮಹರಾದ ಶ್ರೀ ಇಮ್ಮಡಿ ವೀರ ನರಸಿಂಹ ಭೂಭುಜರ ಕಾಲದಲ್ಲಿ ನಮ್ಮದಾಗಿದ್ದು ಕೈಬಿಟ್ಟು ಹೋಗಿರುವ ರಾಯಚೂರು, ಮತ್ತು ಮುದ್ಗಲ್ಲು ಗಳು ಇನ್ನೂ ಬಿಜಾಪುರದ ಸುಲ್ತಾನರ ವಶದಲ್ಲೇ ಇವೆ. ಇವನ್ನು ಗೆದ್ದು ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಬೇಕಾಗಿದೆ. ಕೈಬಿಟ್ಟು ಹೋಗಿದ್ದ ಉದಯಗಿರಿ ಯನ್ನು ಗೆದ್ದಂತೆ, ಇವುಗಳನ್ನೂ ಗೆದ್ದು ಸಾಮ್ರಾಜ್ಯಕ್ಕೆ ಸೇರಿಸಿಕೊಂಡಲ್ಲದೆ ನಾನ್ನ ನರಸಿಂಹ ಭೂಪಾಲರ ಮರಣ ಶಾಸನ ಪೂರ್ತಿಯಾಗದು. ಪೂರ್ವ ಜರ ಆತ್ಮಕ್ಕೆ ಶಾಂತಿ ದೊರೆಯಬೇಕಾದರೆ ನಾವು ಈ ಕೆಲಸಗಳನ್ನು ಮಾಡಲೇಬೇಕಾಗಿದೆ. ಈ ಕೆಲಸದಲ್ಲಿ ನಿಮ್ಮೆಲ್ಲರ ನೆರವು ಸಹಕಾರ ಅತ್ಯ ಗತ್ಯ.

‘ಬಿಜಾಪುರದ ಸುಲ್ತಾನರ ಮೇಲೆ ಯುದ್ಧ ಘೋಷಿಸುವುದೆಂದರೆ ಸುಮ್ಮನಾಗಲಿಲ್ಲ. ನಿಮ್ಮಿಂದ ಎಲ್ಲ ರೀತಿಯ ಬಲಿದಾನ, ತ್ಯಾಗಗಳು ಆಗಬೇಕಾಗಿದೆ. ಬಿಜಾಪುರದ ಸುಲ್ತಾನರು ಸ್ನೇಹವಾಗಿರುವಂತೆ ನಟಿ ಸುತ್ತಾ ನಮ್ಮ ಮೇಲೆ ಬೀಳಲು ಯುದ್ಧಸನ್ನದ್ಧರಾಗುತ್ತಿದ್ದಾರೆ. ಅವರ ಸೈನ್ಯ ನಮ್ಮ ಗಡಿ ಪ್ರಾಂತ್ಯದಲ್ಲಿನ ಊರುಗಳ ಮೇಲೆ ಬಿದ್ದು ಕೊಲೆ ಸುಲಿಗೆ ಗಳನ್ನು ನಡೆಸುತ್ತಿದ್ದಾರೆ. ಅಲ್ಲದೆ ಇಲ್ಲಿನ ರಾಜದ್ರೋಹಿಗಳಿಗೂ, ಕಳ್ಳ ಕಾಕರಿಗೂ ಶಿಕ್ಷಾರ್ಹರಿಗೂ ಅವರು ಆಶ್ರಯವೀಯುತ್ತಿದ್ದಾರೆ. ಇವೆಲ್ಲ ನೋಡುತ್ತ ಕುಳ್ಳಿರಲು ನಾವು ಹೇಡಿಗಳಲ್ಲ. ಶತ್ರು ಬಲಯುತನಾಗುವ ಮೊದಲೇ ನಮ್ಮ ಶಕ್ತಿ ಏನೆಂದು ಅವರಿಗೆ ಪರಿಚಯ ಮಾಡಿಕೊಡಬೇಕು. ಅವರ ಸೊಕ್ಕನ್ನು ಅಡಗಿಸಬೇಕು. ಆದುದರಿಂದ ಎಚ್ಚೆ ಕನ್ನಡನಾಡಿನ ವೀರಪುತ್ರರೇ ಏಳಿ. ಎಚ್ಚರಗೊಳ್ಳಿ! ನಾವು ಹೇಡಿಗಳಲ್ಲ. ರತ್ನಸಿಂಹಾ ಸನದ ರಕ್ಷಣೆಗಾಗಿ, ಗೌರವಕ್ಕಾಗಿ ಕೊನೆಯುಸಿರಿರುವವರೆಗೂ ಹೋರಾಡು ತ್ತೇವೆ. ಸಾಮ್ರಾಜ್ಯಕ್ಕಾದ ಅಪಮಾನವನ್ನು ಸಹಿಸಲಾರೆವು. ಕನ್ನಡ ನಾಡಿನ ವೀರಪುತ್ರರು ರಣಹೇಡಿಗಳಲ್ಲ—ಗಂಡುಗಲಿಗಳು ಎಂಬುದನ್ನು ಆ ಮದೋನ್ಮತ್ತ ಸುಲ್ತಾನರಿಗೆ ತೋರಿಸಿಕೊಡಿ. ಇದೇ ನನ್ನ ಸಂದೇಶ. ಇದರಲ್ಲಿ ಯಶಸ್ಸನ್ನು ಕೊಡಲೆಂದು ಪಂಪಾಪತಿ ವಿರೂಪಾಕ್ಷಸ್ವಾಮಿಯನ್ನು

ಪ್ರಾರ್ಥಿಸೋಣ. ಜೈ ಭುವನೇಶ್ವರಿ !'

ಇಷ್ಟನ್ನು ಹೇಳಿ ರಾಯನು ತನ್ನ ಸಿಂಹಾಸನದಲ್ಲಿ ಮಂಡಿಸಿದನು. ಜನ ಜಯಘೋಷ ಮಾಡಿದರು. ಒಂದು ನಿಮಿಷ ಸಭೆಯಲ್ಲಿ ಮೌನ ಆವರಿಸಿತು. ಅಷ್ಟರಲ್ಲಿ ಎಲ್ಲಿಂದಲೋ ಯಾರೋ ಉಚ್ಚ ಕಂಠದಲ್ಲಿ ಕೂಗಿಕೊಂಡರು.

'ಪ್ರಭು ! ನಮಗೆ ಯುದ್ಧ ಬೇಡ. ನಮಗೆ ಶಾಂತಿ ಬೇಕು, ಶಾಂತಿ!'

ಸಭಾಸದರೆಲ್ಲರೂ ಧ್ವನಿ ಬಂದತ್ತ ಹೊರಳಿ ನೋಡಿದರು. ಮತ್ತೆ ನಾಲ್ಕಾರು ಧ್ವನಿಗಳು ಕೂಗಿಕೊಂಡವು.

'ಪ್ರಭು ! ನಮಗೆ ಯುದ್ಧ ಬೇಡ. ಶಾಂತಿ ಬೇಕು. ನಮಗೆ ಶಾಂತಿ ಬೇಕು !'

ಆಸ್ಥಾನದಿಂದ ನಿರ್ಗಮಿಸುತ್ತಿದ್ದ ಸಾಮ್ರಾಟ್ ಕೃಷ್ಣದೇವರಾಯನ ಕಿವಿಗೂ ಈ ಕೂಗು, ಗದ್ದಲ ಕೇಳಿಸಿತು. 'ಪ್ರಭು ! ನಮಗೆ ಯುದ್ಧ ಬೇಡ, ಶಾಂತಿ ಬೇಕು. ನಮಗೆ ಶಾಂತಿ ಬೇಕು.' ಎನ್ನುವ ಘೋಷಣೆ ಕೇಳಿ ರಾಯನು ಒಮ್ಮೆಲೆ ಚಕಿತನಾಗಿ ಸೆಟೆದು ನಿಂತನು. ಸಾಮ್ರಾಟನ ಸಮ್ಮುಖದಲ್ಲಿ ಸಾಮ್ರಾಟನ ಘೋಷಣೆ ವಿರುದ್ಧ ಯುದ್ಧ ಬೇಡ, ಶಾಂತಿ ಬೇಕು ಎಂದು ಹೇಳುವ ಎದೆಗಾರಿಕೆ ಯಾರಿಗೆ ಇದೆ ಎಂದು ಆಶ್ಚರ್ಯವಾಯಿತು. ರಾಯನು ಹಾಗೆ ನಿಂತು ಗದ್ದಲವಾಗುತ್ತಿದ್ದ ಕಡೆ ದುರುದುರನೆ ನೋಡಿ, ಪ್ರಧಾನ ಅಮಾತ್ಯನಾದ ತಿಮ್ಮರಸನಿಗೆ ಏನನ್ನೋ ಸಂಜ್ಞೆಮಾಡಿದನು.

ತಿಮ್ಮರಸನು ಗದ್ದಲವಾಗುತ್ತಿದ್ದ ಕಡೆ ಧಾವಿಸಿ ಬಂದು ಸಾಮ್ರಾಟರ ವಿರುದ್ಧ ಘೋಷಿಸಿದ ವ್ಯಕ್ತಿ ಯಾರೆಂದು ಶೋಧಿಸತೊಡಗಿದನು. ಸುಮಾರು ಮೂವತ್ತು ವಯಸ್ಸಿನ ಕಾಷಾಯ ವಸ್ತ್ರಧಾರಿಯಾದ ಒಬ್ಬ ಸನ್ಯಾಸಿ ಸಭಾಸದರನ್ನು ತಳ್ಳಿಕೊಂಡು ರಾಯನ ಸಮ್ಮುಖಕ್ಕೆ ಬರಲು ಪ್ರಯತ್ನಿಸುತ್ತಿದ್ದನು. ಅವನನ್ನು ಮುಂಬರಿಯುದಂತೆ ಸಭಾಸದಸ್ಯರೂ, ರಾಯನ ಮೈಗಾವಲಿನ ಪಡೆಯುವರೂ ತಡೆಯುತ್ತಿದ್ದರು. ಆದರೂ ಆ ಸನ್ಯಾಸಿ ಮುಂದುವರೆಯುವುದನ್ನು ನಿಲ್ಲಿಸಲಿಲ್ಲ.

'ಪ್ರಭು ! ನಮಗೆ ಯುದ್ಧ ಬೇಡ. ನಮಗೆ ಶಾಂತಿ ಬೇಕು.' ಎಂದು ಕೂಗುತ್ತಲೇ ಆತನು ಮುಂದುವರೆಯುತ್ತಿದ್ದನು. ಅವನನ್ನು

ನೋಡಿದರೆ ಮೈಮೇಲೆ ಎಚ್ಚರವಿಲ್ಲದವನಂತೆ ಇದ್ದನು. ಆದಷ್ಟು ಬೇಗ ರಾಯನ ಸಮ್ಮುಖಕ್ಕೆ ಬರಬೇಕು. ರಾಯನು ಸಭಾತ್ಯಾಗ ಮಾಡುವ ಮುನ್ನವೇ ತಾನು ಹೇಳಲಿರುವ ಸಂಗತಿಯನ್ನು ತಿಳಿಸಬೇಕು ಎನ್ನುವ ಉತ್ಕಟಾಕಾಂಕ್ಷೆಯುಂವ ಅವನು ಮುನ್ನುಗ್ಗುತ್ತಿರುವಂತೆ ತೋರುತ್ತಿತ್ತು. ಹಿಂಬಾಲಕರಂತೆ ಕಾಣುತ್ತಿದ್ದ ನಾಲ್ಕೈದು ಮಂದಿ ಅವನನ್ನು ಹಿಂಬಾಲಿಸುತ್ತಿದ್ದರು.

ಅಲ್ಲಿಗೆ ತಿಮ್ಮರಸನು ಬರುವ ವೇಳೆಗೆ ಗದ್ದಲ ಕಡಿಮೆಯಾಗಿತ್ತು. ಆ ಸನ್ಯಾಸಿಯನ್ನು ಕೂಗದಂತೆ ಮುಂದುವರಿದು ನುಗ್ಗಿ ಹೋಗದಂತೆ ಮೈಗಾವಲು ಪಡೆಯವರು ತಡೆದಿದ್ದರು. ಅವರು ಆ ಸ್ಥಳದಿಂದ ಅವನನ್ನು ಬೇರೆಡೆಗೆ ಕರೆದೊಯ್ಯುವ ಸಾಹಸದಲ್ಲಿ ತೊಡಗಿದ್ದರು. ಆಗಲೇ ತಿಮ್ಮರಸನು ಅಲ್ಲಿಗೆ ಬಂದುದು.

ತಿಮ್ಮರಸನನ್ನು ನೋಡುತ್ತಲೇ ಸೈನಿಕರು ಆ ಸನ್ಯಾಸಿಯನ್ನು ಅವನ ಎದುರಿಗೆ ತಂದು ನಿಲ್ಲಿಸಿದರು. ತಿಮ್ಮರಸನು ಆ ಸನ್ಯಾಸಿಯನ್ನು ಅಡಿಯಿಂದ ಮುಡಿಯವರೆಗೂ ಸೂಕ್ಷ್ಮವಾಗಿ ಅವಲೋಕಿಸಿದನು.

ಅವನೊಬ್ಬ ವಿರಕ್ತ ಸನ್ಯಾಸಿಯೆಂದು ನೋಡುತ್ತಲೇ ಹೇಳಬಹುದಿತ್ತು. ಅವನ ಕೈಯಲ್ಲಿ ದಂಡ ಕಮಂಡಲವಿತ್ತು. ಕೊರಳಲ್ಲಿ ರುದ್ರಾಕ್ಷಿ ಮಾಲೆಯಿತ್ತು. ಹಣೆಯಲ್ಲಿ ವಿಭೂತಿ ಕಂಗೊಳಿಸುತ್ತಿತ್ತು. ಎಣ್ಣೆಯಿಲ್ಲದ ತಲೆಗೂದಲು ಜಡೆಗಟ್ಟಿತ್ತು. ಆದರೆ ಆ ಮುಖದಲ್ಲಿ ಒಂದು ಬಗೆಯ ಸೌಮ್ಯಕಳೆ ಎದ್ದು ಕಾಣುತ್ತಿತ್ತು. ಸಾಮ್ರಾಟ್ ಕೃಷ್ಣದೇವರಾಯನ ವಿರುದ್ಧ ಶಾಂತಿ ಘೋಷಣೆಯನ್ನು ತುಂಬಿದ ಸಭೆಯಲ್ಲಿ ಹೊರಡಿಸಬೇಕಾದರೆ ಅವನಿಗೆ ಎಷ್ಟು ಧೈರ್ಯವಿರಬೇಕು !

ತಿಮ್ಮರಸನು ತಡಮಾಡದೆ ಆ ಸನ್ಯಾಸಿಯನ್ನು ರಾಯನ ಸಮ್ಮುಖಕ್ಕೆ ಕರೆದುಕೊಂಡು ಹೋದನು.

ಕೃಷ್ಣದೇವರಾಯನು ಕಾಷಾಯ ವಸ್ತ್ರಧಾರಿಯಾದ, ಹರಶಿವನಂತೆ ತೇಜಸ್ವಿಯಾಗಿದ್ದ ಆ ಸನ್ಯಾಸಿಯನ್ನು ವಿಸ್ಮಯದಿಂದ ನೋಡಿದನು. ಅವನ ವಿಷಯದಲ್ಲಿ ರಾಯನಿಗೆ ಗೌರವ ಉಂಟಾಯಿತು. ನೋಡಲು ಸರ್ವಸಂಗ ಪರಿತ್ಯಾಗಿಯಂತೆ ಕಾಣುವ ಈತನೇಕೆ ಇಲ್ಲಿಗೆ ಬಂದಿದ್ದಾನೆ? ಇವನು ವಿಜಯಮಂದಿರದಲ್ಲಿ ಹೇಗೆ ಪ್ರವೇಶ ದೊರಕಿಸಿಕೊಂಡನು? ಕೇವಲ

ಆಧ್ಯಾತ್ಮಿಕ ಚಿಂತೆಯಲ್ಲಿ ತೊಡಗಬೇಕಾಗಿದ್ದ ವ್ಯಕ್ತಿಗೆ ಈ ರಾಜಕೀಯದ ಗೊಡವೆ ಏಕೆ? ಇವನು ಛದ್ಮವೇಷಧಾರಿಯೇ? ಎಂದೆಲ್ಲ ರಾಯನಿಗೆ ಕುತೂಹಲ.

'ನಿಮ್ಮನ್ನು ನೋಡಿದರೆ ವಿರಕ್ತಸನ್ಯಾಸಿಗಳಂತೆ ಕಾಣುತ್ತೀರಿ. ಆದರೆ ನೀವು ರಾಜಕೀಯದಲ್ಲಿ ಆಸಕ್ತಿ ವಹಿಸಿರುವುದನ್ನು ನೋಡಿದರೆ ನಮಗೆ ಕುತೂಹಲವಾಗುತ್ತಿದೆ. ತಾವು ಯಾರು? ತಮ್ಮ ಹೆಸರೇನು? ತಾವು ದಯಮಾಡಿದ ಉದ್ದಿಶ್ಯವೇನು? ಇವುಗಳನ್ನು ನಾವು ಕೇಳಬಹುದೇ?' ಎಂದನು ನಮ್ರನಾಗಿ.

'ಅಗತ್ಯವಾಗಿ ಕೇಳಬಹುದು ಪ್ರಭು! ನಾನೊಬ್ಬ ಮನೆ ಮಠವಿಲ್ಲದ ಸನ್ಯಾಸಿ! ಹೆಸರು? ಶಾಂತಿವಾದಿ. ನನಗೆ ರಾಜಕೀಯದಲ್ಲಿ ಆಸಕ್ತಿಯಿರುವುದನ್ನು ನೋಡಿ ತಮಗೆ ಆಶ್ಚರ್ಯವಾಗುವುದು ಸಹಜ. ನನ್ನ ಆಧ್ಯಾತ್ಮಿಕ ಚಿಂತನೆಯಲ್ಲಿ ದೈವಸಾಕ್ಷಾತ್ಕಾರಕ್ಕಿಂತ ಭವರೋಗಗಳ ನಿರ್ಮೂಲಕ್ಕೆ ಹೆಚ್ಚಿನ ಪ್ರಾಶಸ್ತ್ಯವಿದೆ ಪ್ರಭು! ಅಂತಲೇ ವಿರಾಗಿಯಾದ ನನಗೆ ಮಾನವ ಜೀವನದ ಎಲ್ಲ ಚಟುವಟಿಕೆಗಳಲ್ಲಿಯೂ ಆಸಕ್ತಿಯಿದೆ. ರಾಜಕೀಯವೂ ನನ್ನ ದೃಷ್ಟಿಯಲ್ಲಿ ಆಧ್ಯಾತ್ಮಿಕ ಚಿಂತನೆಯೇ. ಹೀಗಾಗಿ ನಾನು ಇಲ್ಲಿಗೆ ಬರಬೇಕಾಯಿತು.'

'ವಿರಾಗಿಯಾದ ನಿಮಗೆ ಮಾನವ ಜೀವನದ ಎಲ್ಲ ಚಟುವಟಿಕೆಗಳಲ್ಲಿ ಆಸಕ್ತಿ ಇದೆ! ಹಾಗಾದರೆ ನಿಮ್ಮ ಗುರಿ ಏನು?'

'ಮಾನವನ ವ್ಯಕ್ತಿತ್ವದ ವಿಕಾಸಕ್ಕೆ ಶ್ರಮಿಸುವುದೇ ನನ್ನ ಜೀವನದ ಪರಮ ಗುರಿ....ಅವನ ಸ್ವಭಾವದಲ್ಲಿ ಅಸಹಜವಾಗಿ ಬೆರೆತ ಸ್ವಾರ್ಥ, ದ್ವೇಷ, ಅಸಹಿಷ್ಣುತೆ, ಮೊದಲಾದ ಕಳೆಗಳನ್ನು ಕಿತ್ತು ಅವನ ಮೂಲ ಸ್ವಭಾವವಾದ ಶಾಂತಿ, ಸಹನೆ, ತೃಪ್ತಿ, ನಿರ್ಮಲಾಂತಃಕರಣ ಮೊದಲಾದ ಸದ್ಗುಣಗಳು ಬೆಳೆದು ವಿಕಾಸಗೊಳ್ಳುವಂತೆ ಮಾಡುವುದು. ಅಂದರೆ ಸುಖ, ಸಂತೃಪ್ತಿಗಳಿಂದ ಕೂಡಿದ ಆದರ್ಶ ಧರ್ಮರಾಜ್ಯದ ಸಂಸ್ಥಾಪನೆಗಾಗಿ ಕೈಲಾದ ಮಟ್ಟಿಗೆ ಶ್ರಮಿಸುವುದೇ ನನ್ನ ಜೀವನದ ಗುರಿ. ಈ ಜನತಾಸೇವೆಯಲ್ಲಿಯೇ ನನ್ನ ಇಹಪರಗಳ ಮುಕ್ತಿ, ದೈವಸಾಕ್ಷಾತ್ಕಾರ ಅಡಗಿದೆ ಎಂದು ನನ್ನ ನಂಬಿಕೆ. ಅಂತಲೇ ಜನತೆಯ ಪ್ರತಿನಿಧಿಯಾಗಿ ಪ್ರಭುಗಳ ಸಂದೇಶವನ್ನು

ಕೇಳಿ ಕೃತಾರ್ಥನಾಗಲು ಇಲ್ಲಿಗೆ ಬಂದಿದ್ದೆ. ಆದರೆ ಪ್ರಭುಗಳ ಸಂದೇಶ ನನಗೆ ನಿರಾಶೆಯುಂಟುಮಾಡಿತು.'

'ಏಕೆ?'

'ಮಹಾ ಪ್ರಭುಗಳು ಇನ್ನಾದರೂ ಯುದ್ಧವನ್ನು ಸಾಕುಮಾಡಿ ಜನತೆಗೆ ಶಾಂತಿ ನೆಮ್ಮದಿಗಳ ಸಂದೇಶವನ್ನು ದಯಪಾಲಿಸುತ್ತೀರೆಂದು ಭಾವಿಸಿದ್ದೆ. ಆದರೆ ಈಗ ಕೇಳಿ ಬಂದುದು ಯುದ್ಧ ಘೋಷಣೆ.'

'ಹೌದು. ನಮಗೆ ಈಗ ಬೇಕಾಗಿರುವುದು ಯುದ್ಧ. ಅಖಂಡ ದಿಗ್ವಿಜಯ!'

'ದಿಗ್ವಿಜಯ? ಅಖಂಡ ದಿಗ್ವಿಜಯ? ಯಾರ ಮೇಲೆ ಯುದ್ಧ? ಯಾರ ಮೇಲೆ ಅಖಂಡ ದಿಗ್ವಿಜಯ?' ಎಂದು ವಿಕಟವಾಗಿ ಆ ಸನ್ಯಾಸಿ ನಕ್ಕು ಹೇಳಿದ.

'ಮಹಾ ಪ್ರಭುಗಳು ನನ್ನಿಂದ ಅಪರಾಧವಾಗಿದ್ದರೆ ಕ್ಷಮಿಸಬೇಕು. ನನ್ನ ಮಾತುಗಳು ಅರ್ಥಶೂನ್ಯವಾಗಿ ತೋರಬಹುದು. ಆದರೆ ಗಮನವಿಟ್ಟು ಲಾಲಿಸಬೇಕು. ಯುದ್ಧ....? ಯುದ್ಧಕ್ಕಾಗಿ ಪ್ರಭುಗಳು ಹಾತೊರೆಯುತ್ತಿದ್ದೀರಿ. ಯಾವ ವ್ಯಕ್ತಿಯೇ ಆಗಲಿ, ರಾಷ್ಟ್ರವೇ ಆಗಲಿ ಬದುಕುವ ದಾರಿ ಯುದ್ಧವಲ್ಲ ಪ್ರಭು! ದ್ವೇಷ, ಹಗೆತನ ವಿನಾಶದ ದಾರಿ. ಶಾಂತಿ ಸ್ನೇಹಗಳೇ ನಿಜವಾದ ಬದುಕುವ ದಾರಿ. ಯುದ್ಧದಿಂದ ವೈರಿ ನಿರ್ನಾಮವಾಗುತ್ತಾನೆ, ನಿಜ. ಆದರೆ ವೈರತ್ವ ಅಳಿಯುವುದಿಲ್ಲ. ಯುದ್ಧದಿಂದ ಆಗುವ ಹಾನಿ ಎಷ್ಟು? ಎಷ್ಟು ಜನರ ಬಲಿದಾನ? ತಮ್ಮ ಬಂಧು ಬಾಂಧವರನ್ನು ಕಳೆದುಕೊಂಡ ಜನರ ಆರ್ತನಾದವೆಷ್ಟು? ಪ್ರಜೆಗಳ ರಕ್ತದಿಂದ ಸಾಧಿಸುವ ಜಯ ದಿಗ್ವಿಜಯವೇ? ಹಿಂಸೆಯಿಂದ ಪ್ರತಿಹಿಂಸೆ. ಒಂದು ಯುದ್ಧ ಮತ್ತೊಂದು ಯುದ್ಧಕ್ಕೆ ದಾರಿ. ಇದರಿಂದ ಪ್ರಭುಗಳು ಪ್ರಜೆಗಳ ಹಿತರಕ್ಷಣೆಯ ಕಡೆಗೆ ಗಮನವಿತ್ತು ಯುದ್ಧವನ್ನು ಸಾಕುಮಾಡಿ. ಇದೇ ಜನತೆಯ ಆಸೆ. ಆಕಾಂಕ್ಷೆಯಾಗಿದೆ' ಎಂದು ಹೇಳಿ ಮಾತು ನಿಲ್ಲಿಸಿದನು.

ಸನ್ಯಾಸಿಯ ಮಾತು ಕೇಳಿ ಕೃಷ್ಣದೇವರಾಯನಿಗೆ ಒಂದು ಬಗೆಯ ಅಸಮಾಧಾನ ಉಂಟಾಯಿತು. ತಾನು ಬಿಜಾಪುರದ ಸುಲ್ತಾನನ ಮೇಲೆ ಯುದ್ಧ ಸನ್ನಾಹದಲ್ಲಿ ತೊಡಗಿ, ಸಾಮ್ರಾಜ್ಯದ ಮೂಲೆ ಮೂಲೆಗಳಿಂದ ಸೈನ್ಯ ಸಂಗ್ರಹ ಮಾಡಿ, ವಿಜಯ ಯಾತ್ರೆಯ ದಿವ್ಯ ಸಂದೇಶವನ್ನು ನಾಡಿನ

ಜನತೆಗೆ ಕೊಟ್ಟಿರುವಾಗ ಇದನ್ನು ನೆರೆದಿದ್ದ ಆಸ್ಥಾನಿಕರೆಲ್ಲರೂ, ಜಯಕಾರ ದೊಡನೆ ಅದನ್ನು ಸ್ವಾಗತಿಸಿರುವಾಗ ಈ ಸನ್ಯಾಸಿ ನಡುವೆ ಬಂದು, ಶಾಂತಿಯ ಮಾತು ಹೇಳುತ್ತಿರುವನ್ನಲ್ಲಾ ಎಂದು ಅಸಮಾಧಾನಗೊಂಡನು. ಸನ್ಯಾಸಿ ಹೇಳಿದ ಮಾತು ಸತ್ಯವೇ ಆದರೂ, ಸಧ್ಯದ ಪರಿಸ್ಥಿತಿಯಲ್ಲಿ ತಿರಸ್ಕರಣೀಯ ವಾದುದೆಂದೇ ರಾಯನ ಅಭಿಮತ. ಬಹುಮನಿ ಸುಲ್ತಾನರು ಪ್ರಬಲಿಸಿ ತಮ್ಮ ಸಾಮ್ರಾಜ್ಯಕ್ಕೆ ಸದಾ ಶತ್ರುಭಯವನ್ನು ಉಂಟುಮಾಡಿರುವಾಗ ಶಾಂತಿ ದಿನಗಳಾದರೂ ಎಲ್ಲಿ? ಅಲ್ಲದೆ ಸಾಮ್ರಾಜ್ಯಕ್ಕೆ ಸೇರಿದ್ದು ಈಗ ಕೈಬಿಟ್ಟುಹೋಗಿರುವ ರಾಯಚೂರು, ಮತ್ತು ಮುದ್ಗಲ್ಲುಗಳನ್ನು ಮತ್ತೆ ಗೆದ್ದು ಸ್ವಾಧೀನಪಡಿಸಿಕೊಳ್ಳದೆ ಹೋದರೆ ತಮ್ಮ ಪ್ರತಿಷ್ಠೆ ಏನು ಉಳಿದೀತು? ತಮ್ಮ ಸಾಮ್ರಾಜ್ಯ ವಿರುದ್ಧ ಅನೇಕ ವಿದ್ರೋಹದ ಚಳುವಳಿಯಲ್ಲಿ ಭಾಗವ ಹಿಸಿ, ಕೊಲೆ ಸುಲಿಗೆಗಳನ್ನು ಮಾಡಿಸಿ ಕಿರುಕುಳ ಕೊಡುತ್ತಿರುವ ಸುಲ್ತಾ ನರ ಸೊಕ್ಕನ್ನು ಮುರಿಯದೇ ಹೋದರೆ ಅವರು ಸಮಯ ಸಾಧಿಸಿ, ಸಾಮ್ರಾಜ್ಯವನ್ನು ಆಪೋಶನ ತೆಗೆದುಕೊಳ್ಳದೇ ಇರುವರೇ ? ಶತ್ರುಗಳು ಪ್ರಬಲಿಸುವುವಕ್ಕಿಂತ ಮುಂಚೆ ಅವನ್ನು ಸದೆಬಡಿಯುವುದೇ ಯುಕ್ತವಾದ ರಾಜನೀತಿ. ಇಂತಿರುವಲ್ಲಿ ಈ ಸಾಮಾನ್ಯ ಬೈರಾಗಿ ಯುದ್ಧದಿಂದ ಮನ ಸ್ಸನ್ನು ವಿಮುಖಗೊಳಿಸಲು ಬೋಧಿಸುತ್ತಿದ್ದಾನಲ್ಲ! ಇದು ಒಂದು ರೀತಿ ಯಾಗಿ ರಾಜದ್ರೋಹವೇ ಸರಿ. ಶಿಕ್ಷಾರ್ಹವಾದ ಅಪರಾಧವೇ ಸರಿ. ಇವ ನನ್ನು ಸಿಧಾನವಾಗಿ ವಿಚಾರಿಸಬೇಕು. ಇದು ಕೇವಲ ಅವನೊಬ್ಬನ ಅಭಿ ಪ್ರಾಯವೋ, ಜನತೆಯ ಅಭಿಪ್ರಾಯವೋ ಯಾವುದನ್ನೂ ವಿಚಾರಿಸಿ ಶಿಕ್ಷಿಸ ಬೇಕು. ಅಲ್ಲಿಯ ತನಕ ಇವನನ್ನು ಬಂಧನದಲ್ಲಿ ಇಡಬೇಕೆಂದು ರಾಯನು ತಿಮ್ಮರಸನಿಗೆ ಆಜ್ಞಾಪಿಸಿ, ರಾಜಸಭೆಯಿಂದ ಹೊರಟುಹೋದನು.

ರಾಜಾಜ್ಞೆಯಂತೆ ಆ ಸನ್ಯಾಸಿಯನ್ನು ಅವನ ಹಿಂಬಾಲಕರೆಂದು ಕಂಡುಬಂದ ಬೇರೆ ನಾಲ್ಕು ಜನರನ್ನು ಬಂಧಿಸಿ ಸೆರೆಮನೆಗೆ ಒಯ್ಯಲಾ ಯಿತು.

ಇಂದಿನ ಸಭೆಯಲ್ಲಿ ನಡೆದ ಆಕಸ್ಮಿಕ ಸಂಗತಿಯನ್ನೇ ಕುರಿತು ವಿಚಾ ರಣೆ ಮಾಡುತ್ತಾ ಮೌನವಾಗಿ ನೆರೆದಿದ್ದ ಜನ ಮನೆಗಳಿಗೆ ತೆರಳಿದರು. ಕೃಷ್ಣದೇವರಾಯನ ವಿಜಯದಶಮಿಯ ಸಂದೇಶದಿಂದ ಆವರಲ್ಲಿ ಯಾರಿಗೂ

ಸಂತೋಷವುಂಟಾಗಿರಲಿಲ್ಲವೆಂದು ತಿಳಿಸಲು ಅವರ ಮುಖಗಳ ಮೇಲಿದ್ದ ನಿರುತ್ಸಾಹವೇ ಸಾಕು !

## ೨

ಕೃಷ್ಣದೇವರಾಯನು ರಾತ್ರಿಯೆಲ್ಲಾ ಭುವನವಿಜಯದ ಅಂತಃಪುರದಲ್ಲಿ ಹಂಸತೂಲಿಕಾತಲ್ಪದ ಮೇಲೆ ನಿದ್ರೆಯಿಲ್ಲದೆ ಅತ್ತಿಂದಿತ್ತ ಇತ್ತಿಂದತ್ತ ಹೊರಳುತ್ತಲೇ ಇದ್ದನು. ಸೆಜ್ಜೆಯ ದಾಸಿ ಬೆಳಗಿನ ಜಾವದಲ್ಲಿ ವೀಣೆಯ ಮೇಲೆ ಉಪಯರಾಗ ನುಡಿಸಿ ಎಚ್ಚರಿಸಿದಾಗಲೇ ರಾಯನಿಗೆ ಬೆಳಗಾಯಿತೆಂದು ಅರಿವಾದುದು. ರಾಯನು ನಿದ್ರೆಯಿಲ್ಲದ ಕಣ್ಣುಗಳನ್ನು ವಾತಾಯನದತ್ತ ಹೊರಳಿಸಿದನು. ವಾತಾಯನದ ಜಾಲರಿಯು ಓರೆಯಾಗಿದ್ದು ಆದರ ಮೂಲಕ ಬೆಳಗಿನ ಮುಂಬೆಳಕು ಶಯ್ಯಾಗಾರದಲ್ಲಿ ಅಲೆ ಅಲೆಯಾಗಿ ಬೀಳಲಾರಂಭಿಸಿತ್ತು. ರಾಯನು ಆಕಳಿಸುತ್ತಾ ಒಮ್ಮೆ ಮೈಮುರಿದು ಬೆಳಕಿನ ಪ್ರಭೆಯನ್ನು ನೋಡುತ್ತ ಮಲಗಿದನು. ವಾತಾಯನದ ಮೂಲಕ ಅರಮನೆಯ ಹಿಂಭಾಗದ ರಾಜೋದ್ಯಾನ ಕಾಣುತ್ತಿತ್ತು. ಅಲ್ಲಿನ ಹಸಿರು ತರುಲತೆಗಳೂ, ಬೆಳಗಿನ ತಂಗಾಳಿಗೆ ತಲೆದೂಗುತ್ತಿದ್ದವು. ತಿಳಿಗೊಳದ ಮೇಲಿಂದ ಹಾಯ್ದು ಬರುತ್ತಿದ್ದ ತಂಗಾಳಿ ಬಹಳ ಆಹ್ಲಾದಕರವಾಗಿತ್ತು. ಹೊರಗಿನ ಪ್ರಾಣಿಜಗತ್ತಿಗೇ ಬೆಳಗಾಗಿತ್ತು. ಹಕ್ಕಿಗಳ ಚಿಲಿಪಿಲಿ ರವ ಮಧುರವಾಗಿತ್ತು. ಅತ್ತ ಚಂದ್ರಶಾಲೆಯಿಂದ ವೈಣಿಕೆಯ ಕೈಯಲ್ಲಿ ನುಡಿಯುತ್ತಿದ್ದ ವೀಣೆಯ ಉದಯರಾಗದ ನಾದಮಾಧುರ್ಯ ಅಸ್ವಸ್ಥಗೊಂಡಿದ್ದ ರಾಯನ ಮನಸ್ಸಿಗೆ ಎಷ್ಟೋ ಹಿತವನ್ನುಂಟುಮಾಡಿತು. ರಾಯನು ಹಾಗೆಯೇ ದೃಷ್ಟಿಯನ್ನು ಬೇರೆಡೆಗೆ ತಿರುಗಿಸಿದನು.

ರಾಯನ ದೃಷ್ಟಿಯನ್ನು ಗೋಡೆಗಳ ಮೇಲಿದ್ದ ಅನೇಕ ವರ್ಣ ಚಿತ್ರಗಳು ಸೆರೆ ಹಿಡಿದವು. ಅವುಗಳಲ್ಲಿ ಒಂದು ರಾಧಾಕೃಷ್ಣರ ಪ್ರಣಯ ಚಿತ್ರ, ಮತ್ತೊಂದು ಶಿವನನ್ನು ಒಲಿಸಿಕೊಳ್ಳಲು ನೃತ್ಯವಾಡುತ್ತಿರುವ ಪಾರ್ವತಿಯ ಚಿತ್ರ. ಮತ್ತೊಂದೆಡೆಯಲ್ಲಿ ವಿಶ್ವಾಮಿತ್ರನ ತಪಸ್ಸನ್ನು ಭಂಗಗೊಳಿಸಲು ಬಂದ ಮೇನಕೆಯ ಚಿತ್ರ. ಗೋಡೆಗಳಲ್ಲಿ ಪುರಾಣ ಪುರುಷರ ಚಿತ್ರಗಳನ್ನು

ಅದ್ಭುತ ರೀತಿಯಲ್ಲಿ ವೈವಡೆದು ಮೂಡುವಂತೆ ಚಿತ್ರಿಸಿದ್ದರು. ಭಿತ್ತಿಯಲ್ಲಿ ವರ್ಣಶಿಲ್ಪಿಗಳು ಕಡೆದ ಅನೇಕ ಕಲಾಪೂರ್ಣ ಚಿತ್ರಗಳು ಕಂಗೊಳಿಸುತ್ತಿದ್ದವು. ಇಂದು ರಾಯನ ಕಣ್ಣುಗಳು ಇವನ್ನು ನೋಡುತ್ತಿದ್ದರೂ ಮನಸ್ಸು ಮಾತ್ರ ವ್ಯಾಕುಲಗೊಂಡಿತ್ತು. ರಾಯನನ್ನು ರಾತ್ರಿಯೆಲ್ಲಾ ಕಾಡಿದ ಆ ಚಿಂತೆ ಯಾವುದು ?

ಅಂದಿನ ರಾಜಸಭೆಯಲ್ಲಿ ನಡೆದಿದ್ದ ಆಕಸ್ಮಿಕ ಘಟನೆ ರಾಯನ ಮನೋರಂಗದ ಮೇಲೆ ಮತ್ತೆ ಮತ್ತೆ ಕಾಣಿಸಿಕೊಂಡು ಅವನಿಗಿದ್ದ ಸಮರೋತ್ಸಾಹವನ್ನು ತಗ್ಗಿಸಿತ್ತು. ಒಬ್ಬ ಸಾಮಾನ್ಯ ಸನ್ಯಾಸಿ ಹೇಳಿದ್ದ ಮಾತುಗಳು ರಾತ್ರಿಯೆಲ್ಲಾ ನಿದ್ರೆಗೆ ಅವಕಾಶ ಕೊಡದಂತೆ ಕಾಡಿರಬೇಕಾದರೆ ಅವು ರಾಯನ ಮನಸ್ಸಿನ ಮೇಲೆ ಎಂತಹ ಪರಿಣಾಮ ಮಾಡಿರಬೇಕು ?

ಸನ್ಯಾಸಿಯು ತುಂಬಿದ ಸಭೆಯಲ್ಲಿ ಸಾಮ್ರಾಟರ ಸಂದೇಶವನ್ನು ಅವರ ಸಮ್ಮುಖದಲ್ಲೇ ಹೀಯಾಳಿಸಿದ್ದನು ! ಅವನು ಪ್ರಾಣದ ಮೇಲಿನ ಆಸೆಯನ್ನು ತೊರೆದೇ ಬಂದಿರಬೇಕು ! ಈ ಬಗೆಯ ವಿರೋಧವನ್ನು ವ್ಯಕ್ತಪಡಿಸಬೇಕಾದರೆ ಅವನಿಗೆಷ್ಟು ಧೈರ್ಯ ? ಅಥವಾ ಅವನೊಬ್ಬ ಮತಿವಿಕಲ್ಪಗೊಂಡ ತಲೆ ತಿರುಕನೋ ಮೂರ್ಖನೋ ಆಗಿರಬೇಕು ಅವನು!.... ಇಲ್ಲದಿದ್ದರೆ ಸಮ್ರಾಟರ ಸಂದೇಶವನ್ನು ಧಿಕ್ಕರಿಸುವ ಎದೆಗಾರಿಕೆ ಎಲ್ಲಿಯದು ?

ಆದರೆ ಅವನೊಬ್ಬ ವಿರಕ್ತ ಸನ್ಯಾಸಿ. ಯಾವುದನ್ನು ಸತ್ಯವೆಂದು ಬಗೆದಿದ್ದನೊ ಅದನ್ನು ಪ್ರಭುಗಳೆದುರಿಗೆ ಸಾರಲು ಬಂದಿದ್ದನು. ತಾನು ಯಾವುದನ್ನು ಜನತೆಯ ಆಸೆ ಆಕಾಂಕ್ಷೆ ಎಂದು ತಿಳಿದಿದ್ದನೊ ಅದನ್ನು ಪ್ರತಿಧ್ವನಿಗೊಳಿಸಲು ಬಂದಿದ್ದನು. 'ನಮಗೆ ಯುದ್ಧ ಬೇಡ, ಶಾಂತಿ ಬೇಕು. ಯುದ್ಧದಿಂದ ವೈರಿ ನಿರ್ಯಾಣವಾಗುತ್ತದೆ. ಆದರೆ ವೈರ ದಮನವಾಗುವುದಿಲ್ಲ. ಹಿಂಸೆಯಿಂದ ಪ್ರತಿಹಿಂಸೆ ಹುಟ್ಟುವುದೇ ಹೊರತು ಸ್ನೇಹ ಸೌಹಾರ್ದಗಳು ಹುಟ್ಟುವುದಿಲ್ಲ. ಆದ್ದರಿಂದ ಬದುಕುವ ದಾರಿ ಶಾಂತಿಯೇ ಹೊರತು ಯುದ್ಧವಲ್ಲ' ಎಂದು ನಿರ್ಭಯವಾಗಿ ಜೀವದ ಹಂಗು ತೊರೆದು ಆ ಸನ್ಯಾಸಿ ರಾಯನ ಸಮ್ಮುಖದಲ್ಲಿ ಹೇಳಿದ್ದನು. ಇದು ಕೇವಲ ಅನಾಮಧೇಯ ಸನ್ಯಾಸಿಯ ಮಾತಾಗಿರದೆ ಜನತೆಯ ಆಕಾಂಕ್ಷೆಯಾಗಿದ್ದು ಅವರಿಗೆ ಯುದ್ಧ ಬೇಡವಾಗಿದ್ದರೆ ?....

ರಾಯನು ಕ್ಷಣಕಾಲ ಆಲೋಚಿಸಲೂ ಹೆದರಿದನು. ಜನತೆಯ ಆಸೆ ಆಕಾಂಕ್ಷೆಗಳೇನೆಂದು ರಾಯನಿಗೆ ಇದುವರೆಗೂ ತಿಳಿದಿರಲಿಲ್ಲ. ಮಂತ್ರಿ ಪರಿಷತ್ತಿನ ಕೆಲವರು ಶಾಂತಿಪ್ರಿಯರಾಗಿದ್ದರೂ ಬಹು ಮಂದಿ ರಾಯನು ಬಿಜಾಪುರದ ಮೇಲೆ ದಂಡೆತ್ತಿ ಹೋಗುವ ವಿಷಯದಲ್ಲಿ ಉತ್ಸಾಹಶಾಲಿಗಳಾಗಿದ್ದರು. ಆದರೆ ಈ ಬಾರಿ ಸಮರೋತ್ಸಾಹಕ್ಕೂ ಹಿಂದಿನ ಸಮರೋತ್ಸಾಹಕ್ಕೂ ದೊಡ್ಡ ಅಂತರವಿತ್ತು. ಹಿಂದೆ ಕೃಷ್ಣದೇವರಾಯನ ಪ್ರಧಾನ ಅಮಾತ್ಯನಾಗಿದ್ದ ತಿಮ್ಮರಸನು ರಾಯನ ಬಲಗೈಯಾಗಿ ನಿಂತು, ಯುದ್ಧ ಮಾಡಿ ದಿಗ್ವಿಜಯಗಳನ್ನು ಸಂಪಾದಿಸಿ ಕೊಟ್ಟಿದ್ದನು. ಆದರೆ ಈ ಬಾರಿ ತಿಮ್ಮರಸನಿಗೆ ಮೊದಲಿನ ಉತ್ಸಾಹವಿದ್ದಂತೆ ಕಾಣಲಿಲ್ಲ. ಅದನ್ನು ಸೂಕ್ಷ್ಮವಾಗಿ ಅರಿತೇ ರಾಯನು ಅವರ ಅಭಿಪ್ರಾಯವನ್ನು ತೆಗೆದುಕೊಳ್ಳಲು ಹೋಗಿರಲಿಲ್ಲ.

ಇನ್ನು ಸಮರೋತ್ಸಾಹಕ್ಕೆ ಪ್ರೋತ್ಸಾಹ ಕೊಡುತ್ತಿದ್ದವನೆಂದರೆ ರಾಯಸಂ ಕೊಂಡಮರಸಯ್ಯ. ಇವನೂ ತಿಮ್ಮರಸನಂತೆ, ರಾಯನ ಸೈನ್ಯದಲ್ಲಿ ಮಹಾದಂಡನಾಯಕ. ಅವನು ಇಳಿ ವಯಸ್ಸಿನಲ್ಲಿದ್ದರೂ ಅವನಿಗೆ ಯುದ್ಧದ ಹುರುಪು ಕಾವು ಇನ್ನೂ ಆರಿರಲಿಲ್ಲ. ಅವನ ಪ್ರಚೋದನೆ, ಬೆಂಬಲಗಳಿಂದಲೇ ಈ ಬಾರಿ ರಾಯನು ದಂಡಯಾತ್ರೆಯ ಯೋಜನೆಗಳನ್ನು ಸಿದ್ಧಗೊಳಿಸಿದ್ದನು. ಇದನ್ನು ಕಾರ್ಯರೂಪಕ್ಕೆ ತರಲೆಂದೇ ಸಾಮ್ರಾಜದ ಎಲ್ಲ ಕಡೆಯಿಂದ ಸೈನ್ಯ ಸಂಗ್ರಹಣ ಮಾಡಿದನು. ಮಹಾನವಮಿಯ ದಿನವೇ ಬಿಜಾಪುರದ ಸುಲ್ತಾನನ ಮೇಲೆ ಯುದ್ಧ ಘೋಷಣೆಯಾಗಿತ್ತು. ತನ್ನ ಬಹುಕಾಲದ ಆಸೆ ಈಡೇರಿತ್ತೆಂದು ಕೊಂಡಮರಸಯ್ಯನಿಗೆ ಸಂತೋಷ. ಅಷ್ಟೇ ಸಂತೋಷ ರಾಜ ಘೋಷಣೆ ಹೊರಡಿಸುವವರೆಗೂ ರಾಯನಿಗೂ ಇತ್ತು. ಆದರೆ....?

ಈ ಸನ್ಯಾಸಿಯು ವಿದ್ರೋಹಿಗಳು ಬಿಟ್ಟ ಭೂತದಂತೆ ರಾಯನನ್ನು ಕಾಡಿದ್ದನು. ಅವನು ರಾಯನ ಎಲ್ಲ ಉತ್ಸಾಹಕ್ಕೆ ನೀರು ಸುರಿದು ಶಾಂತಿಯ ಮಾತು ಆಡಿದ್ದನು.

ರಾಯನು ರಾತ್ರಿಯೆಲ್ಲ ವಿಚಾರ ಮಂಥನ ನಡೆಸಿದ್ದರೂ ಇನ್ನೂ ಯಾವುದೂ ನಿರ್ಣಯವಾಗಿರಲಿಲ್ಲ.

ಯುದ್ಧದ ಕಷ್ಟವನ್ನು ರಾಯನೂ ಬಲ್ಲವನೇ. ಯುದ್ಧವೆಂದರೆ ಅನೇಕ ಸಹಸ್ರ ಸಂಖ್ಯೆಯಲ್ಲಿ ಸಾಮ್ರಾಜ್ಯದ ವೀರಪುತ್ರರ ಬಲಿದಾನ! ಅನೇಕ ಕಾಲ ದಿಂದ ಸಂಗ್ರಹಿಸಿಟ್ಟ ಬೊಕ್ಕಸದ ಹಣ ವ್ಯಯ! ಎಷ್ಟು ಮಾನಸಿಕ ಯಾತನೆ? ದೈಹಿಕ ಶ್ರಮ? ಯುದ್ಧದಲ್ಲಿ ಜಯವಾದರೆ ಇಷ್ಟೆಲ್ಲಾ ಕಷ್ಟಗಳಿಗೆ ಯೋಗ್ಯ ಪ್ರತಿಫಲ ದೊರೆತಂತೆ! ಒಂದು ವೇಳೆ ಸೋಲಾದರೆ? ಎಷ್ಟು ಅನರ್ಥ! ಸಾಮ್ರಾಟರು ಮಾಡಿದ ಒಂದು ಅವಿಚಾರ ಕೃತ್ಯದಿಂದ ಇಡೀ ಸಾಮ್ರಾಜ್ಯದ ಜನತೆ ಕೊಲೆ ಸುಲಿಗೆಗಳಿಂದ ನರಳುವಂತೆ ಆದರೆ? ಮೇಲಿಂದ ಮೇಲೆ ಯುದ್ಧಗಳನ್ನು ಮಾಡಿ ಸಾಕಷ್ಟು ಯುದ್ಧದ ಸವಿಯುಂಡ ಸೈನಿಕರಿಗಾಗಲೀ, ಜನರಿಗಾಗಲೀ, ಯುದ್ಧ ಒಂದು ಪ್ರಿಯವಾದ ಕಾರ್ಯವಲ್ಲ! ಇಂತಹ ಮನೋಭಾವನೆ ತನ್ನ ಸೈನ್ಯದಲ್ಲಿ, ಬೆಳೆದಿದ್ದರೆ ತನ್ನ ಯುದ್ಧ ಘೋಷಣೆ ಅವರಿಗೆ ಅಪ್ರಿಯವಾರ್ತೆಯೇ ಸರಿ! ಜನತೆಗೆ ಈಗ ಬೇಕಾಗಿರುವುದು ಯಾವುದು? ಯುದ್ಧವೇ? ಶಾಂತಿಯೇ? ರಾಯನು ಯಾವುದನ್ನೂ ನಿರ್ಣಯಿಸಲಾರದೆ ಹೋದನು.

ಆದರೆ ರಾಯನು ಈಗ ಯಾವುದನ್ನಾದರೂ ನಿರ್ಧರಿಸಲೇಬೇಕಾ ಗಿತ್ತು.

ಬಿಜಾಪುರದ ಸುಲ್ತಾನನು ಸಂಧಿಯ ಮಾತು ಹೇಳಿಕೊಂಡೇ ಕಳೆದ ನಾಲ್ಕೈದು ವರ್ಷಗಳಿಂದ, ವಿಜಯನಗರದ ಸಾಮ್ರಾಟನ ವಿರುದ್ಧ ವಿದ್ರೋ ಹದ ಚಳುವಳಿಗೆ ಬೆಂಬಲ ಕೊಡುತ್ತಿದ್ದನು. ಅವನು ಬೇಕೆಂದೇ ಗಡಿ ಪ್ರದೇಶದ ಹಳ್ಳಿಗಳಲ್ಲೂ ಊರುಗಳಲ್ಲೂ ಸೈನಿಕರಿಂದ ಕೊಲೆ ಸುಲಿಗೆಗಳನ್ನು ಮಾಡಿಸಿ ರಾಯನು ತಾನಾಗಿ ಸಂಧಿಯನ್ನು ಮುರಿಯಲು ಪ್ರೇರೇಪಿಸು ತ್ತಿದ್ದನು. ಅಂತಲೇ ಸಮರ ಸನ್ನದ್ಧನಾಗಿ ವಿಜಯನಗರದ ಮೇಲೆ ಬೀಳಲು ಸೂಕ್ತ ಸನ್ನಿವೇಶಕ್ಕಾಗಿ ಎದುರು ನೋಡುತ್ತಿದ್ದನು. ಅದಕ್ಕಾಗಿಯೇ ವಿಜಯನಗರದಿಂದ ಮೋಸ ಮಾಡಿ ತಪ್ಪಿಸಿಕೊಂಡವರಿಗೂ, ಕೊಲೆಸುಲಿಗೆ ಮಾಡಿ ಬಂದವರಿಗೂ ಸುಲ್ತಾನನು ತನ್ನರಾಜ್ಯದಲ್ಲಿ ಆಶ್ರಯ ಕೊಟ್ಟು ರಾಯನು ತಾನಾಗಿ ಯುದ್ಧ ಘೋಷಿಸಲು ಪ್ರೇರಿಸುತ್ತಿದ್ದನು. ಶತ್ರು ಹೀಗೆ ಪ್ರಬಲನಾಗಿ ಕುಳಿತಿರುವಾಗ ಅವನನ್ನು ನಿರ್ಲಕ್ಷಿಸಿದರೆ ಸಾಮ್ರಾಜ್ಯಕ್ಕೆ ಇದರಿಂದ ಎಂದಿದ್ದರೂ ಹಾನಿ. ಆದ್ದರಿಂದ ಶತ್ರು ದುರ್ಬಲನಾಗಿರುವಾಗಲೇ

ಅವನನ್ನು ಸದೆ ಬಡಿದು ವೈರಿ ನಿರ್ಮೂಲ ಮಾಡಬೇಕು. ಹೀಗಿರುವಾಗ ಯುದ್ಧ ಅನಿವಾರ್ಯವೇ....

ಮತ್ತೊಂದು ದೃಷ್ಟಿಯಲ್ಲೂ ಯುದ್ಧ ಅನಿವಾರ್ಯವೇ ಸರಿ. ಬಹಳ ಕಾಲದಿಂದಲೂ ರಾಯಚೂರು ಮತ್ತು ಮುದ್ಗಲ್ಲುಗಳು ವಿಜಯನಗರಕ್ಕೆ ಸೇರಿದ್ದವು. ಇವು ಇಮ್ಮಡಿ ನರಸ ಭೂಪಾಲನ ಕಾಲದಲ್ಲಿ ಅವನ ಕೈ ತಪ್ಪಿಹೋಗಿದ್ದುದು ಇದುವರೆಗೂ ಸುಲ್ತಾನನ ವಶದಲ್ಲೇ ಇತ್ತು. ಇವುಗಳನ್ನು ಏನೇ ಆದರೂ ಸಾಮ್ರಾಜ್ಯಕ್ಕೆ ಮತ್ತೆ ಸೇರಿಸಿ ಕೊಳ್ಳಲೇಬೇಕಾಗಿತ್ತು. ಬಿಜಾಪುರದ ಸುಲ್ತಾನನ ಮೇಲೆ ದಂಡೆತ್ತಿ ಹೋಗದೆ ಈ ದುರ್ಗಗಳು ಸಾಮ್ರಾಜ್ಯಕ್ಕೆ ಸೇರುವುದು ಅಸಂಭವವಾಗಿತ್ತು. ಅಂತಲೇ ಯುದ್ಧ ಅನಿವಾರ್ಯವಾಗಿತ್ತು. ಈ ದೃಷ್ಟಿಯಿಂದಾದರೂ ತಾನು ಬಿಜಾಪುರದ ಮೇಲೆ ದಂಡೆತ್ತಿ ಹೋಗಿ, ಸುಲ್ತಾನನ ಸೊಕ್ಕನ್ನು ಮುರಿಯಬೇಕು ಎಂದು ಯೋಚಿಸಿದ ರಾಯನಿಗೆ ಹೊಸ ಹುರುಪು ಬಂದಂತಾಗಿ ಹಾಸಿಗೆಯಿಂದ ಛಂಗನೆ ಎದ್ದು ಕುಳಿತನು. ಯಾರು ಏನೇ ಹೇಳಲಿ, ಜನತೆಯೇ ವಿರೋಧಿಸಲಿ ಯುದ್ಧವಂತೂ ನಿಶ್ಚಯ. ಯಾರು ಅಡ್ಡ ಬಂದರೂ ನನ್ನ ಸಂಕಲ್ಪವನ್ನು ಮುರಿಯಲಾರೆ ಎಂದು ರಾಯನು ದೃಢ ನಿರ್ಧಾರ ಮಾಡಿದನು.

ಮನಸ್ಸಿನ ದೃಢ ನಿಶ್ಚಯವನ್ನು ಪ್ರತಿ ಬಿಂಬಿಸುವಂತೆ ರಾಯನ ಮೋರೆ ಗಂಭೀರವಾಯಿತು. ಮುಖದಲ್ಲಿ ಕವಿದಿದ್ದ ಮ್ಲಾನತೆಯ ಮುಸುಕು ಹರಿಯಿತು. ಹೃದಯದ ಭಾರ ಇಳಿಯಿತು. ರಾಯನು ತನ್ನ ನಿತ್ಯ ವ್ಯಾಯಾಮವನ್ನು ನೆನೆಸಿಕೊಂಡು ವ್ಯಾಯಾಮ ಶಾಲೆಗೆ ಹೊರಟನು.

ಸಾಮಾನ್ಯವಾಗಿ ರಾಯನು ಉಷಃಕಾಲಕ್ಕೆ ಎದ್ದು ಪ್ರಾತರ್ವಿಧಿಗಳನ್ನು ಮುಗಿಸಿಕೊಂಡು ವ್ಯಾಯಾಮ ಶಾಲೆಗೆ ಹೋಗುತ್ತಿದ್ದನು. ರಾಜಧಾನಿಯಿಂದ ಹೊರಗಿರಬೇಕಾದ ಸಂದರ್ಭಗಳಲ್ಲಿ ಹೊರತು ಉಳಿದೆಲ್ಲ ಕಾಲದಲ್ಲಿ ಹವಮಾನ ಎಂತಹುದೇ ಇರಲಿ, ಎಂತಹ ಪ್ರಸಂಗಗಳೇ ಇರಲಿ ರಾಯನು ವ್ಯಾಯಾಮವನ್ನು ತಪ್ಪಿಸುತ್ತಿರಲಿಲ್ಲ. ಅದು ರಾಯನ ಜೀವನದಲ್ಲಿ ಸಹಜವಾಗಿ ಬೆರೆತು ಬಂದ ಅಭ್ಯಾಸವಾಗಿತ್ತು.

ರಾಯನು ಕಳೆದ ಇಪ್ಪತ್ತು ವರ್ಷಗಳಿಂದ ವ್ಯಾಯಾಮವನ್ನು ತಪ್ಪದೆ ಮಾಡುತ್ತಾ ಬಂದಿದ್ದನು. ಅಂತಲೇ ರಾಯನದು ವಜ್ರದೇಹ; ಹತ್ತು ಆನೆ

ಗಳ ಬಲವಿದೆ ಆದರಲ್ಲಿ ಎಂದು ರಾಯನ ಅಂಗಸಾಧನೆಯ ವೈಖರಿಯನ್ನು ನೋಡಿದವರು ಹೇಳುತ್ತಿದ್ದರು. ಇದರಲ್ಲಿ ಕೊಂಚ ಅತಿಶಯೋಕ್ತಿಯಿದ್ದರೂ ರಾಯನಿಗೆ ತುಂಬ ಶಕ್ತಿಯಿತ್ತೆನ್ನುವುದು ಸುಳ್ಳಲ್ಲ. ಅವನು ಜಗಜಟ್ಟಿಗಳನ್ನು ನಿಮಿಷ ಕಾಲದಲ್ಲಿ ನೆಲಕ್ಕುರುಳಿಸುತ್ತಿದ್ದುದೇ ಸಾಕ್ಷಿ.

ವ್ಯಾಯಾಮ ಶಾಲೆಯಲ್ಲಿ, ಸೂರ್ಯ ನಮಸ್ಕಾರದಿಂದ ಆರಂಭವಾಗುತ್ತಿದ್ದ ಅಂಗ ಸಾಧನೆ ಕ್ರಮವಾಗಿ ಕತ್ತಿವರಸೆ, ಕಬ್ಬಿಣದ ಗದೆಗಳನ್ನು ಎತ್ತಿ ತಿರುಗಿಸುವುದೂ, ಮಲ್ಲಯುದ್ಧ, ಕುದುರೆ ಸವಾರಿಗಳಲ್ಲಿ ಮುಗಿಯುತ್ತಿತ್ತು.

ರಾಯನು ಕತ್ತಿ ಹಿಡಿದು ನಿಂತರೆ ಶತ್ರುಗಳ ಮಾರಣ ಹೋಮವೇ ನಡೆಯುತ್ತಿತ್ತು. ಕತ್ತಿಯನ್ನು ಬೀಸುವುದರಲ್ಲಿ ರಾಯನ ಕೈ ಚಳಕದ ನಿದರ್ಶನಗಳು ಅನೇಕವಿದ್ದವು. ಒಮ್ಮೆ ರಾಯನು ಕೂದಲ ಎಳೆಯನ್ನು ಕತ್ತಿ ಬೀಸಿ ಭೇದಿಸಿದ್ದನಂತೆ! ಮತ್ತೊಮ್ಮೆ ಮೇಲೆ ಬೀಳಲು ಬಂದು ಶತ್ರುವಿನ ತಲೆಯನ್ನು ಕತ್ತರಿಸಿದ ಜಾಣ್ಮೆಗೆ ಕತ್ತರಿಸಿದ ತಲೆ ಮೊದಲಿನಂತೇ ಮುಂಡದ ಮೇಲೆ ಉಳಿದು ಅವನು ಮೊದಲಿನಂತೇ ಕಾಣಿಸುತ್ತಿದ್ದರೂ ಪ್ರಾಣ ಪಕ್ಷಿ ಮಾತ್ರ ಹಾರಿಹೋಗಿತ್ತಂತೆ! ರಾಯನು ಕತ್ತಿಯನ್ನು ತಿರುಗಿಸುತ್ತಿರುವಾಗ, ಎಷ್ಟು ಕಲ್ಲನ್ನು ಎಸೆದರೂ ಅವನಿಗೆ ತಗುಲದೆ ಅದು ನೆಲಕ್ಕೆ ಬೀಳುತ್ತಿತ್ತು. ರಾಯನ ಕತ್ತಿಯ ಕುಶಲತೆಯನ್ನು ಕಂಡು ಶತ್ರುಗಳೇ ಬೆರಗಾಗಿದ್ದರೆಂದ ಮೇಲೆ ಉಳಿದವರ ಪಾಡೇನು?

ಕತ್ತಿವರಸೆಯಾದ ಮೇಲೆ ನಾಲ್ಕು ಮಂದಿ ಎತ್ತಲಾಗದ ಕಬ್ಬಿಣದ ಗದೆಯನ್ನು ಎತ್ತಿ ಗಾಳಿಯಲ್ಲಿ ತಿರುಗಿಸುವುದು. ರಾಯನು ನಿರಾಯಾಸವಾಗಿ ಗದೆಯನ್ನು ಮೇಲಕ್ಕೆತ್ತಿ ಬಿಸುಡುತ್ತಿದ್ದನು.

ಮಲ್ಲಯುದ್ಧದಲ್ಲಿ ರಾಯನನ್ನು ಮೀರಿಸಿದವರು ಬಹಳ ಮಂದಿ ಇರಲಿಲ್ಲ. ರಾಯನು ಮದಗಜಮಲ್ಲನ ಬಳಿ ಮುಷ್ಟಿ ಯುದ್ಧ ಮಲ್ಲಯುದ್ಧಗಳನ್ನು ಶಾಸ್ತ್ರೋಕ್ತವಾಗಿ ಕಲಿತಿದ್ದನು. ಎಂತಹ ಬಲ ಭೀಮನೇ ಆಗಿರಲಿ, ರಾಯನೊಡನೆ ಮಲ್ಲಯುದ್ಧ ಹೂಡಲು ಅವನಿಗೆ ಎಂಟೆದೆ ಬೇಕು.

ಕುದುರೆ ಸವಾರಿಯಲ್ಲಂತೂ ರಾಯನದೇ ವೈಶಿಷ್ಟ್ಯ. ಮೈಗೆಲ್ಲಾ ಹರಳೆಣ್ಣೆ ಲೇಪಿಸಿಕೊಂಡು ಕಡಿವಾಣ ಹಿಡಿದು ಕುದುರೆಯ ಮೇಲೆ ಕುಳಿತನೆಂದರೆ, ಅದು ಆಯಾಸದಿಂದ ಬಳಲಿ ಬಾಯಲ್ಲಿ ನೊರೆ ಬರುವ ತನಕ

ತಾನು ಲೇಪಿಸಿಕೊಂಡ ಎಣ್ಣೆಯಾರುವ ತನಕ ಕುದುರೆ ಸವಾರಿ ಅವ್ಯಾಹತ ವಾಗಿ ನಡೆಯುತ್ತಿತ್ತು. ಇದನ್ನು ನೋಡಿದವರು ರಾಯನನ್ನು ಅಶ್ವವಿದ್ಯೆ ಯಲ್ಲಿ ನಳರಾಜನಿಗೆ ಹೋಲಿಸುತ್ತಿದ್ದರು.

ರಾಯನಿಗೆ ಮೊದಲಿನಿಂದಲೂ ಜಾತ್ಯಶ್ವಗಳನ್ನು ಆರಿಸಿ ತನ್ನ ಸೈನ್ಯ ದಲ್ಲಿಟ್ಟುಕೊಳ್ಳಬೇಕೆಂಬ ಆಸೆ. ಮಹಮದೀಯರಿಗೆ ಸಲ್ಲುತ್ತಿದ್ದ ಅಶ್ವಪತಿ ಗಳೆಂಬ ಬಿರುದನ್ನು ತಾನು ಪಡೆಯಬೇಕೆಂದು ಹಣ ವೆಚ್ಚವಾಗುವುದನ್ನು ಗಮನಿಸದೆ ದೇಶ ದೇಶಗಳಿಂದ ಅಶ್ವಗಳನ್ನು ಕೊಂಡು ತರುತ್ತಿದ್ದನು. ಈ ಕುದುರೆ ವ್ಯಾಪಾರದ ನಿಮಿತ್ತದಿಂದ ವಿದೇಶಿಯರಾದ, ಪೋರ್ಚುಗೀಸರಿಗೆ ವ್ಯಾಪಾರಕ್ಕೆ ಎಲ್ಲ ಅನುಕೂಲವನ್ನು ಕಲ್ಪಿಸಿಕೊಟ್ಟಿದ್ದನು. ಅವರ ಬಂದ ರಾದ ಗೋವೆಯಲ್ಲಿ ಅಶ್ವಶಾಸ್ತ್ರವನ್ನು ತಿಳಿದ ಸಿದ್ದಿಮರ್ಕಾರ್ ಎಂಬುವನನ್ನು ನೇಮಿಸಿದ್ದನು. ಅವನೊಡನೆ ಸಹಸ್ರ, ಸಹಸ್ರ ವರಹಗಳನ್ನು ಕೊಟ್ಟು ವಿದೇಶದಿಂದ ಬಂದ ಎಲ್ಲ ಉತ್ತಮ ಕುದುರೆಗಳನ್ನು ಕೊಂಡುಕೊಳ್ಳುವಂತೆ ಆಜ್ಞಾಪಿಸಿದ್ದನು. ಒಂದು ಮಾತಿನಲ್ಲಿ ಹೇಳುವುದಾದರೆ ರಾಯನಿಗೆ ಉತ್ತಮ ಅಶ್ವಗಳ ಬಗ್ಗೆ ಒಂದುಬಗೆಯ ಹುಚ್ಚು ಹಿಡಿದಿತ್ತೆಂದರೂ ಸಲ್ಲುತ್ತದೆ.

ಕುದುರೆ ಸವಾರಿಯಾದ ಮೇಲೆ ದಣಿದ ದೇಹಕ್ಕೆ ಮದಗಜಮಲ್ಲ ನಿಂದ ಮಾಲೀಸು. ಅನಂತರ ಸ್ನಾನಮಾಡಿ ಶುಚಿರ್ಭೂತನಾಗಿ ಬೆಳಗಿನ ಪೂಜೆ ಮುಗಿಸಿ ಲಘು ಫಲಹಾರಗಳನ್ನು ತೀರಿಸಿಕೊಂಡು ಬೆಳಗಿನ ರಾಜ ಕಾರಣಕ್ಕೆ ದೊರೆ ಮನಸ್ಸು ಕೊಡುತ್ತಿದ್ದನು.

ಇದು ರಾಯನ ದಿನಚರಿಯ ಒಂದು ಪುಟ.

ಇಂದು ರಾಯನು ವ್ಯಾಯಾಮದಲ್ಲಿ ಹೆಚ್ಚು ಭಾಗವಹಿಸದೆ ಕತ್ತಿ ವರಸೆ ಕುದುರೆ ಸವಾರಿಗಳನ್ನು ಮುಗಿಸಿದನು. ಸ್ನಾನ ಪೂಜೆ, ಫಲಹಾರ ಗಳನ್ನು ಮುಗಿಸಿ ರಾಜಕಾರಣಕ್ಕೆ ಸಿದ್ಧನಾಗುವ ವೇಳೆಗೆ ಪ್ರತೀಹಾರಿ ಯೊಬ್ಬನು ಕಾಣಿಸಿಕೊಂಡನು. ಅವನು ಸಾಮ್ರಾಟರ ಘನತೆಗೆ ತಕ್ಕಂತೆ ಅಂಗರೇಖ ಧರಿಸಿ, ಚಿನ್ನದ ಶಂಖ ಮತ್ತು ಚಕ್ರಗಳಿಂದ ಚಿತ್ರಿತವಾದ ಉಷ್ಣೀಷವನ್ನು ಹೊದೆದು, ಕತ್ತಿಯನ್ನು ಒರೆಯಲ್ಲಿ ಸಿಕ್ಕಿಸಿದ್ದನು.

ದೊರೆಯ ಬಳಿಗೆ ಬಂದ ಪ್ರತಿಹಾರಿ ರಾಯನಿಗೆ ನಮಸ್ಕರಿಸಿ ನಮ್ರ ನಾಗಿ ನಿಂತನು.

ರಾಯನು ಕತ್ತೆತ್ತಿ ನೋಡಿ 'ಏನು ಸಮಾಚಾರ' ಎಂದು ಪ್ರತಿಹಾರಿಯನ್ನು ಪ್ರಶ್ನಿಸಿದನು.

'ತಿಮ್ಮರಸರು ಪ್ರಭುಗಳನ್ನು ಕಾಣಲು ಬಂದಿದ್ದಾರೆ.'

'ಎಲ್ಲಿದ್ದಾರೆ?'

'ಚಂದ್ರಶಾಲೆಯಲ್ಲಿ ತಮ್ಮ ಅಪ್ಪಣೆಗಾಗಿ ಕಾಯುತ್ತಿದ್ದಾರೆ.'

'ಬರಹೇಳು.'

ಪ್ರತಿಹಾರಿ ಕಣ್ಮರೆಯಾದ ಕೆಲವು ಹೊತ್ತಿನಲ್ಲಿಯೇ ತಿಮ್ಮರಸನು ಪ್ರಭುಗಳ ಸಮ್ಮುಖದಲ್ಲಿ ಬಂದು ನಿಂತು ನಮಸ್ಕಾರ ಮಾಡಿದನು.

'ಓ ಅಪ್ಪಾಜಿಯವರು! ಇದೇನು ಪ್ರಾತಃಕಾಲದಲ್ಲೇ ಅಪರೂಪವಾಗಿ ದಯಮಾಡಿಸಿದ್ದೀರಿ?'

'ಕೂಡಲೇ ಬರಬೇಕಾಯಿತು ಪ್ರಭು.'

'ಏನು ಅಂತಹ ಮಹತ್ವದ ಸಂಗತಿ?'

'ಮಹತ್ವದ ಸಂಗತಿ ಏನು ಇಲ್ಲ ಪ್ರಭು! ಆದರೂ ಈ ವಿಸ್ಮಯಕರವಾದ ಸಂಗತಿಯನ್ನು ತಮಗೆ ತಿಳಿಸಲು ಬಂದೆ'

'ಏನು ಅಂತಹ ವಿಸ್ಮಯ ಸಂಗತಿ?'

'ಮಹಾಪ್ರಭುಗಳು ಸಿಟ್ಟು ಮಾಡಬಾರದು. ನಿನ್ನಿನ ರಾಜ ಸಭೆಯಲ್ಲಿ ಶಾಂತಿ ಬೇಕೆಂದು ಘೋಷಿಸಿದ ಆ ಸನ್ಯಾಸಿಯನ್ನು ನಾನು ಸೆರೆಮನೆಯಲ್ಲಿಡಲು ತಿಳಿಸಿದ್ದೆ. ಇಂದು ಅವನನ್ನು ವಿಚಾರಣೆಗೆ ಒಳಪಡಿಸಬೇಕಾಗಿತ್ತು. ಆದರೆ ಮುನ್ನವೇ ಅವನು ಸೆರೆಮನೆಯಿಂದ ತಪ್ಪಿಸಿಕೊಂಡು ಹೋದ. ಹೇಗೆ ತಪ್ಪಿಸಿಕೊಂಡನೆಂಬುದು ಯಾರಿಗೂ ತಿಳಿಯದ ವಿಷಯ. ಅವನ ಸಂಗಡಿಗರೆಂದು ತೋರಿದ ಮೂರು ನಾಲ್ಕು ಮಂದಿಗೂ ಆ ಸನ್ಯಾಸಿಯು ಯಾವಾಗ ತಪ್ಪಿಸಿಕೊಂಡನೆಂಬುದು ತಿಳಿಯದಂತೆ! ಅವರೆಲ್ಲರೂ ನಿದ್ರಿಸುತ್ತಿರುವಾಗ ಅವನು ಒಮ್ಮೆಲೆ ಅದೃಶ್ಯನಾದನಂತೆ! ಅವನು ಹಠಯೋಗಿಯಂತೆ. ಅವನು ತಪ್ಪಿಸಿಕೊಂಡಿರುವುದನ್ನು ನೋಡಿದರೆ ಇದೂ ಒಂದು ಪವಾಡದಂತೆ ತೋರುತ್ತದೆ. ಅವನು ಒಂದು ಸಣ್ಣ ಕಾಗದವನ್ನು ಬಿಟ್ಟು ಹೋಗಿದಾನೆ. ಪ್ರಭುಗಳು ಪರಾಮರ್ಶಿಸಬೇಕು.' ಎಂದು ಹೇಳಿ ಪತ್ರವನ್ನು ತೆಗೆದು ರಾಯನ ಕೈಗಿತ್ತನು.

ರಾಯನು ಎಲ್ಲ ಸಂಗತಿಯನ್ನು ಕೇಳಿ ಅವಾಕ್ಕಾದನು. ಪತ್ರದಲ್ಲಿ ಏನು ಮಹತ್ವದ ಸಂಗತಿ ಅಡಗಿದೆ ಎಂದು ತಿಳಿಯಲು ಆತುರದಿಂದ ಓದಲು ಪ್ರಾರಂಭಿಸಿದನು.

'ಸ್ವಸ್ತಿ ಶ್ರೀಮನ್ಮಹಾರಾಜಾಧಿರಾಜ ಶ್ರೀ ಕೃಷ್ಣದೇವರಾಯರ ದಿವ್ಯ ಸನ್ನಿಧಿಯಲ್ಲಿ ಸನ್ಯಾಸಿಯ ಪ್ರಣಾಮಗಳು.

ಮಹಾ ಪ್ರಭುಗಳು ತಿಳಿದೋ ತಿಳಿಯದೆಯೋ ಮಹಾನವಮಿಯ ಶುಭದಿನದಲ್ಲಿ, ಜನತೆಗೆ ಅಭಯದ ಸಂದೇಶ ಕೊಡುವ ಬದಲು ಯುದ್ಧದ ಸಂದೇಶ ಕೊಟ್ಟಿರಿ. ಆದರೆ ಜನತೆಗೆ ಈಗ ಬೇಕಾಗಿರುವುದನ್ನು ಯುದ್ಧವಲ್ಲ, ಶಾಂತಿ.

ಕಳೆದ ಹತ್ತು ವರ್ಷಗಳಿಂದ ನಡೆದ ಅಖಂಡ ವಿಜಯಯಾತ್ರೆಯಿಂದ ಸೈನಿಕರಿಗೂ, ಸಾಮಂತರಿಗೂ, ಎಲ್ಲಕ್ಕಿಂತ ಹೆಚ್ಚಾಗಿ ನಾಡಿನ ಜನತೆಗೂ ಬೇಸರ ಬಂದಿದೆ. ಯುದ್ಧದ ಸಲುವಾಗಿ ರಾಯರ ಬೊಕ್ಕಸ ಬರಿದಾಗಿದೆ. ಇದನ್ನು ತುಂಬಲು ಬಡವರ ಶೋಷಣೆಯಂತೂ ನಡೆದೇ ಇದೆ. ಇಂತಿರುವಲ್ಲಿ ಮಹಾಪ್ರಭುಗಳು ಇನ್ನೂ ಯುದ್ಧದ ಹುರುಪಿನಲ್ಲಿರುವುದನ್ನು ಕಂಡು ನಾಡಿನ ಜನ ತತ್ತರಿಸುತ್ತಿದ್ದಾರೆ. ಪ್ರಭುಗಳು ಜನತೆಯ ಆಸೆ ಆಕಾಂಕ್ಷೆಗಳನ್ನು ಮನಸ್ಸಿಗೆ ತಂದುಕೊಂಡು ಹೆದರಿ ತಲ್ಲಣಗೊಂಡಿರುವ ಜನತೆಗೆ ಅಭಯದ ಸಂದೇಶ ಕೊಡುವಿರೆಂದು ನಂಬಿದ್ದೇನೆ.

ಅಂತಲೇ ಬಹಮನಿ ಸುಲ್ತಾನರೊಂದಿಗೆ ಗೌರವ ಪೂರ್ಣವಾದ ಒಪ್ಪಂದವನ್ನು ಮಾಡಿಕೊಂಡು, ಹಿಂದೂ ಮುಸ್ಲಿಂ ಸಖ್ಯವನ್ನು ಸಾಧಿಸಿ ಭರತಖಂಡಕ್ಕೆ ಆದರ್ಶ ಪ್ರಭುಗಳಾಗಿ ಮೆರೆಯಿರಿ ಎಂದು ಪ್ರಾರ್ಥಿಸುತ್ತೇನೆ.

ಇಂತು,
ವಿರಕ್ತ ಸನ್ಯಾಸಿ.

ಈ ಪತ್ರವನ್ನು ಓದಿಕೊಂಡು ರಾಯನು ಗಂಭೀರವಾಗಿ ಕುಳಿತನು. ತಿಮ್ಮರಸನಿಗೆ ಮಹಾಪ್ರಭುಗಳು ಪತ್ರದ ಸಂಗತಿಗಳನ್ನು ದೀರ್ಘವಾಗಿ ಮನನ ಮಾಡುತ್ತಿರುವರೆಂದೆನಿಸಿತು. ಮಹಾ ಪ್ರಭುಗಳು ಪ್ರಶ್ನಾರ್ಥಕವಾಗಿ ತಿಮ್ಮರಸನ ಕಡೆಗೆ ನೋಡಿದರು.

'ಹೌದು ಪ್ರಭು! ಆ ಸನ್ಯಾಸಿಯು ಬರೆದಿರುವುದರಲ್ಲಿ ಸತ್ಯ ಸಂಗತಿ

ಇದೆ' ಎಂದು ಮೆಲ್ಲನೆ ಹೇಳಿದ.

'ಅಪ್ಪಾಜಿ, ನೀವೂ ಹೀಗೆ ಹೇಳುತ್ತೀರಾ?' ಎಂದು ರಾಯನು ಪ್ರಶ್ನಿಸಿದ.

ಈ ಮಾತಿಗೆ ಬೇರೇನೂ ಹೇಳಲಾರದೆ ತಿಮ್ಮರಸನು ಅರ್ಥವಿಲ್ಲದ ನಗೆ ನಕ್ಕು, ಸುಮ್ಮನೆ ನಿಂತುಕೊಂಡನು.

೩

ಕೃಷ್ಣರಾಯನ ತಂದೆ ಶ್ರೀಮನ್ನರಸರಾಜೇಂದ್ರ ಭೂಪಾಲರು ತೀರಿಕೊಂಡಾಗ . ಕೃಷ್ಣದೇವರಾಯನಿಗೆ ಇನ್ನೂ ಎಳೆಯ ವಯಸ್ಸು. ಅಂತಲೇ ಹಿರಿಯವನಾಗಿದ್ದ ವೀರನರಸಿಂಹನು ಪಟ್ಟಕ್ಕೆ ಬಂದನು. ನರಸರಾಜೇಂದ್ರನಿಗೆ ತನ್ನ ನಂತರ ವೀರನರಸಿಂಹನು ಪಟ್ಟಕ್ಕೆ ಬಂದರೆ ಸಾಮ್ರಾಜ್ಯವು ನಾಶವಾಗಬಹುದೆಂಬ ಹೆದರಿಕೆ ಇತ್ತು. ತನ್ನ ದುರ್ಗುಣಗಳಿಂದ ತಂದೆಯ ನಂಬಿಕೆ ವಿಶ್ವಾಸಗಳನ್ನು ವೀರನರಸಿಂಹನು ಎಂದೋ ಕಳೆದುಕೊಂಡಿದ್ದನು.

ವೀರನರಸಿಂಹನು ಬಾಲ್ಯದಿಂದಲೂ ವಿಲಾಸಿ, ಹೇಡಿ. ರಾಜಕಾರಣಗಳನ್ನು ಯಶಸ್ವಿಯಾಗಿ ನಡೆಸಲು ಅಸಮರ್ಥ. ಅವನ ಕಾಲವೆಲ್ಲ ವಿಷಯಸುಖದಲ್ಲಿ ಕಳೆದುಹೋಗುತ್ತಿತ್ತು. ಇದನ್ನೆಲ್ಲಾ ಅವಲೋಕಿಸುತ್ತಾ ಬಂದಿದ್ದ ನರಸಭೂಪಾಲರಿಗೆ ವೀರನರಸಿಂಹನ ಮೇಲೆ ಅಷ್ಟಾಗಿ ಪ್ರೀತಿಯಿರಲಿಲ್ಲ. ತನ್ನ ಇತರ ಮಕ್ಕಳಾದ ಅಚ್ಯುತ, ರಂಗ ಇವರ ಮೇಲಿದ್ದ ಪ್ರೀತಿಗಿಂತಲೂ ನಾಗಲಾದೇವಿಯಲ್ಲಿ ಹುಟ್ಟಿದ ಕೃಷ್ಣದೇವರಾಯನಲ್ಲಿ ಮೊದಲಿನಿಂದಲೂ ಅತಿಶಯ ಪ್ರೀತಿಯಿದ್ದಿತು. ಬಾಲ್ಯದಿಂದಲೂ ತನ್ನ ಧೈರ್ಯ, ಸಾಹಸ, ಪರಾಕ್ರಮಗಳಿಂದಲೂ, ರಾಜಕೀಯದಲ್ಲಿನ ಆಸಕ್ತಿ, ಉದಾರಾಂತಃಕರಣಗಳಿಂದಲೂ ಕೃಷ್ಣನು ತಂದೆಗೆ ಅಚ್ಚುಮೆಚ್ಚಾಗಿದ್ದನು. ತನ್ನ ನಂತರ ಅವನೇ ಆ ಪಟ್ಟಕ್ಕೆ ಬರಬೇಕೆಂದು ನರಸರಾಜೇಂದ್ರರ ಆಸೆಯಿದ್ದಿತು. ಆದರೆ ಎಲ್ಲರಿಗೂ ಹಿರಿಯನಾದ ವೀರನರಸಿಂಹನು ಬದುಕಿರುವಾಗ ಕೃಷ್ಣದೇವರಾಯನು ಪಟ್ಟಕ್ಕೆ ಬರುವುದು ಅಸಾಧ್ಯವಾಗಿತ್ತು. ಆದರೂ ನರಸರಾಜೇಂದ್ರರು ಸಾಯುವ ಮುನ್ನ ಒಂದು ಅಗ್ನಿಪರೀಕ್ಷೆಯನ್ನು ಒಡ್ಡಿ ಅನಂತರ ತೀರಿ

ಕೊಂಡಿದ್ದರು. ಇದರಲ್ಲಿ ಯಶಸ್ವಿಯಾದವರನ್ನು ಪಟ್ಟಕ್ಕೆ ತರಬೇಕೆಂದು ಅಮಾತ್ಯ ತಿಮ್ಮರಸನಿಂದ ವಚನ ತೆಗೆದುಕೊಂಡು ಅಸುವನ್ನು ನೀಗಿದ್ದರು.

ನರಸರಾಜರು ಒಡ್ಡಿದ್ದ ಅಗ್ನಿ ಪರೀಕ್ಷೆ ಏನೆಂದರೆ ಅವರು ಸಾಯುವಾಗ ಹಾಕಿಕೊಂಡಿದ್ದ ರಾಜಮುದ್ರೆಯ ಉಂಗುರವನ್ನು ಕತ್ತರಿಸದೆ ಬೆರಳಿನಿಂದ ಹೊರತೆಗೆಯುವುದು. ಉಂಗುರದ ಆಕಾರ ತುಂಬ ಕಿರಿದಾಗಿದ್ದು ಅದನ್ನು ಬೆರಳಿನಿಂದ ತೆಗೆಯುವುದು ತುಂಬ ದುಸ್ತರವಾಗಿತ್ತು. ಈ ಪರೀಕ್ಷೆಯಲ್ಲಿ ವೀರನರಸಿಂಹ, ಅಚ್ಯುತ ಮತ್ತು ರಂಗ ಎಲ್ಲರೂ ಸೋತರು. ಮಡಿದು ಕಟ್ಟಿಗೆಯಾಗಿದ್ದ ಅವರ ಬೆರಳಿನಿಂದ ಉಂಗುರವನ್ನು ತೆಗೆಯಲು ಅವರಾರೂ ಸಮರ್ಥರಾಗಲಿಲ್ಲ. ತೈಲ ರಸ ಲೇಪನಗಳಿಂದ ಹೊರಗೆ ಬರುವಂತೆ ಮಾಡಲು ಪ್ರಯತ್ನಿಸಿ ಅವರೆಲ್ಲರೂ ವಿಫಲರಾದರು. ಇದೀಗ ಕೃಷ್ಣದೇವರಾಯನ ಸರದಿ. ರಾಯನು ತಂದೆಯ ಶವದ ಬಳಿ ನಿಂತುಕೊಂಡು ಒಂದು ಕ್ಷಣ ಅವರ ಮುಖವನ್ನು ನೋಡಿದನು. ಅನಂತರ ಒರೆಯಿಂದ ಖಡ್ಗವನ್ನು ಎಳೆದು ಉಂಗುರವಿದ್ದ ಬೆರಳನ್ನು ಕತ್ತರಿಸಿ ಹಾಕಿ ಉಂಗುರವನ್ನು ಹೊರತೆಗೆದು ಮಂತ್ರಿ ತಿಮ್ಮರಸನ ಕೈಗಿತ್ತನು. ಇವನ ಧೈರ್ಯ ಸಾಹಸಗಳನ್ನು ನೋಡಿದ ಮಂತ್ರಿಪರಿಷತ್ತಿನ ಸದಸ್ಯರೆಲ್ಲರಿಗೂ ಅವನು ಆದರ್ಶ ಪ್ರಭುವಾಗಿ ಕಂಡನು. ಈ ಉಂಗುರದ ಪರೀಕ್ಷೆಯಲ್ಲಿ ಕೃಷ್ಣದೇವರಾಯನು ಯಶಸ್ವಿಯಾದರೂ ಅವನಿಗೆ ಸಿಂಹಾಸನ ದೊರೆಯಲಿಲ್ಲ. ಜೇಷ್ಠನಾದ ವೀರನರಸಿಂಹನು ಬಲಪ್ರಯೋಗದಿಂದ ಸಿಂಹಾಸನವನ್ನೇರಿದನು.

ವೀರನರಸಿಂಹನ ಆಳ್ವಿಕೆ ಕೇವಲ ಕೊಂಚಕಾಲ ಮಾತ್ರ ನಡೆಯಿತು. ಈ ಅಲ್ಪಕಾಲದಲ್ಲಿಯೇ ಆಡಳಿತದಲ್ಲಿ ಬಿಗಿತಪ್ಪಿ, ಸಾಮಂತರೂ, ಮಾಂಡಲಿಕರೂ ದಂಗೆಯೆದ್ದು ತಾವು ಸ್ವತಂತ್ರರೆಂದು ಘೋಷಿಸಿದರು. ಶತ್ರುಗಳು ಪ್ರಬಲರಾದರು. ಎಲ್ಲೆಲ್ಲೂ ಅನಾಯಕತೆ ಉಂಟಾಯಿತು. ಇಷ್ಟಾದರೂ ವೀರನರಸಿಂಹನು ವಿಷಯಸುಖಗಳಿಗೆ ತಿಲಾಂಜಲಿಯನ್ನೀಯಲಿಲ್ಲ. ಕಡೆಗೆ ಅವನ ದುರ್ವ್ಯಸನಗಳೇ ಅವನನ್ನು ಬಲಿ ತೆಗೆದುಕೊಂಡುವು. ಅವನುಬೇಗನೆ ಹಾಸಿಗೆ ಹಿಡಿದು ಮಲಗಿದನು. ಮಲಗಿದವನು ಮತ್ತೆ ಏಳಲೇ ಇಲ್ಲ. ಸಾವು ಸನ್ನಿಹಿತವಾಗಿದೆ ಎಂದು ತಿಳಿದು ಬಂದೊಡನೆ ಅವನಿಗೆ ತನ್ನ ಅನಂತರ ಸಿಂಹಾಸನಕ್ಕೆ ಬರುವವರ ಬಗ್ಗೆ ಚಿಂತೆಯುಂಟಾಯಿತು.

ವೀರನರಸಿಂಹನಿಗೆ ವಿರೂಪಾಕ್ಷನೆಂಬ ಆರು ವರ್ಷದ ಮಗನಿದ್ದನು. ತಂದೆಯ ದುರ್ನಡತೆಯ ಪ್ರತೀಕವೆಂಬಂತೆ ಅವನು ದುರ್ಬಲನಾಗಿದ್ದನು. ತನ್ನ ಅನಂತರ ಮಗನಿಗೆ ಸಿಂಹಾಸನ ಸಲ್ಲಬೇಕೆಂದು ವೀರನರಸಿಂಹನ ಆಸೆ. ಆದರೆ ಇದಕ್ಕೆ ಅನೇಕ ಅಡಚಣೆಗಳಿದ್ದವು. ಸೋದರರೆಲ್ಲರಿಗಿಂತ ಪ್ರಬಲನಾದ ಕೃಷ್ಣದೇವರಾಯನೇ ಪಟ್ಟಕ್ಕೆ ಬರಬಹುದೆಂಬ ಅಂಜಿಕೆ ವೀರನರಸಿಂಹನಿಗೆ ಉಂಟಾಯಿತು. ಅದನ್ನು ತಾನು ಬದುಕಿರುವಾಗಲೇ ತೀರಿಸಿ ಮಗನಿಗೆ ಸಿಂಹಾಸನವನ್ನು ಏರಲು ನಿಷ್ಕಂಟಕವಾಗಿ ಮಾಡಲು ನಿರ್ಧರಿಸಿದನು. ಪ್ರಧಾನ ಮಂತ್ರಿ ತಿಮ್ಮರಸನನ್ನು ತನ್ನ ಅಂತರಂಗಕ್ಕೆ ತೆಗೆದುಕೊಂಡು ಕೃಷ್ಣದೇವರಾಯನ ಕಣ್ಣುಗಳನ್ನು ಕಿತ್ತು ತಂದು ತೋರಿಸಲು ಅಪ್ಪಣೆ ಮಾಡಿದನು.

ತಿಮ್ಮರಸನಿಗೆ ಮೊದಲಿನಿಂದಲೂ ಕೃಷ್ಣದೇವರಾಯನಲ್ಲಿ ಅಪಾರ ಪ್ರೀತಿ ವಿಶ್ವಾಸಗಳು ಇದ್ದವು. ಕೃಷ್ಣದೇವರಾಯನು ಈಗ ಇಪ್ಪತ್ತು ಇಪ್ಪತ್ತೆರಡು ವಯಸ್ಸಿನ ಯುವಕ. ವೀರ, ಸಾಹಸಿ. ರಾಜ್ಯಭಾರದಲ್ಲಿ ಬಹಳ ಆಸಕ್ತ. ಇದನ್ನೆಲ್ಲಾ ದೂರದಿಂದ ನೋಡುತ್ತಾ ಬಂದಿದ್ದ ತಿಮ್ಮರಸನಿಗೆ ಕೃಷ್ಣದೇವರಾಯನ ಕಣ್ಣುಗಳನ್ನು ಕೀಳಿಸುವ ವೀರನರಸಿಂಹನ ಹಂಚಿಕೆ ತಿಳಿದು ಬಹಳ ವ್ಯಥೆಯಾಯಿತು. ಇತ್ತ ಪ್ರಭುವಿನ ಆಜ್ಞೆಯಂತೆ ನಡೆದರೆ ನಾಳಿನ ಸಾಮ್ರಾಟನನ್ನು ತಾನಾಗಿ ಕೊಲೆ ಮಾಡಿದಂತೆ. ಪ್ರಭು ಆಜ್ಞೆ ಮೀರಿದರೆ ರಾಜದ್ರೋಹ ಮಾಡಿದಂತೆ. ಈ ಧರ್ಮ ಸಂಕಟದಲ್ಲಿ ದಾರಿಕಾಣದೆ ಮಂತ್ರಿ ಕೊಂಚ ಕಾಲ ವಿಹ್ವಲನಾಗಿ ಕುಳಿತನು. ಕೃಷ್ಣದೇವರಾಯನಂತಹ ಅಪ್ರತಿಮ ವೀರನನ್ನು ಅಂಧನನ್ನಾಗಿ ಮಾಡಲು ಅವನ ಅಂತರಾತ್ಮ ಒಪ್ಪಲಿಲ್ಲ. ಇತ್ತ ಕೃಷ್ಣದೇವರಾಯನು ಕಣ್ಣುಗಳನ್ನು ಕಳೆದುಕೊಳ್ಳಬಾರದು. ಅತ್ತ ವೀರ ನರಸಿಂಹ ಭೂಪಾಲನಿಗೂ ತಮ್ಮ ಆಶಯ ಈಡೇರಿತೆಂದು ತಿಳಿಯಬೇಕು. ಈ ರೀತಿ ಅವನು ಒಂದು ಆಲೋಚನೆ ಮಾಡಿದನು. ಕೃಷ್ಣದೇವರಾಯನನ್ನು ಅಂತರಂಗದಲ್ಲಿ ಕರೆಸಿಕೊಂಡು ರಾಜಾಜ್ಞೆಯನ್ನು ಅರುಹಿದನು. ಇದನ್ನು ಕೇಳುತ್ತಲೇ ರಾಯನು ಗಡ ಗಡ ನಡುಗಿದನು. ದೈನ್ಯವಾಗಿ ತಿಮ್ಮರಸನನ್ನು ನೋಡುತ್ತಾ ಹೇಳಿದ.

'ಅಪ್ಪಾಜಿ, ರಾಜ್ಯಕೋಶಗಳು ದೊರೆಯದೆ ಇದ್ದರೂ ಚಿಂತೆಯಿಲ್ಲ;

ನನ್ನನ್ನು ಅಂಧನನ್ನಾಗಿ ಮಾಡಿ ಸಾಯುವ ತನಕ ನರಳುವಂತೆ ಮಾಡ ಬೇಡಿ. ಪ್ರಭುಗಳಿಗೆ ನಾನು ಬದುಕಿರುವುದರಿಂದ ತಮ್ಮ ಪುತ್ರನಿಗೆ ಸಿಂಹಾ ಸನ ದೊರೆಯಲು ಶಂಕೆಯಾದರೆ, ನಾನು ಸನ್ಯಾಸ ತೆಗೆದುಕೊಂಡು ಇಲ್ಲಿಂದ ಹೊರಟು ಹೋಗುತ್ತೇನೆ.'

ರಾಯನ ಮಾತು ತಿಮ್ಮರಸನ ಅಂತಃಕರಣವನ್ನು ಕಲಕಿತು. ರಾಯನನ್ನು ಸಂತೈಸಿ, ಕೃಷ್ಣದೇವರಾಯನು ಕೆಲವು ಕಾಲ ರಾಜಧಾನಿ ಯನ್ನು ತೊರೆದು ಅಜ್ಞಾತದಲ್ಲಿರಬೇಕೆಂದು ಹೇಳಿದನು. ಅದರಂತೆ ರಾಯನು ರಾಜಧಾನಿಯನ್ನು ಬಿಟ್ಟು ಅಜ್ಞಾತನಾಗಿರಲು ಎಲ್ಲಿಗೋ ಹೊರಟು ಹೋದನು. ಇತ್ತ ತಿಮ್ಮರಸನು ಆಡಿನ ಕಣ್ಣುಗಳನ್ನು ಕೀಳಿಸಿ, ಅವು ಗಳನ್ನು ಚಿನ್ನದ ಸಂಪುಟದಲ್ಲಿ ತೆಗೆದುಕೊಂಡು ಹೋಗಿ ಪ್ರಭುಗಳಾದ ವೀರನರಸಿಂಹ ಭೂಪಾಲನಿಗೆ ತೋರಿಸಿದನು. ಇದರಿಂದ ವೀರನರಸಿಂಹ ನಿಗೆ ಸಂತೋಷವಾಯಿತು.

ಈ ಘಟನೆ ನಡೆದ ಸ್ವಲ್ಪ ಕಾಲದಲ್ಲೇ ವೀರನರಸಿಂಹನು ಅಸುವನ್ನು ನೀಗಿದನು. ಈಗ ತಿಮ್ಮರಸನು ಅಜ್ಞಾತದಲ್ಲಿದ್ದ ರಾಯನನ್ನು ರಾಜ ಧಾನಿಗೆ ಬರಮಾಡಿಕೊಂಡು ರತ್ನಸಿಂಹಾಸನದಲ್ಲಿ ಕೂಡಿಸಿ, ಪಟ್ಟಗಟ್ಟಿ ಸಾಮ್ರಾಟನೆಂದು ಘೋಷಿಸಿದುದಲ್ಲದೆ ತಂದೆಯಾಗಿ, ಗೆಳೆಯನಾಗಿ, ಮಂತ್ರಿ ಯಾಗಿ ನಿಂತು ಸಾಮ್ರಾಜ್ಯವನ್ನು ಪೋಷಿಸಲು ಅವನಿಗೆ ನೆರವಾದನು.

ಅಲ್ಲಿಂದ ತಿಮ್ಮರಸನೆಂದರೆ ರಾಯನಿಗೆ ತಂದೆ—ಪ್ರೀತಿಯ ಅಪ್ಪಾಜಿ. ತಿಮ್ಮರಸನು ಇದೇ ವಿಶ್ವಾಸವನ್ನು ಉಳಿಸಿಕೊಂಡು ಬಂದಿದ್ದನು. ಅವನ ಭಾವನೆಯಲ್ಲಿ ರಾಯನು ಅಭಿಮಾನದ ಪುತ್ರನೇ ಆಗಿದ್ದನು. ತಿಮ್ಮರಸನು ಕೃಷ್ಣದೇವರಾಯ, ಗೋವಿಂದರಾಜನನ್ನು ತನ್ನ ಎರಡು ಕಣ್ಣುಗಳೆಂದೇ ತಿಳಿದಿದ್ದನು. ಇದು ಅಕ್ಷರಶಃ ಸತ್ಯವಾಗಿತ್ತು.

ಸಾಳ್ವ ತಿಮ್ಮರಸನು ಬಾಲ್ಯದಲ್ಲಿ ತುಂಬಾ ಕಷ್ಟವನ್ನು ಅನುಭವಿಸಿ ದ್ದನು. ಅಂತಲೇ ಅವನಿಗೆ ಇನ್ನೊಬ್ಬರ ಕಷ್ಟಗಳು ಸಹಜವಾಗಿಯೇ ಅರಿ ವಾಗುತ್ತಿತ್ತು. ದುಃಖಿಗಳಿಗೂ ದೌರ್ಭಾಗ್ಯರಿಗೂ ನೆರವಾಗಲು ಅವನು ಸದಾ ಸಿದ್ಧನಾಗಿದ್ದನು ಅವನ ಕರುಣಾದ್ರ್ರ ಹೃದಯದ ಪರಿಚಯ ಸಾಮ್ರಾ ಜ್ಯದ ಪ್ರತಿಯೊಬ್ಬ ಪ್ರಜೆಗೂ ಇದ್ದಿತು. ಅವನು ರಾಜನಿಷ್ಠ ಸೇವಕನಾಗಿ

ದಂತೆ ಜನತೆಯ ಸೇವಕನೂ ಆಗಿದ್ದನು. ಅಂತಲೇ ಅವನು ಪ್ರಜಾಕೋಟಿಯ ಅಭಿಮಾನದ ಪ್ರಧಾನ ಅಮಾತ್ಯನಾಗಿದ್ದನು.

ಚಿಕ್ಕಂದಿನಲ್ಲೇ ತಂದೆತಾಯಿಯರನ್ನು ಕಳೆದುಕೊಂಡ ತಿಮ್ಮರಸನಿಗೆ ಸಂಸಾರದ ಭಾರವು ಅತಿ ಚಿಕ್ಕವಯಸ್ಸಿನಲ್ಲೇ ಹೆಗಲಿಗೆ ಬಿತ್ತು. ಅವರದಾಗಿದ್ದ ಹುಲ್ಲು ಜೋಪಡಿಯ ವಿನಾ ಅಂಗೈಯಗಲದ ಭೂಮಿಯೂ ಇರಲಿಲ್ಲ. ತಿಮ್ಮರಸನು ಬ್ರಾಹ್ಮಣನಾದುದರಿಂದ ದೈಹಿಕ ಶ್ರಮ ಅವನಿಂದ ಸಾಧ್ಯವಿಲ್ಲವೆಂದು ಕೂಲಿಗೆ ಅವನನ್ನು ಯಾರೂ ಕರೆಯುತ್ತಿರಲಿಲ್ಲ. ಹೀಗಾಗಿ ಹುಟ್ಟಿದ ಊರಿನಲ್ಲಿ ಒಪ್ಪತ್ತಿನ ಗಂಜಿಯೂ ದೊರೆಯುವುದು ಕಷ್ಟವಾಯಿತು. ಭಿಕ್ಷೆ ಬೇಡಲು ಅವನ ಅಭಿಮಾನ ಅಡ್ಡಬಂತು. ಇದರಿಂದ ಅವನು ಹುಟ್ಟಿದ ಊರನ್ನು ತೊರೆದು ಹೊರಟನು.

ತಮ್ಮಂದಿರೊಂದಿಗೆ ಅಲ್ಲಿ ಇಲ್ಲಿ ಅಲೆಯುತ್ತಾ ತಿರುಪತಿಯನ್ನು ಮುಟ್ಟಿದ ಅವನಿಗೆ ಅಲ್ಲಿ ವೆಂಕಟೇಶನ ಕೃಪೆಯೊ ಎಂಬಂತೆ ಸಮೀಪ ಒಂದು ಹಳ್ಳಿಯಲ್ಲಿ ಜಮೀನುದಾರನ ಬಳಿ ಗೋಪಾಲಕನ ಕೆಲಸ ದೊರೆಯಿತು. ಅವನಿಗೆ ಭಿಕ್ಷೆ ಬೇಡುವ ವೃತ್ತಿಯುಳಿದು ಬೇರೆ ಯಾವ ಕೆಲಸವೂ ಕೀಳಾಗಿ ಕಾಣಲಿಲ್ಲ. ತನಗೆ ಈ ವೃತ್ತಿಯನ್ನು ದೊರಕಿಸಿಕೊಟ್ಟ ದೇವನಿಗೆ ವಂದಿಸಿದನು. ಇದುವರೆಗೆ ತಮ್ಮಂದಿರನ್ನು ಹೇಗೆ ಪೋಷಿಸಬೇಕೆಂದು ಆಲೋಚಿಸುತ್ತಿದ್ದ ಅವನಿಗೆ ಈಗ ನಿಶ್ಚಿಂತೆಯಾಗಿತು.

ತಿಮ್ಮರಸನು ಗೋಪಾಲಕನಾಗಿ ನಿಂತಮೇಲೆ ಅವನ ಭಾಗ್ಯದ ಬಾಗಿಲು ತೆರೆಯಿತೆನ್ನಬೇಕು. ಜಮಿನ್ದಾರರು ಬ್ರಾಹ್ಮಣರು. ನಿಷ್ಠಾವಂತರು. ವೇದಾಂತದಲ್ಲಿ ಪಾಂಡಿತ್ಯ ಪಡೆದವರು. ಅವರು ಆಚಾರಶೀಲರಾಗಿರುವಂತೆ ದಯಾಪರರೂ, ಉದಾರಿಗಳೂ ಆಗಿದ್ದರು. ಅವರ ಮನೆಯಲ್ಲಿ ಧನಧಾನ್ಯ ಸಂಪತ್ತು ತುಂಬಿ ಹರಿಯುತ್ತಿತ್ತು. ಅವರ ಸಹಧರ್ಮಿಣಿಯೂ, ಮಕ್ಕಳೂ ತಂದೆಗೆ ಅನುಕೂಲವಾಗಿದ್ದರು. ಜೀವನದಲ್ಲಿ ತೃಪ್ತಿ ಕಂಡ ಸುಸಂಸ್ಕೃತ ಜೀವಿಗೆ ಪರರ ಸುಖದಲ್ಲಿ, ದುಃಖದಲ್ಲಿ ಭೂತಾನುಕಂಪವಿತ್ತು. ಊರೂರು ಅಲೆಯುತ್ತ ಬಂದ ತಿಮ್ಮರಸನ ಗೋಳಿನ ಕಥೆ ಕೇಳಿ ಅವನನ್ನು ತಮ್ಮ ಮನೆಯಲ್ಲೇ ಇರಲು ಹೇಳಿ ಅವನ ಆಸೆಯಂತೆ ಒಂದು ಗೋಪಾಲಕನ ಕೆಲಸವನ್ನು ಕೊಟ್ಟರು. ತಿಮ್ಮರಸನ ಜಮೀನ್ದಾರರ ಕುಂಟುಂಬಕ್ಕೆ ಸೇರಿದವ

ನಂತೆ ಇದ್ದನು. ಜಮೀನ್ದಾರರ ಪತ್ನಿ ತಿಮ್ಮರಸ ಮತ್ತು ತಮ್ಮಂದಿರ ಹೊಟ್ಟೆ ಬಟ್ಟೆಗಳನ್ನು ನೋಡುತ್ತಾ ಅವನ ತಾಯಿಯ ಸ್ಥಾನವನ್ನು ತುಂಬಿದರು. ಜಮೀನ್ದಾರನು ತಿಮ್ಮರಸನಿಗೆ ಸಕಾಲದಲ್ಲಿ ಉಪನಯನಮಾಡಿ ವೇದಾಧ್ಯಯನ ಮಾಡಿಸಲು ತೊಡಗಿದರು. ಅವನ ಗ್ರಹಣ ಶಕ್ತಿಯನ್ನು ಕಂಡು ಅವರು ಬೆರಗಾಗಿದ್ದರು. ತಿಮ್ಮರಸನು ಅವರು ಹೇಳಿಕೊಟ್ಟ ಪಾಠಗಳನ್ನು ಗೋವುಗಳನ್ನು ಮೇಯಿಸಲು ಹೋದಾಗ ಗಿಡಗಳ ನೆರಳಿನಲ್ಲೋ, ತೊರೆಯ ಬಳಿಯೋ ಕುಳಿತು ಮನನ ಮಾಡುತ್ತಿದ್ದನು. ಹೀಗೆ ಮಾಡುತ್ತಿರುವಾಗ ಅನೇಕ ಸಲ ಆಯಾಸದಿಂದ ಮಲಗಿದುದೂ ಉಂಟು. ಆಗ ಅವನ ಸಂಗಡಿಗರು ಬಂದು ಎಚ್ಚರಗೊಳಿಸಬೇಕಾಗುತ್ತಿತ್ತು.

ಒಮ್ಮೆಯಂತೂ ಹೀಗೆಯೆ ಆಯಿತು. ದನಗಳನ್ನು ಕಾಯಲು ಹೊರಟ ತಿಮ್ಮರಸನು ದನಗಳನ್ನು ಮೇವಿಗೆ ಬಿಟ್ಟು ಅಲ್ಲಿಯೇ ಇದ್ದ ಹೊಂಗೆಯ ಗಿಡದ ಅಡಿಯಲ್ಲಿ ಯೋಚಿಸುತ್ತಾ ಮಲಗಿದನು. ಯಾವಾಗ ನಿದ್ರೆ ಬಂತೊ ಅವನಿಗೇ ತಿಳಿಯದು. ಎಚ್ಚೆತ್ತಾಗ ಒಡೆಯರಾದ ಜಮೀನುದಾರರು ಎದುರಿಗೆ ನಿಂತಿದ್ದರು. ತನ್ನ ತಪ್ಪನ್ನು ಒಪ್ಪಿಕೊಳ್ಳುವಂತೆ ದೀನನಾಗಿ ಅವರ ಕಡೆ ನೋಡುತ್ತಾ ನಿಂತನು. ಅವರು ಓಡಿಬಂದು ಅವನನ್ನು ತಬ್ಬಿಕೊಂಡು 'ಮಗು ! ನೀನು ಸಾಮಾನ್ಯನಲ್ಲ, ನೀನೊಬ್ಬ ಮಹಾಪುರುಷನಾಗಿರುವೆ ! ನಿನ್ನಿಂದ ಲೋಕಕ್ಕೆ ಅನೇಕ ಮಹಾತ್ಕಾರ್ಯಗಳು ನಡೆಯುತ್ತವೆ' ಇಂದಿನಿಂದ ನೀನು ಸಾಮಾನ್ಯ ಗೋಪಾಲಕನಲ್ಲ, ಲೋಕವನ್ನು ಆಳಲು ಬಂದ ಮಹಾ ಸಾಮ್ರಾಟ' ಎಂದು ಬಡ ಬಡಿಸಿದರು. ಅವರು ಹೇಳಿದ ಒಂದು ಮಾತೂ ತಿಮ್ಮರಸನಿಗೆ ಅರ್ಥವಾಗಲಿಲ್ಲ. ತಪ್ಪು ಮಾಡಿದ ತನ್ನ ಮೇಲೆ ಪ್ರೀತಿಯ ಮಳೆಗರೆಯುತ್ತಿರುವ ಅವರನ್ನು ಕಂಡು ಬಾಲಕನಿಗೆ ಆಶ್ಚರ್ಯವಾಯಿತು.

ಜಮೀನುದಾರರು ಅವನನ್ನು ಅಲ್ಲೇ ಬಿಡದೆ ಮನೆಗೆ ಕರೆದೊಯ್ದರು. ತಮ್ಮ ಪತ್ನಿಯೊಡನೆ ನಡೆದ ಸಂಗತಿಯನ್ನು ಹೇಳುವ ಆತುರದಿಂದ ಬೇಗ ಬೇಗನೆ ಹೆಜ್ಜೆ ಹಾಕಿದರು. ಅವರ ಬಹಳ ದಿನಗಳ ಆಸೆ ಫಲಿಸಿತೆಂಬಂತೆ ಅವರಿಗೆ ಆದಿಶೇಷನ ದರ್ಶನವಾಗಿತ್ತು. ಇದಕ್ಕೆ ಕಾರಣನಾದ ತಿಮ್ಮರಸನ ವಿಷಯದಲ್ಲಿ ಅವರಿಗೆ ಪೂಜ್ಯತೆ ಉಂಟಾಗಿತ್ತು.

ನಡೆದ ಸಂಗತಿ ಏನೆಂದರೆ, ತಿಮ್ಮರಸನು ದನಗಳನ್ನು ಮೇವಿಗೆ ಬಿಟ್ಟು ಮರದ ನೆರಳಿನಲ್ಲಿ ಮಲಗಿದ್ದನು. ಅವನು ಮೇಯಲು ಬಿಟ್ಟ ಹಸುವೊಂದು ಅಲ್ಲಿ ಇಲ್ಲಿ ಹೋಗಿ ಮತ್ತೆ ಮನೆಗೇ ಹಿಂದಿರುಗಿ ಬಂದಿತ್ತು. ಒಮ್ಮೆಲೇ ಮನೆಗೆ ಹಿಂದಿರುಗಿದ ಆಕಳನ್ನು ನೋಡಿ, ಜಮೀನುದಾರರಿಗೆ ಅಚ್ಚರಿಯಾಗಿ ಅದನ್ನು ಹೊಡೆದುಕೊಂಡು ಹೋದ ತಿಮ್ಮರಸನನ್ನು ಹುಡುಕಿಕೊಂಡು ಹೊರಟರು ಬಂದು ನೋಡುತ್ತಾರೆ! ತಿಮ್ಮರಸನು ಹೊಂಗೆಯ ನೆರಳಿನಲ್ಲಿ ಪ್ರಶಾಂತವಾಗಿ ನಿದ್ರಿಸುತ್ತಿದ್ದಾನೆ. ಅವನ ತಲೆಯ ಬಳಿಯಲ್ಲಿ ಗಿಡದ ಎಲೆಗಳ ಮೂಲಕ ಹರಿದು ಬಂದಿದ್ದ ಅಂಗೈಯಲಗದ ಒಂದು ನಾಗರಹಾವು ಬಿಸಿಲಿನಿಂದ ಅವನ ನಿದ್ರೆಗೆ ಭಂಗ ಬರುವುದೊ ಎಂದು ಹೆಡೆಯೆತ್ತಿ ಬಿಸಿಲು ಅವನಿಗೆ ಬೀಳದಂತೆ ತಡೆದು ನೆರಳನ್ನುಂಟುಮಾಡಿತ್ತು. ವಿಷಜಂತುವೆಂದು ಖ್ಯಾತಿ ಪಡೆದಿರುವ ನಾಗರ ಹಾವು ಹೆಡೆ ಬಿಚ್ಚಿ ಒಬ್ಬ ಸಾಮಾನ್ಯ ಬ್ರಾಹ್ಮಣ ಹುಡುಗನಿಗೆ ನೆರಳುಂಟುಮಾಡಿರುವ ಅದ್ಭುತ ದೃಶ್ಯವನ್ನು ನೋಡಿ ಅವರಿಗೆ ಗಾಬರಿ, ವಿಸ್ಮಯಗಳು ಏಕಕಾಲದಲ್ಲುಂಟಾದುವು. ಜಮೀನ್ದಾರರು ಕಣ್ಣಿಗೆ ಬಿದ್ದೊಡನೆ ಹಾವು ಸರಸರನೆ ಹೋಗಿ ದೂರದ ಹುತ್ತದಲ್ಲಿ ಮಾಯವಾಯಿತು ! ಬಿಸಿಲುಕೋಲಿನಿಂದ ತಿಮ್ಮರಸನಿಗೆ ಎಚ್ಚರವಾಗಿ ಕಣ್ಣು ಬಿಟ್ಟು ನೋಡಿದರೆ ಎದುರಿಗೆ ತನ್ನ ಧಣಿ ! ಎಲ್ಲ ಸಂಗತಿಯನ್ನು ಕೇಳಿ ತಿಳಿದ ಮೇಲೆ ಅವರ ಮಾತನ್ನು ಅವನಿಗೇ ನಂಬಲಾಗಲಿಲ್ಲ. ದೈವ ತನ್ನ ಮೂಲಕ ಯಾವ ಮಹಾತ್ಕಾರ್ಯವನ್ನು ಸಾಧಿಸಬೇಕೆಂದು ನಿಶ್ಚಯಿಸಿದೆಯೋ ಎಂದು ತಿಮ್ಮರಸನು ಅಂತರ್ಮುಖಿಯಾದನು.

ಈ ಸುದ್ದಿಯನ್ನು ಜಮೀನ್ದಾರರ ಪತ್ನಿ ತಿಳಿದು ತಿಮ್ಮರಸನನ್ನು ದೇವದೂತನೆಂದು ಬಗೆದಳು. ಅಂದಿನಿಂದ ತಿಮ್ಮರಸನ ಅಗ್ರಹವನ್ನು ನೋಡದೆ ಅವನನ್ನು ಮನೆಯಲ್ಲೇ ಉಳಿಸಿಕೊಂಡರು. ಇವನು ಯಾವುದೋ ಉತ್ತಮ ಬ್ರಾಹ್ಮಣ ವಂಶದಲ್ಲಿ ಹುಟ್ಟಿರಬೇಕೆಂದು ಅವನ ಗ್ರಹಣ ಶಕ್ತಿಯನ್ನೂ ಮೇಧಾಶಕ್ತಿಯನ್ನೂ ನೋಡಿ ಊಹಿಸಿ ಅವನ ಕುಲಗೋತ್ರಗಳನ್ನು ವಿಚಾರಿಸಿ ಆ ಬಗ್ಗೆ ಶೋಧನೆ ನಡೆಸಿದರು.

ಅವರ ಶೋಧನೆ ಫಲಕಾರಿಯಾಯಿತು.

ತಿಮ್ಮರಸನು ತಂದೆ ಮುತ್ತಾತಂದಿರ ಕಾಲಕ್ಕೆ ವೇದವೇದಾಂಗಗಳಲ್ಲಿ

ಪಾರಂಗತರಾಗಿದ್ದ ಶ್ರೋತ್ರಿಯರ ವಂಶದಲ್ಲಿ ಹುಟ್ಟಿದ್ದನು. ಅವನ ತಂದೆಯ ಕಾಲದಲ್ಲಿ ಲೌಕಿಕ ಜೀವನದಲ್ಲಿ ವೇದಾಂತದರ್ಶನಗಳಿಗೆ ಬೆಲೆಯಿಲ್ಲದೆ ಹೋಗಿ ತಿಮ್ಮರಸ ಹಾಗೂ ಅವನ ತಮ್ಮಂದಿರು ಬಡತನದ ಬವಣೆಯನ್ನು ಅನುಭವಿಸಬೇಕಾಯಿತು. ಇದು ಒಂದು ರೀತಿಯಾಗಿ ಶಾಪವೇ ಆಗಿತ್ತು. ತಮ್ಮ ಆಚಾರವನ್ನು ಶ್ರದ್ಧಾ ಭಕ್ತಿಗಳಿಂದ ಕಾಪಾಡಿಕೊಂಡು ಬಂದಿದ್ದ ಇನ್ನೊಂದು ಶಾಖೆಯವರು ಇನ್ನೂ ಊರ್ಜಿತ ಸ್ಥಿತಿಯಲ್ಲಿದ್ದರು. ಅವರಲ್ಲಿ ಗಂಗಾಮಾತ್ಯರೆಂಬುವರು ವೇದಾಂತ ಮೊದಲಾದ ಚತುರ್ದರ್ಶನಗಳಲ್ಲಿ ಪಾರಂಗತರಾಗಿ, ಒಳ್ಳೆಯ ಶ್ರೋತ್ರಿಯರಾಗಿ, ಆಚಾರ ಶೀಲರಾಗಿ, ವಿಜಯ ನಗರದ, ಸಾಳ್ವನರಸಿಂಹನ ಆಸ್ಥಾನದಲ್ಲಿ ವಿದ್ವನ್ಮಣಿಗಳಾಗಿದ್ದರು. ಅವರು ತಿಮ್ಮರಸನಿಗೆ ದೂರದ ಸಂಬಂಧಿಯಾಗಬೇಕೆಂದು ಹೇಗೋ ಪತ್ತೆ ಮಾಡಿ ತಾವೇ ತಿಮ್ಮರಸನನ್ನೂ ಅವನ ತಮ್ಮಂದಿರನ್ನೂ ಕರೆದುಕೊಂಡು ಹೋಗಿ ಗಂಗಾಮಾತ್ಯರ ಬಳಿ ಬಿಟ್ಟು ಬಂದರು.

ಗಂಗಾಮಾತ್ಯರಂತಹ ಉತ್ತಮ ಗುರುಗಳ ಆಶ್ರಯ ತಿಮ್ಮರಸನಿಗೆ ದೊರೆತ ಮೇಲೆ ಕೇಳುವುದೇನು ? ತಿಮ್ಮರಸನು ಬಹು ಬೇಗ ಸಂಸ್ಕೃತ, ತೆಲುಗು. ಕನ್ನಡ ಭಾಷೆಗಳಲ್ಲಿ ಪಾರಂಗತನಾದನು. ಗಂಗಾಮಾತ್ಯರು ಆಸ್ಥಾನದಲ್ಲಿ ಮನ್ನಣೆ ಪಡೆದವರು. ತಿಮ್ಮರಸನು ತನ್ನ ಗುರುಗಳ ಸಂಗಡ ಆಗಾಗ್ಗೆ ಅರಮನೆಗೂ ಹೋಗಿ ಬರುತ್ತಿದ್ದುದರಿಂದ ಪ್ರಭುಗಳ ದೃಷ್ಟಿಗೆ ಇವನ ಬುದ್ಧಿಕೌಶಲ, ಪಾಂಡಿತ್ಯ, ಬಿದ್ದು ಅವನಿಗೆ, ಅರಮನೆಯಲ್ಲಿ ಒಂದು ಉದ್ಯೋಗ ದೊರೆಯಿತು. ಲೌಕಿಕ ವ್ಯಾಪಾರದಲ್ಲಿ ಕುಶಲಿಯಾದ ತಿಮ್ಮ ರಸನು ಬಹು ಬೇಗನೆ ಸ್ವಶಕ್ತಿ, ಸಾಮರ್ಥ್ಯಗಳಿಂದ ಪ್ರಭುಗಳ ಸೇವೆಯಲ್ಲಿ ಹಂತ ಹಂತವಾಗಿ ಮೇಲೇರುತ್ತಾ ಬಂದು ಅವನಿಗೂ ಸಚಿವ ಪರಿಷತ್ತಿನಲ್ಲಿ ಸ್ಥಾನ ದೊರೆಯುವಂತೆ ಆಯಿತು. ಅನಂತರ ಕುಶಾಗ್ರಮತಿಯೂ, ರಾಜ ತಂತ್ರ ನಿಪುಣನೂ ಆದ ಅವನು ಕಡೆಗೆ ಪ್ರಧಾನ ಅಮಾತ್ಯ ಪದವಿಗೇರಿ ಕಳೆದ ನಾಲ್ವತ್ತು ವರ್ಷಗಳಿಂದ ಸಾಮ್ರಾಜ್ಯಕ್ಕೆ ಸೇವೆ ಸಲ್ಲಿಸಿದ್ದನು.

ಇಂತಹ ತಿಮ್ಮರಸನು ತನ್ನ ಎಲ್ಲ ದಿಗ್ವಿಜಯಗಳಿಗೂ ಬಲಭುಜವಾಗಿ ನಿಂತು ಹೋರಾಡಿದ್ದವನು ಇಂದು ಸಾಧಾರಣ ಸಂನ್ಯಾಸಿಯ ಮಾತನ್ನು ಅನುಮೋದಿಸುತ್ತಿರುವನಲ್ಲಾ ಎಂದು ರಾಯನಿಗೆ ಅಚ್ಚರಿಯಾಯಿತು.

ಪ್ರಧಾನ ಅಮಾತ್ಯನೇ ಹೀಗೆ ಯುದ್ಧದ ವಿಷಯದಲ್ಲಿ ನಿರುತ್ಸಾಹ ತೋರಿದರೆ ಮುಂದೇನು ಗತಿ ? ಎಂದು ರಾಯನು ತನ್ನ ಯುದ್ಧ ನಿರ್ಧಾರವನ್ನು ಮತ್ತೆ ಶಂಕಿಸುವಂತೆ ಆಯಿತು. ಇದೇ ವೇಳೆಗೆ ಪ್ರತೀಹಾರಿಯೊಬ್ಬನು ಕಾಣಿಸಿಕೊಂಡು ಗೋವೆಯಿಂದ ಒಬ್ಬ ದೂತನು ಬಂದು ರಾಯನ ದರ್ಶನಕ್ಕೆ ಕಾದಿರುವನೆಂದು ಅರಿಕೆ ಮಾಡಿದನು. ರಾಯನು ಅವನನ್ನು ಎದುರುಗೊಳ್ಳಲು ಸಿದ್ಧನಾಗಲು ತಿಮ್ಮರಸನು ಅಲ್ಲಿಂದ ಹೊರಡಲು ನಿಂತಾಗ ಪ್ರಭುಗಳೇ ತಿಮ್ಮರಸನನ್ನು ಅಲ್ಲಿರಲು ಪ್ರಾರ್ಥಿಸಿದರು.

ತಿಮ್ಮರಸನು ನಿರುತ್ತರನಾಗಿ ವಿಗ್ರಹದಂತೆ ಕುಳಿತನು.

೪

'ಪ್ರಭು! ತುಂಬಾ ಅನ್ಯಾಯವಾಯಿತು. ತುಂಬಾ ಅನ್ಯಾಯವಾಯಿತು. ತಾವು ನಂಬಿಕೆಯ ಸ್ನೇಹಿತನೆಂದು ತಿಳಿದಿದ್ದ ಸಿದ್ಧಿಮರ್ಕಾರನು ಪ್ರಭುಗಳಿಗೆ ದ್ರೋಹ ಬಗೆದಿದ್ದಾನೆ! ಪ್ರಭುಗಳಿಗೆ ಮೋಸ ಮಾಡಿ ತಪ್ಪಿಸಿಕೊಂಡಿದ್ದಾನೆ.' ಎಂದು ಒಂದೇ ಸಮನೆ ಉಸುರಿದ ಗೋವೆಯಿಂದ ಬಂದಿದ್ದ ಆ ದೂತ.

'ಏನು ಸಂಗತಿ, ವಿವರವಾಗಿ ಹೇಳಬಾರದೇ?' ಎಂದು ಉದ್ವೇಗವನ್ನು ತಡೆಯಲಾರದೆ ರಾಯನು ಪ್ರಶ್ನಿಸಿದ.

ಗೋವೆಯಿಂದ ಬಂದಿದ್ದ ಆ ದೂತ ಎಲ್ಲ ವಿಷಯಗಳನ್ನು ಸವಿಸ್ತಾರವಾಗಿ ತಿಳಿಸಿದ ಮೇಲೆ ರಾಯನಿಂದ ನಿಟ್ಟುಸಿರೊಂದು ಹೊರಬಿತ್ತು.

'ಸ್ನೇಹಿತನೆಂದು ತಿಳಿದು ಅವನನ್ನು ನಾನು ನಂಬಿದೆ, ಆದರೆ ಅವನು ದ್ರೋಹ ಮಾಡುವನೆಂದು ನಾನು ತಿಳಿದಿರಲಿಲ್ಲ.' ಎಂದು ಖಿನ್ನನಾಗಿ ನುಡಿದನು ಕೃಷ್ಣದೇವರಾಯ.

ರಾಯನಿಗೆ ತನ್ನ ಹಾಗೂ ಸಿದ್ಧಿಮರ್ಕಾರನ ಎಲ್ಲ ಸಂಬಂಧ ಕಣ್ಣೆದುರಿಗೆ ನಿಂತಹಾಗಾಯಿತು.

ಸಿದ್ಧಿಮರ್ಕಾರನು ವಿಜಯನಗರದ ಒಬ್ಬ ಗಣ್ಯ ವರ್ತಕ. ಅವನು

ನಂಬಿಕೆಯ ಅಶ್ವವ್ಯಾಪಾರಿಯಾಗಿ ರಾಜನಿಷ್ಠ ಸೇವಕನಾಗಿದ್ದನು. ರಾಯನ ಮತ್ತು ಸಿದ್ಧಿಯ ಪರಿಚಯ ಅನೇಕ ದಿನಗಳದ್ದು. ಅವನ ನಯವಾದ ನಡ ವಳಿಕೆ ಇನ್ನೊಬ್ಬರಿಗೆ ನೋವುಂಟುಮಾಡದ ಮಾತುಗಾರಿಕೆ ಎಂತಹವರನ್ನೂ ಮುಗ್ಧಗೊಳಿಸುತ್ತಿತ್ತು. ಅವನು ಹತ್ತು ಮಾರು ದೂರದಿಂದಲೇ ಕುದು ರೆಯ, ವಯಸ್ಸು, ಜಾತಿ, ಅದರ ಶಕ್ತಿ ಎಲ್ಲವನ್ನೂ ಊಹಿಸುತ್ತಿದ್ದ. ಆ ಊಹೆ ಗಳಿಗೂ ವಾಸ್ತವಾಂಶಕ್ಕೂ ಹೆಚ್ಚಿನ ಅಂತರವಿರುತ್ತಿರಲಿಲ್ಲ. ಅವನ ಅಶ್ವಶಾಸ್ತ್ರ ಜ್ಞಾನ ಅಷ್ಟು ಚೆನ್ನಾಗಿತ್ತು. ಇದರಿಂದಾಗಿ ಅವನು ರಾಯನ ಪರಮಾಪ್ತ ಮಿತ್ರರಲ್ಲಿ ಒಬ್ಬನಾಗಿಬಿಟ್ಟ. ಎಷ್ಟೋ ವೇಳೆ ಬಹು ಜವಾಬ್ದಾರಿಯ ಅನೇಕ ನಂಬಿಕೆಯ ಕೆಲಸಗಳನ್ನು ಅವನಿಗೆ ವಹಿಸಲಾಗುತ್ತಿತ್ತು. ಸಿದ್ಧಿ ಮರ್ಕಾರನು ಇದುವರೆಗೆ ರಾಯನ ನಂಬಿಕೆಯನ್ನು ಉಳಿಸಿಕೊಂಡೇ ಬಂದಿದ್ದನು. ಯಾವ ಬಗೆಯ ಪ್ರಲೋಭಕ್ಕೂ ಒಳಗಾಗದೆ ಸ್ವಾಮಿನಿಷ್ಠ ಸೇವಕನಾಗಿ ನಡೆದು ಬಂದಿದ್ದನು.

ಮಹಮದೀಯನಾದ ಸಿದ್ಧಿಮರ್ಕಾರನ ವಿಷಯದಲ್ಲಿ ರಾಯನು ಇಷ್ಟು ನಂಬಿಕೆಯಿಡುವುದು ತಿಮ್ಮರಸನಿಗೆ ಸರಿದೋರಲಿಲ್ಲ. ಸಿದ್ಧಿ ಮರ್ಕಾ ರನು ಎಷ್ಟೇ ಒಳ್ಳೆಯವನಾಗಿ ತೋರಿದರೂ, ಅವನು ಮಾತು ಬಲ್ಲವನೆಂದೂ ಅವನನ್ನು ಸಂಪೂರ್ಣವಾಗಿ ನಂಬುವುದು ಒಳ್ಳೆಯದಲ್ಲವೆಂದೂ ರಾಯನನ್ನು ಎಚ್ಚರಿಸುತ್ತಲೇ ಬಂದಿದ್ದನು. ರಾಯನು ಈ ಮುನ್ನೆಚ್ಚರಿಕೆಯನ್ನು ಗಮನಿ ಸದೆ ನಡೆದಿದ್ದನು. ರಾಯನು ಎಚ್ಚರಿಕೆ ವಹಿಸದೇ ಇದ್ದರೂ ತಿಮ್ಮರಸನು ಗುಪ್ತಚಾರರ ಮೂಲಕ ಸಿದ್ಧಿಮರ್ಕಾರನ ಚಟುವಟಿಕೆಗಳನ್ನು ಮೊದಲಿ ನಿಂದಲೂ ಗಮನಿಸುತ್ತಲೇ ಬಂದಿದ್ದನು. ಇಷ್ಟಾದರೂ ಯಾವ ನಂಬಿಕೆ ದ್ರೋಹವೂ ಬಯಲಾಗಿರಲಿಲ್ಲ. ಎಂದಾದರೂ ಅವನು ನಂಬಿಕೆ ದ್ರೋಹ ಮಾಡುವವನೇ ಎಂದು ಅವನ ವಿಷಯದಲ್ಲಿ ತಿಮ್ಮರಸನು ಬಹಳ ಜಾಗರೂ ಕನಾಗಿದ್ದನು.

ಈ ಮಧ್ಯೆ ರಾಯನು ಸಿದ್ಧಿಮರ್ಕಾರನಿಗೆ ಹೊಸದೊಂದು ಕಾರ್ಯವನ್ನು ವಹಿಸಿದ್ದನು. ಅದೇನೆಂದರೆ ವಿಜಯನಗರದ ಸೇನೆಗೆ ಬೇಕಾಗುವ ಉತ್ತಮ ಅಶ್ವಗಳನ್ನು ವಿದೇಶಿಯರಿಂದ ಕೊಂಡು ರಾಜಧಾನಿಗೆ ಕಳುಹಿಸಿ ಕೊಡು ವುದು. ಈ ಕಾರ್ಯ ಸಾಧಿಸುವುದಕ್ಕಾಗಿ ಸಿದ್ಧಿಮರ್ಕಾರನು ರಾಜಧಾನಿ

ಬಿಟ್ಟು ಗೋವೆಗೆ ಹೋಗಬೇಕಾಗಿತ್ತು. ಇದು ಅವನಿಗೆ ಒಂದು ರೀತಿಯ ಅನುಕೂಲವೇ ಆಗಿತ್ತು.

ಕೃಷ್ಣದೇವರಾಯನು ಯುದ್ಧ ವೀರನೆಂತೋ ಅಂತೇ ರಣಪಂಡಿತನೂ ಆಗಿದ್ದನು. ಹಿಂದೆ ಬಹಮನಿ ಸುಲ್ತಾನರು ವಿಜಯನಗರದ ಅರಸರನ್ನು ಸೋಲಿಸಿದ್ದು ಅವರ ಅಶ್ವ ಸೈನ್ಯ ಬಲದಿಂದಲೇ. ಉತ್ಕಲದ ಗಜಪತಿ ತಮ್ಮ ಸೈನ್ಯದಲ್ಲಿ ಆನೆಗಳನ್ನು ತುಂಬಿದ್ದನು. ಅವನ ಗಜಸೈನ್ಯವನ್ನು ನುಗ್ಗಿ ಮೇಲೆ ಬೀಳಲು ಎಂಥಹವರಿಗೂ ಸಾಧ್ಯವಿರಲಿಲ್ಲ. ವಿಜಯನಗರದ ಅರಸರುಗಳು ನರಪತಿಗಳೆಂದು ಪ್ರಖ್ಯಾತರಾಗಿದ್ದರು. ಅವರಲ್ಲಿ ಅಧಿಕ ಸಂಖ್ಯೆಯಲ್ಲಿ ಸುಶಿಕ್ಷಿತ ಸುವ್ಯವಸ್ಥಿತ ಸೈನ್ಯವಿತ್ತು. ಇವುಗಳೊಂದಿಗೆ ಗಜ ಸೈನ್ಯ ಹಾಗೂ ಅಶ್ವಸೈನ್ಯವನ್ನು ಸೇರಿಸಿಕೊಂಡರೆ ತಮ್ಮನ್ನು ಇದಿರಿಸಲು ಯಾರೂ ಬರುವುದಿಲ್ಲವೆಂದು ಮನಗೊಂಡ ರಾಯನು ಸಾಧ್ಯವಾದಷ್ಟು ಆನೆ ಕುದುರೆಗಳನ್ನು ತನ್ನ ಸೈನ್ಯಕ್ಕೆ ಸೇರಿಸಿಕೊಂಡು ಬಲಪಡಿಸಿಕೊಂಡಿದ್ದನು. ಇದರಿಂದಲೇ ಉತ್ಕಲದ ಗಜಪತಿಯು ರಾಯನಿಗೆ ಶರಣು ಬಂದಿದ್ದನು. ಅಶ್ವಪತಿಗಳಾದ ಬಹಮನಿ ಸುಲ್ತಾನರು ಹೆದರಿ ಸಂಧಿಮಾಡಿಕೊಂಡಿದ್ದರು.

ಈಗ ಸಿದ್ಧಿಮರ್ಕಾರನು ಗೋವೆಯಲ್ಲಿ ತನ್ನದೊಂದು ಠಾಣೆಯನ್ನು ಏರ್ಪಡಿಸಿಕೊಂಡಿದ್ದನು. ಅಲ್ಲಿ ವರ್ಷದ ಅನೇಕ ತಿಂಗಳು ಬಿಡಾರಮಾಡಿ, ಪರ್ಷಿಯಾ, ಓರ್ಮೆಜ್, ಅರೇಬಿಯಾಗಳಿಂದ ಬರುತ್ತಿದ್ದ ಉತ್ತಮ ಕುದುರೆ ಗಳನ್ನು ಕೊಳ್ಳುತ್ತಿದ್ದನು. ಪಶ್ಚಿಮದ ರೇವು ಪಟ್ಟಣಗಳಾದ, ಬಟ್ಕಳ್, ಮಂಗಳೂರು, ಕಲ್ಲಿಕೋಟೆಗಳಲ್ಲಿ ತನ್ನ ಅನುಚರರನ್ನು ನೇಮಿಸಿ, ಅಲ್ಲಿಂದ ಬಂದ ಎಲ್ಲ ಪರದೇಶದ ಕುದುರೆಗಳನ್ನು ಕೊಂಡು ರಾಯನಿಗೆ ಕಳುಹಿಸಲು ಏರ್ಪಡಿಸಿದ್ದನು.

ಈ ಕುದುರೆ ವ್ಯಾಪಾರ ತುಂಬಾ ಲಾಭದಾಯಕವಾಗಿದ್ದುದರಿಂದ ವಿದೇಶೀಯರು, ಮುಖ್ಯವಾಗಿ ಪೋರ್ಚುಗೀಸರು ಈ ಉದ್ಯಮದಲ್ಲಿ ತೊಡಗಿ ದ್ದರು. ಇದುವರೆಗೆ ಪರದೇಶದ ಎಲ್ಲ ಕುದುರೆಗಳು ಬಿಜಾಪುರ, ಬಿದರೆ, ಗೋಲ್ಕಂಡ, ಬೀರಾರ್ ದೇಶದ ರಾಜರುಗಳೇ ಹೆಚ್ಚು ಬೆಲೆ ಕೊಟ್ಟು ಕೊಂಡುಬಿಡುತ್ತಿದ್ದರು. ಈಗ ಅವರ ಪ್ರತಿಸ್ಪರ್ಧಿಯಾಗಿ ರಾಯನು ನಿಂತಿ ದ್ದನು. ಅವನು ಇತರರು ಕೊಡುವ ಬೆಲೆಗಿಂತ ಹೆಚ್ಚಿನ ಬೆಲೆ ಕೊಟ್ಟು

ಕುದುರೆಗಳನ್ನು ಕೊಳ್ಳಲು ಸಿದ್ಧನಾಗಿದ್ದನು. ಪೋರ್ಚುಗೀಸರೊಂದಿಗೆ ಒಪ್ಪಂದ ಮಾಡಿಕೊಂಡು, ಅವರು ತಂದ ಉತ್ತಮವಾದ ಶ್ವೇತವರ್ಣದ ಕುದುರೆಗಳನ್ನು ತಾನು ಪಡೆದು ಬಿಡುತಿದ್ದನು. ಇದರಿಂದಾಗಿ ಇತರರಿಗೆ ಪರ ದೇಶದ ಉತ್ತಮ ಕುದುರೆಗಳು ಸಿಕ್ಕುವುದು ದುರ್ಲಭವೇ ಆಗಿತ್ತು.

ಈ ಅಶ್ವ ವ್ಯಾಪಾರದ ಎಲ್ಲ ಜವಾಬ್ದಾರಿ ಸಿದ್ದಿಮರ್ಕಾರನಿಗೆ ವಹಿಸಿ ಕೊಡುವುದನ್ನು ತಿಮ್ಮರಸನು ಮೊದಲು ವಿರೋಧಿಸಿದನು. ಆದರೆ ಹಣ ಕಾಸಿನ ಮೇಲೆ ತಮ್ಮ ಹತೋಟಿಯಿದ್ದುದರಿಂದ, ಸಿದ್ಧಿಯ ಕೈವಾಡ, ಏನೂ ನಡೆಯುವುದಿಲ್ಲವೆಂದು ತಿಳಿದು ಸುಮ್ಮನಾಗಿದ್ದನು.

ಸಿದ್ಧಿಮರ್ಕಾರನು ರಾಜಧಾನಿಯಿಂದ ಬಹಳ ಕಾಲ ಹೊರಗೆ ಇರ ಬೇಕಾದ ಪ್ರಸಂಗ ಬಂದುದರಿಂವ ಅವನ ನಿಷ್ಠೆಯಲ್ಲಿ ಒಡಕುಂಟಾಗಿದ್ದಿತು. ತನ್ನ ಮೂಲಕ ನೂರಾರು ಪಗೋಡಗಳೂ ದುರ್ಗೀವರಹಗಳೂ ಪೋರ್ಚು ಗೀಸರ ಕೈಸೇರುವುದನ್ನು ನೋಡಿ ಅವನಲ್ಲಿ ದುರಾಸೆ ಬೆಳಿಯಿತು ಅವನು ಕ್ರಮಕ್ರಮವಾಗಿ ಹಣದ ಪ್ರಲೋಭಕ್ಕೆ ಬೀಳುವಂತಾಯಿತು. ಇದರ ಜೊತೆಗೆ ಬಿಜಾಪುರದ ಸುಲ್ತಾನನ ಪ್ರಚೋದನೆಯೂ ನಡೆದಿತ್ತು. ಸಿದ್ಧಿ ಮರ್ಕಾರನು ಮಹಮದೀಯನಾದರೂ ರಾಯನ ಸೇವೆಯಲ್ಲಿರುವುದು ಬಹಳ ಅಪಮಾನಕರವೆಂದೂ, ಅವನು ತನ್ನ ಆಶ್ರಯದಲ್ಲಿ ನಿಲ್ಲುವುದಾದರೆ ಇನ್ನೂ ಹೆಚ್ಚಿನ ಅಧಿಕಾರ, ಶ್ರೀಮಂತಿಕೆ, ಅಂತಸ್ತುಗಳು ದೊರೆಯುವುದೆಂದೂ ಅವನನ್ನು ಪ್ರಚೋದಿಸುತ್ತಲೇ ಬಂದಿದ್ದನು. ಮೊದಲು ಈ ಮಾತುಗಳಿಗೆ ಸಿದ್ಧಿಮರ್ಕಾರನು ಬಲಿಬೀಳದಿದ್ದರೂ ಕೊನೆಗೆ ಸಂತತವಾಗಿ ನಡೆದ ಪ್ರಚೋದನೆಗೆ ಆತನು ಬಲಿಬಿದ್ದನು. ಅವನು ರಾಯನ ಸೇವೆಯಲ್ಲಿದ್ದು ಕೊಂಡೇ ರಾಯನ ವಿರುದ್ಧ ವಿದ್ರೋಹ ಕಾರ್ಯದಲ್ಲಿ ತೊಡಗಿದ್ದ. ಇದನ್ನು ಅರಿತ ತಿಮ್ಮರಸನು ಅವನ ಕಾವಲನ್ನು ಮತ್ತೂ ಭದ್ರಪಡಿಸಿದ. ಹೇಗಿ ದ್ದರೂ ಸಿದ್ಧಿಮರ್ಕಾರನು ರಾಯನನ್ನು ಮರಳುಮಾಡಿ ತಿಮ್ಮರಸನಿಗೆ ತಿಳಿ ಯದಂತೆ ನಲವತ್ತು ಸಾವಿರ ವರಹಗಳನ್ನು ಪಡೆದು ಸುರಕ್ಷಿತವಾದ ಸ್ಥಳಕ್ಕೆ ಸಾಗಿಸಿ ಹಠಾತ್ತನೆ ಕಣ್ಮರೆಯಾಗಿಬಿಟ್ಟನು. ತಿಮ್ಮರಸನಿಗೆ ಈ ಸುದ್ದಿ ತಿಳಿಯುವ ಮೊದಲೇ ಅವನು ರಾಜಧಾನಿಯಿಂದ ಬಹುದೂರ ಹೋಗಿ ಬಿಜಾಪುರದ ಸುಲ್ತಾನರ ಬಳಿ ಆಶ್ರಯ ಪಡೆದಿರುವನೆಂಬ ಈ ಎಲ್ಲ ಸಂಗತಿ

ಯನ್ನು ವರದಿಮಾಡಲು ದೂತನುಗೋವೆಯಿಂದ ರಾಜಧಾನಿಗೆ ಬಂದಿದ್ದನು.

ಈ ಎಲ್ಲ ಸುದ್ದಿಯನ್ನು ಕೇಳಿ ರಾಯನು ಕ್ರೋಧದಿಂದ ಹುಬ್ಬುಗಂಟಿಕ್ಕಿ 'ಆ ದ್ರೋಹಿ ಎಲ್ಲಿದ್ದರೂ ಹಿಡಿದು ಆ ವಿಶ್ವಾಸ ಘಾತುಕನನ್ನು ಉಗ್ರಶಿಕ್ಷೆಗೆ ಒಳಪಡಿಸಬೇಕು.' ಎಂದು ಗರ್ಜಿಸಿದನು.

ತಿಮ್ಮರಸನು ಸಿದ್ಧಿಮರ್ಕಾರನ ಎಲ್ಲ ಕಥೆಯನ್ನು ಕೇಳಿ, ರಾಯನ ಕೋಪದ ಕಾವು ಕೊಂಚ ತಗ್ಗಿದ ಮೇಲೆ 'ಕಡೆಗೂ ನನ್ನ ಊಹೆ ಸತ್ಯವೇ ಆಯಿತು' ಎಂದನು.

'ಹಾಗಾದರೆ ಸಿದ್ಧಿಮರ್ಕಾರನು ಹೀಗೆ ಸ್ವಾಮಿ ದ್ರೋಹಿಯಾಗುವನೆಂದು ನಿಮಗೆ ತಿಳಿದಿತ್ತೆ?'

'ಈ ವಿಷಯದಲ್ಲಿ ನಾನು ಪ್ರಭುಗಳಿಗೆ ಮೊದಲಿನಿಂದಲೂ ಎಚ್ಚರಿಕೆ ಕೊಡುತ್ತಲೇ ಬಂದಿದ್ದೆ. ಆದರೆ ಅದು ಪ್ರಭುಗಳ ಗಮನಕ್ಕೆ ಬರಲಿಲ್ಲ. ಕಡೆಗೂ ನನ್ನ ನಿರೀಕ್ಷೆ ವ್ಯರ್ಥವಾಗಲಿಲ್ಲ. ಈಗ ನನಗೆ ಒಂದು ರೀತಿಯ ಸಮಾಧಾನವೇ ಆಗುತ್ತಿದೆ'

'ಸಿದ್ಧಿಮರ್ಕಾರನು ನಮಗೆ ಮೋಸ ಮಾಡಿರುವುದು ನಿಮಗೆ ಸಮಾಧಾನವೆ?'

'ಹೌದು ಪ್ರಭು, ಅವನಂತಹ ಕಪಟಿ, ಎರಡು ತಲೆಯ ಹಾವು ರಾಜಧಾನಿಯಲ್ಲಿರುವವರೆಗೂ ರಾಜ್ಯಕ್ಕೆ ಕ್ಷೇಮವಿರಲಿಲ್ಲ. ಇಲ್ಲಿರುವವರೆಗೂ ಅವನು ಸುಲ್ತಾನರ ಗುಪ್ತಚಾರನಾಗಿಯೇ ಇದ್ದ. ಅವನು ರಾಜಧಾನಿಯಿಂದ ಹೋದುದು ಒಂದು ರೀತಿಯಲ್ಲಿ ಸಮಾಧಾನವೇ ಪ್ರಭು!'

'ನೀವು ಹೇಳುವುದು ಒಂದು ರೀತಿಯಿಂದ ಸಮಂಜಸವೇ ಸರಿ. ಆದರೆ ರಾಜಬೊಕ್ಕಸದಿಂದ ನಲವತ್ತು ಸಹಸ್ರ ವರಹಗಳನ್ನು ಅಪಹರಿಸಿರುವ ಅವನನ್ನು ಹಿಡಿತರಿಸಿ ಆ ಹಣವನ್ನು ಮರಳಿ ಪಡೆಯಬೇಕು. ಅಲ್ಲದೆ ಅವನನ್ನು ಉಗ್ರವಾಗಿ ಶಿಕ್ಷಿಸಬೇಕು. ಆದರೆ ಶತ್ರುರಾಜರ ಆಶ್ರಯದಲ್ಲಿರುವ ಅವನು ನಮ್ಮ ಕೈಗೆ ದೊರೆಯುವ ಬಗೆ ಹೇಗೆ? ಸಿದ್ಧಿಯನ್ನು ಕೈವಶಪಡಿಸಿಕೊಳ್ಳಲು ನಾವು ಬಿಜಾಪುರದ ಸುಲ್ತಾನನ ಮೇಲೆ ಯುದ್ಧ ಹೂಡುವುದೊಂದೇ ದಾರಿ!'

ಈ ಮಾತು ಕೇಳಿ ಚಕಿತನಾದ ತಿಮ್ಮರಸನು ಹೇಳಿದನು.

'ಇಷ್ಟು ಅಲ್ಪ ವಿಷಯಕ್ಕೆ ಯುದ್ಧದ ಅವಶ್ಯಕತೆ ಇಲ್ಲ ಪ್ರಭು! ಸಿದ್ಧಿ ನಮ್ಮ ಪ್ರಜೆ. ರಾಜಬೊಕ್ಕಸದಿಂದ ಹಣವನ್ನೂ ಅಪಹರಿಸಿಕೊಂಡು ಬಿಜಾಪುರದ ಸುಲ್ತಾನನ ಆಶ್ರಯ ಪಡೆದಿದ್ದಾನೆ. ಅವನನ್ನು ಹಣದ ಸಮೇತ ನಮಗೆ ಒಪ್ಪಿಸಲು ನಾವು ರಾಯಸ ಬರೆಯಿಸಿ ಕಳುಹಿಸಿದರೆ— ಬಹುಶಃ ಸುಲ್ತಾನನು ಯಃಕಶ್ಚಿತ ಸಿದ್ಧಿಮರ್ಕಾರನ ಮತ್ತು ನಲವತ್ತು ಸಹಸ್ರ ವರಹಗಳ ಸಲುವಾಗಿ ಯುದ್ಧದಂತಹ ಪ್ರಚಂಡ ಆಘಾತವನ್ನು ಬರಮಾಡಿಕೊಳ್ಳಲಾರನೆಂದು ನನಗೆ ನಂಬಿಕೆಯಿದೆ. ಆದುದರಿಂದ ಯುದ್ಧಕ್ಕೆ ಮೊದಲು ಸಾಮ, ದಾನ, ಭೇದಗಳನ್ನು ಪ್ರಯೋಗಿಸುವುದು ಒಳಿತು.'

'ಒಂದು ವೇಳೆ ಸುಲ್ತಾನರು ನಮ್ಮ ರಾಯಸವನ್ನು ಧಿಕ್ಕರಿಸಿದರೆ?'

'ಅನಂತರ ತಿಳಿದೇ ಇದೆ ದಂಡಪ್ರಯೋಗ!'

'ಆ ಮದೋನ್ಮತ್ತ ಸುಲ್ತಾನನು ನಮ್ಮ ಒಳ್ಳೆಯ ಮಾತುಗಳಿಗೆ ಕಿವಿಗೊಡುತ್ತಾನೆಯೇ? ಅವನ ಮದವನ್ನು ಅಡಗಿಸಲು ಯುದ್ಧವೊಂದೇ ದಾರಿ'

'ಯುದ್ಧ ಅನಿವಾರ್ಯವಾದರೆ ಯುದ್ಧ ಮಾಡೋಣ ಪ್ರಭು! ಯುದ್ಧವೆಂದರೆ ಎರಡು ರಾಷ್ಟ್ರಗಳಿಗೂ ಅಪಾರ ಹಣವ್ಯಯ. ಜನಹಾನಿ. ಇದರಿಂದ ಯಾರಿಗೂ ಸುಖವಿಲ್ಲ. ಸಿದ್ಧಿಮರ್ಕಾರನಿಗೆ ಆಶ್ರಯ ಕೊಡುವುದರ ಮೂಲಕ ನಾವು ಮಾಡಿಕೊಂಡಿರುವ ಶಾಂತಿ ಒಪ್ಪಂದಕ್ಕೆ ಭಂಗ ಬಂದಿದೆ ಎಂದು ಬಿಜಾಪುರದ ಸುಲ್ತಾನರ ಗಮನಕ್ಕೆ ತರೋಣ. ಇದನ್ನು ಉಪೇಕ್ಷೆಮಾಡಿದರೆ—ನಮ್ಮ ಕೋರಿಕೆಯನ್ನು ಧಿಕ್ಕರಿಸಿದರೆ—ಮುಂದೆ ಯುದ್ಧ ತಿಳಿದೇ ಇದೆ.'

ತಿಮ್ಮರಸನ ಈ ಸಲಹೆ ರಾಯನಿಗೆ ಸೂಕ್ತವಾಗಿ ಕಾಣಲಿಲ್ಲ. ಆ ಕಾರಣವಾಗಿ ಬಿಜಾಪುರದ ಸುಲ್ತಾನರ ಮೇಲೆ ಯುದ್ಧ ಘೋಷಿಸಿದ್ದ ರಾಯನಿಗೆ ಈಗ ಸದವಕಾಶ ದೊರೆತಿರುವಾಗ ಅದನ್ನು ಉಪಯೋಗಿಸಿಕೊಳ್ಳದೆ ಬಿಡುವುದೆ? ಸುಲ್ತಾನನು ರಾಯಸವನ್ನು ನೋಡಿ ಹೆದರಿ ಸಿದ್ಧಿಯನ್ನು ಒಪ್ಪಿಸಿಬಿಟ್ಟರೆ ಒಂದು ಸದವಕಾಶ ತಪ್ಪಿಹೋಗುತ್ತದೆ. ಏನೇ ಆದರೂ ಯುದ್ಧ ಹೂಡಬೇಕೆಂದೇ ರಾಯನ ಅಭೀಷ್ಟ.

'ಹಾಗಾದರೆ ನಿಮಗೆ ಯುದ್ಧ ಹೂಡಲು ಇಷ್ಟವಿಲ್ಲವೆ?'

'ವಿನಾ ಕಾರಣ ಯುದ್ಧ ಹೂಡುವುದು ನನಗೆ ಇಷ್ಟವಿಲ್ಲ ಪ್ರಭು.'

'ಈಗ ಎರಡು ಕಾರಣಗಳು, ಯುದ್ಧ ಹೂಡಲು ಒದಗಿವೆ. ಮೊದಲನೆಯದು ಸಿದ್ಧಿಮರ್ಕಾರನದು. ಎರಡನೆಯದು ರಾಯಚೂರು ಮತ್ತು ಮುದ್ಗಲ್ಲುಗಳನ್ನು ವಶಪಡಿಸಿಕೊಳ್ಳುವ ಸಲುವಾಗಿಯಾದರೂ ಯುದ್ಧ ಅನಿವಾರ್ಯವಾಗಿದೆ!'

'ಇದನ್ನೂ ಶಾಂತರೀತಿಯಲ್ಲಿ ಬಗೆಹರಿಸಿಕೊಳ್ಳಬಹುದು, ಪ್ರಭು! ನಾನು ಹಿಂದೆ ತಿಳಿಸಿದಂತೆ ಬಿಜಾಪುರದ ಸುಲ್ತಾನರಿಗೆ ರಾಯಚೂರು ಮುದ್ಗಲ್ಲುಗಳನ್ನು ನಮಗೆ ಹಿಂದಿರುಗಿಸಬೇಕೆಂದು ರಾಯಸ ಬರೆಸೋಣ. ಅವನು ತಿರಸ್ಕರಿಸಿದರೆ ಮುಂದೇ ತಿಳಿದೇ ಇದೆ, ಯುದ್ಧಕ್ಕೆ ಶರಣು ಬರುವುದು. ಆದರೆ ಆದಷ್ಟು ಶಾಂತ ರೀತಿಯಲ್ಲಿ ಈ ವಿಷಯವನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸೋಣ. ಬದುಕುವ ದಾರಿ ಶಾಂತಿ ಎಂಬ ಸತ್ಯವನ್ನು ಅವರು ಮನಗೊಂಡಿದ್ದರೆ ಅವರು ಖಂಡಿತವಾಗಿ ಯುದ್ಧಕ್ಕೆ ಹಿಂಸೆಗೆ ಪ್ರೇರಕರಾಗುವುದಿಲ್ಲ.'

'ಈಗ ನಾವು ಶಾಂತಿ ಮಂತ್ರವನ್ನು ಜಪಿಸುತ್ತಾ ಕುಳಿತಿರುವುದೆಂದರೆ ಪರಿಸ್ಥಿತಿಯ ವಿಪರ್ಯಾಸವೇ ಸರಿ ಶತ್ರು ಬಲವಾಗುವ ಮುನ್ನವೇ ಅವನನ್ನು ಸದೆಬಡಿಯದಿದ್ದರೆ ಸಾಮ್ರಾಜ್ಯಕ್ಕೆ ವಿಪತ್ತು ತಪ್ಪದು. ನಮ್ಮೊಂದಿಗೆ ಸುಲ್ತಾನನು ಶಾಂತಿ ಒಪ್ಪಂದ ಮಾಡಿಕೊಂಡಿರುವುದಾದರೂ ಯುದ್ಧ ಸನ್ನದ್ಧನಾಗಲು—ಸೈನ್ಯವನ್ನು ಬಲಪಡಿಸಿ, ಸಮಯ ಸಾಧಿಸಿ ಮೇಲೆ ಬೀಳಲು ಸಿದ್ಧನಾಗುತ್ತಿದ್ದಾನೆ. ಅವನು ಶಾಂತಿಪ್ರಿಯನೇ ಆಗಿದ್ದರೆ ಅವನು ವಿದ್ರೋಹದ ಚಳುವಳಿಗೇಕೆ ಅವಕಾಶ ಕೊಡುತ್ತಿದ್ದನು? ನಾವು ಯುದ್ಧ ಸನ್ನದ್ಧರಾಗಲೇಬೇಕು.'

'ಸುಲ್ತಾನನು ನಮ್ಮ ಮೇಲೆ ಬೀಳಲು ಬಂದರೆ ನಾವೇಕೆ ಅಂಜಬೇಕು ಪ್ರಭು! ನಮ್ಮ ಸೈನಿಕರು ಹೇಡಿಗಳಲ್ಲ. ಯಾವ ಗಳಿಗೆಯಲ್ಲಾದರೂ ಅವರು ದೇಶರಕ್ಷಣೆಗೆ ಸಿದ್ಧರಾಗಿದ್ದಾರೆ. ಈ ಬಗ್ಗೆ ಪ್ರಭುಗಳಿಗೆ ಚಿಂತೆ ಬೇಡ. ಆದರೆ ಯಾವುದೋ ಕ್ಷುಲ್ಲಕ ಕಾರಣಕ್ಕಾಗಿ ಯುದ್ಧ ಹೂಡಿ ದೇಶದ ಸಂಪತ್ತನ್ನು ಹಾಳು ಮಾಡುವುದು ಬೇಡ.'

ಈ ಮಾತು ರಾಯನಿಗೆ ಎಷ್ಟು ಪ್ರಿಯವಾಯಿತೋ, ಆದನ್ನು ಅವನು

ಮಾತಿನಿಂದ ವ್ಯಕ್ತಪಡಿಸಲಿಲ್ಲ. 'ತಿಮ್ಮರಸನ ಅಭಿಪ್ರಾಯದ ವಿರುದ್ಧ ಯುದ್ಧ ಹೂಡುವುದಕ್ಕಿಂತ, ಅವನ ಅಭಿಪ್ರಾಯದಂತೆ ನಡೆದುಕೊಳ್ಳುವುದು. ತನ್ನ ಅಭೀಷ್ಟ ಈಡೇರದಿದ್ದರೆ ಯುದ್ಧ ತಿಳಿದೇ ಇದೆ' ಎಂದು ರಾಯನು ಸುಲ್ತಾನನಿಗೆ ರಾಯಸವನ್ನು ಕಳುಹಿಸಲು ನಿರ್ಧರಿಸಿದನು.

## ೫

ತಿಮ್ಮರಸನ ಸಲಹೆಯಂತೆ ಬಿಜಾಪುರದ ಸುಲ್ತಾನನಿಗೆ ಓಲೆ ಹೋಯಿತು. ಅದರಲ್ಲಿ ರಾಯನು, ತನ್ನ ರಾಜ್ಯದ ವಿಶ್ವಾಸಘಾತುಕ ಪ್ರಜೆಯೊಬ್ಬನಿಗೆ ಸುಲ್ತಾನನು ಆಶ್ರಯಕೊಟ್ಟಿರುವುದಾಗಿಯೂ ಅವನನ್ನು ಹಣದ ಸಮೇತ ತಮಗೆ ಒಪ್ಪಿಸಬೇಕೆಂದು ತಿಳಿಸಿದ್ದನು. ಈ ಓಲೆಯನ್ನು ನೋಡಿ ಸುಲ್ತಾನನು, ತನಗೆ ಈ ಸಂಗತಿಗಳೊಂದೂ ತಿಳಿಯದೆಂದೂ, ತಾನು ಯಾರಿಗೂ ಆಶ್ರಯವಿತ್ತಿಲ್ಲವೆಂದೂ ಮಾರೋಲೆ ಬರೆದು ತಿಳಿಸಿದನು.

ಆದರೆ ಬೇಹುಗಾರರು ತಂದ ಸುದ್ದಿಯಂತೆ ಸಿದ್ಧಿಮರ್ಕಾರನಿಗೂ ಮತ್ತು ಅದಿಲ್‌ಷಹನಿಗೂ ಮೊದಲಿನಿಂದಲೂ ಗೆಳತನವಿತ್ತು. ಸಿದ್ಧಿಮರ್ಕಾರನು ಅಶ್ವಶಾಸ್ತ್ರ ನಿಪುಣನೂ, ವ್ಯಾಪಾರ ಕುಶಲಿಯೂ,ಶ್ರದ್ಧಾವಂತ ಮುಸ್ಲಿಮನೂ ಆದಕಾರಣ ಅವನು ಕಾಫರರ ಸೇವೆಯಲ್ಲಿ ತೊಡಗುವುದು ಅಧರ್ಮವೆಂದೇ ಸುಲ್ತಾನನ ಅಭಿಮತ. ಅವನು ತನ್ನ ಆಶ್ರಯಕ್ಕೆ ಬರುವುದಾದರೆ ಅವನನ್ನು ಡಾಬುಲ್ ದುರ್ಗದ ಅಧಿಪತಿಯನ್ನಾಗಿ ಮಾಡುವುದಾಗಿ ವಾಗ್ದಾನ ಮಾಡಿದ್ದನು. ಈ ಎಲ್ಲ ಪ್ರಲೋಭಗಳಿಗೆ ಬಲಿಬಿದ್ದು ಸಿದ್ಧಿಮರ್ಕಾರನು ನಲ್ವತ್ತು ಸಾವಿರ ವರಹಗಳೊಡನೆ ಸುಲ್ತಾನನ ಬಳಿಗೆ ಬಂದಿದ್ದನು. ಸುಲ್ತಾನನು ತನ್ನ ವಾಗ್ದಾನದಂತೆ ನಡೆದುಕೊಂಡಿದ್ದನು. ಇದಿಷ್ಟು ತೆರೆಯ ಹಿಂದೆ ನಡೆದಿದ್ದ ನಾಟಕ.

ರಾಯನು ಸುಲ್ತಾನನ ಮಾರೋಲೆಯನ್ನು ಓದಿ ಸಿಟ್ಟಿಗೆದ್ದು ಯುದ್ಧಕ್ಕೆ ಹೊರಡಲು ಸಿದ್ಧತೆಗಳನ್ನು ಮಾಡತೊಡಗಿದನು.

ಇತ್ತ, ಸುಲ್ತಾನನ ಯುದ್ಧ ಸನ್ನಾಹದ ಕಾರ್ಯವಿನ್ನೂ ಪೂರೈಸಿರಲಿಲ್ಲ.

ತಾನು ಯುದ್ಧಕ್ಕೆ ಸಿದ್ಧನಾಗುವ ಪೂರ್ವದಲ್ಲಿಯೇ ರಾಯನು ತನ್ನ ಮೇಲೆ ಏರಿಬರುವುದನ್ನು ತಪ್ಪಿಸಬೇಕೆಂದು ಅವನು ನಿರ್ಧರಿಸಿದನು. ಸಿದ್ಧಿ ಮರ್ಕಾರನ ದೆಸೆಯಿಂದ ತಾನು ರಾಯನ ವೈರವನ್ನು ಕಟ್ಟಿಕೊಳ್ಳಬೇಕಾಯಿತೆಂದೂ, ರಾಯನ ಸೈನ್ಯ ತನ್ನ ಮೇಲೆ ಬೀಳಲು ಬರುತ್ತಿರುವುದೆಂದೂ, ಅದನ್ನು ಎದುರಿಸಲು ತಾನು ಯುದ್ಧ ಸನ್ನದ್ಧನಾಗಬೇಕಾಗಿರುವುದರಿಂದ ರಾಯನ ಬೊಕ್ಕಸದಿಂದ ತಂದ ನಲವತ್ತು ಸಹಸ್ರ ವರಹಗಳನ್ನು ತನಗೆ ಕೊಡಬೇಕೆಂದು ಸುಲ್ತಾನನು ಸಿದ್ಧಿ ಮರ್ಕಾರನಿಗೆ ಪತ್ರ ಬರೆದು ತಿಳಿಸಿದನು.

ಹೀಗಾಗಬಹುದೆಂದು ಸಿದ್ಧಿ ಮರ್ಕಾರನು ಈ ಮೊದಲೇ ಊಹಿಸಿದ್ದಿರಬೇಕು ತನ್ನನ್ನು ಆಪತ್ಕಾಲದಲ್ಲಿ ಬಿಜಾಪುರದ ಸುಲ್ತಾನನು ಕೈ ಬಿಡಲು ಹೇಸುವುದಿಲ್ಲವೆಂದು ಅವನಿಗೆ ಮನಗಾಣಲು ಹೆಚ್ಚು ಕಾಲ ಬೇಕಾಗಲಿಲ್ಲ. ಯಾವುದೋ ವಿಷ ಗಳಿಗೆಯಲ್ಲಿ, ಅದಿಲ್‌ಷಹನ ಸವಿಮಾತುಗಳಿಗೆ ಮಾರುಹೋಗಿ ತಾನು ವಿಶ್ವಾಸಘಾತುಕನಾದುದಕ್ಕೆ ಅವನು ಪರಿತಪಿಸಿದನು. ಆದರೆ ಹಿಂದೆ ನಡೆದುದಕ್ಕಾಗಿ ಚಿಂತಿಸಲು ಈಗ ಸಮಯವಿರಲಿಲ್ಲ. ಆದಷ್ಟು ಬೇಗ ತನ್ನ ಸಂಪತ್ತಿನೊಂದಿಗೆ ,ಡಾಬುಲ್ ದುರ್ಗವನ್ನು ತ್ಯಜಿಸಿ ಗೋವೆಯಲ್ಲಿರುವ ಪೋರ್ಚುಗೀಸರ ಆಶ್ರಯ ಹೊಂದಲು ನಿರ್ಧರಿಸಿದನು.

ಅದರಂತೆ ಒಂದು ದಿನ ತನ್ನ ಸಮಸ್ತ ಸಂಪತ್ತನ್ನು ಕುದುರೆಗಳ ಮೇಲೆ ಹೇರಿಕೊಂಡು ಡಾಬುಲ್ ದುರ್ಗವನ್ನು ಬಿಟ್ಟು ಹೊರಟನು.

ಆದರೆ ಅವನು ಬಿಜಾಪುರದ ಸುಲ್ತಾನ ಅದಿಲ್ ಷಹನ ಕಣ್ಣು ತಪ್ಪಿಸಿ ಹೋಗಲು ಸಮರ್ಥನಾಗಲಿಲ್ಲ. ಅದಿಲ್‌ಷಹನ ಗೂಢಚಾರರು ಅವನನ್ನು ಹಿಂಬಾಲಿಸಿ ಗೋವೆಯ ಗಡಿಯನ್ನು ಅವನು ಮುಟ್ಟುವಷ್ಟರಲ್ಲಿಯೇ ಅವನ ಮೇಲೆ ಬಿದ್ದರು. ಹಠಾತ್ತನೆ ತನ್ನ ಮೇಲೆ ಬಿದ್ದ ಶತ್ರುಗಳ ಮೇಲೆ ಅವನು ಶಕ್ತಿಮಿಾರಿ ಹೋರಾಡಿದನು. ಈ ಹೋರಾಟದಲ್ಲಿ ಸಿದ್ಧಿ ಮರ್ಕಾರನ ತಲೆ ಕತ್ತರಿಸಿ ಬಿತ್ತು.ಅವನ ಸಮಸ್ತ ಸಂಪತ್ತನ್ನು ತೆಗೆದುಕೊಂಡು ಬಿಜಾಪುರದ ಕಡೆಯುವರು ಹೊರಟರು.

ಸಿದ್ಧಿ ಮರ್ಕಾರನ ಅಂತ್ಯವನ್ನು ಕೇಳಿ ಅದಿಲ್‌ಷಹನಿಗೆ ವ್ಯಥೆಯಾದರೂ ಅವನ ಅಧಿಕ ಸಂಪತ್ತು ಕೈ ಸೇರಿದುದಕ್ಕಾಗಿ ಸಂತೋಷವೇ ಆಯಿತು. ಇದಕ್ಕೆಲ್ಲಾ ಕಾರಣರಾದ ಗೂಢಚಾರರನ್ನು ಉಚಿತ ರೀತಿ

ಲ್ಲಿ ಸುಲ್ತಾನನು ಸನ್ಮಾನಿಸಿದನು.

ಅದಿಲ್‌ಷಹನು ಸಿದ್ಧಿಮರ್ಕಾರನನ್ನು ಅವನ ಬಳಿಯಿದ್ದ ಸಂಪತ್ತಿನ ಯಿಂದ ಕೊಲೆ ಮಾಡಿಸಿದನೆಂಬ ಸುದ್ದಿ ರಾಯನ ಕಿವಿಗೂ ಬಿತ್ತು. ಮರ್ಕಾರನನ್ನು ನಡೆಸಿಕೊಂಡ ರೀತಿಯಿಂದ ಅದಿಲ್‌ಷಹನ ಹೀನ ಬಯಲಾಗಿತ್ತು. ಇನ್ನು ಸುಮ್ಮನಿರುವುದು ಉಚಿತವಲ್ಲವೆಂದು ುನು ಒಳ್ಳೆಯ ಮುಹೂರ್ತದಲ್ಲಿ ವಿಜಯನಗರದ ಸಮಸ್ತ ಸೇನೆ ಂದಿಗೆ ಬಿಜಾಪುರದ ಸುಲ್ತಾನನ ಮೇಲೆ ದಂಡೆತ್ತಿ ಹೊರಟನು.

ಕೃಷ್ಣದೇವರಾಯನು ಮೊದಲು ಡಾಬುಲ್ ದುರ್ಗವನ್ನು ವಶಪಡಿಸಿ ಳ್ಳಬೇಕೆಂದು ಆಲೋಚಿಸಿದನು. ತಿಮ್ಮರಸನು, ಡಾಬುಲ್‌ದುರ್ಗದ ಲು ರಾಯಚೂರಿನ ಮೇಲೆ ಏರಿಹೋಗಬೇಕೆಂದೂ, ಅದನ್ನು ರಕ್ಷಿಸಲು ಲ್‌ಷಹನು ದಂಡೆತ್ತಿ ಬರುವುದು ಖಂಡಿತವೆಂದೂ, ಆ ಸಮಯದಲ್ಲಿ ುನು ಅವರ ಮೇಲೆ ಬಿದ್ದು ಸೇಡು ತೀರಿಸಿಕೊಳ್ಳಬಹುದೆಂದು ಸಲಹೆ ಡಿದನು. ಈ ಸಲಹೆಯಂತೆ ರಾಯನು ಸಮಸ್ತ ಸೇನಾಬಲದೊಂದಿಗೆ ುಚೂರಿನ ಮಾರ್ಗವಾಗಿ ಹೊರಟನು.

ವಿಜಯನಗರದ ಪ್ರಚಂಡಸೇನೆ ಹತ್ತು ಲಕ್ಷ ಸೈನಿಕರಿಂದ ಕೂಡಿತ್ತು. ರಲ್ಲಿ ಹನ್ನೊಂದು ಪ್ರಮುಖ ದಳಗಳಿದ್ದವು. ಒಂದೊಂದು ದಳಕ್ಕೂ ್ಬಬ್ಬ ಅರಿತ, ನುರಿತ, ಸೇನಾಧಿಪತಿಗಳಿದ್ದರು. ಸಾಮಾನ್ಯವಾಗಿ ಈ ಪತಿಗಳು ರಾಜಕುಟುಂಬಕ್ಕೆ ಸೇರಿದವರಾಗಿದ್ದರು. ಇಲ್ಲವೇ ತಮ್ಮ ಸಾಮರ್ಥ್ಯಗಳಿಂದ ರಾಯನ ಅನುಗ್ರಹಕ್ಕೆ ಪಾತ್ರರಾಗಿದ್ದವರಾಗಿದ್ದರು.

ಸಾಳ್ವ ತಿಮ್ಮರಸ, ಅವನ ಮಗ ಗೋವಿಂದರಾಜ, ರಾಯಸಂಕೊಂಡ ಸಯ್ಯ, ವಿಜಯಭದ್ರ ಮೊದಲಾದ ವೀರರು ಸಹಸ್ರ ಸಹಸ್ರ ಪಡೆಗಳನ್ನು ಸುತ್ತಾ ಮುಂದೆ ನಡೆದಿದ್ದರು. ರಾಯನ ಸಂಚಿಯ ಕೆಲಸದ ಅಡಿವಪ್ಪ ುಕನು ಹದಿನೈದು ಸಾವಿರ ಕಾಲಾಳುಗಳು, ಇನ್ನೂರು ಕುದುರೆಯ ಲ್ವಿಚಾರಕನಾಗಿದ್ದನೆಂದ ಮೇಲೆ ಇನ್ನುಳಿದ ಸಾಮಂತರೂ, ಮಾಂಡಲೀ ಇನ್ನೆಷ್ಟು ಪಡೆಗಳನ್ನು ನಡೆಸುತ್ತಿದ್ದರೆನ್ನಬೇಕು ?

ಪ್ರತಿಯೊಂದು ಪಡೆಯೂ ಸರ್ವರೀತಿಯಲ್ಲಿ ಸುವ್ಯವಸ್ಥಿತವಾಗಿತ್ತು. ಮ ಪಡೆಯನ್ನು ಮತ್ತೊಂದರಿಂದ ಬೇರ್ಪಡಿಸಲು ಒಂದೊಂದಕ್ಕೂ

ಒಂದೊಂದು ಚಿನ್ಹೆ. ಒಂದೊಂದು ಬಣ್ಣದ ಉಡುಪು. ಯುದ್ಧದ
ಕುದುರೆಗಳನ್ನು ಬಗೆಬಗೆಯಾಗಿ ಅಲಂಕರಿಸಲಾಗಿತ್ತು. ಆನೆಗಳ ವಿ
ನಿಂತು ಯುದ್ಧ ಮಾಡಲು ಅನುಕೂಲವಾಗುವಂತೆ ಶಸ್ತ್ರಗಳಿಂದ ತುಂ
ಅಂಬಾರಿಯಿಡಲಾಗಿತ್ತು. ಆನೆಗಳ ದಂತಗಳಿಗೆ ದೀರ್ಘವಾದ ಹರಿತವ
ಕತ್ತಿಗಳನ್ನು ಕಟ್ಟಿದ್ದರು. ಈ ಕೂರ್ಗತ್ತಿಗಳಿಗೆ ಶತ್ರುಸೇನೆ ಸಿಕ್ಕಿತೆ
ಅವು ಛಿದ್ರ ಛಿದ್ರವಾದಂತೆಯೇ ಸರಿ.

ಯುದ್ಧೋಪಕರಣಗಳಲ್ಲೂ ಅನೇಕ ವೈವಿಧ್ಯ. ಚಿತ್ರವಿಚಿತ್ರವ
ಅನೇಕ ಬಗೆಯ ಶಸ್ತ್ರಾಸ್ತ್ರಗಳು ಒಂದೆಡೆ, ಆನೆ, ಕುದುರೆ, ಒಂಟೆಗಳು ಸ
ಮತ್ತೊಂದೆಡೆ. ಅವುಗಳ ಬೆನ್ನಿಗೇ ಹಿರಿಯ ತೋಪುಗಳು, ಸಣ್ಣ ತೋ
ಗಳು, ಭಯಂಕರ ಮತಾಪುಗಳು,ತಾರಾಮಂಡಲಗಳು, ರಾಮಬಾಣಗ
ರಾಮಚಂಗಿಗಳು, ರಣಗಾಡಿಗಳೂ ವಿಪುಲವಾಗಿದ್ದವು. ಪದಾತಿಗ
ಗೋಲಂದಾಜರೂ, ಭರ್ಜಿಯವರಿಗೆ ಒಂದು ಗುಂಪು. ಕೊಳಲು, ತ
ಯವರು, ನೀರುಗುಂಟಿಗಳು, ಮಹಲುದಾರರು, ಕಲ್ಲಕುಟಿಗರೂ, ಜ
ಗಾರರೂ, ಬಡಗಿಗಳೂ, ಮಹಲುದಾರರೂ, ಸೇರಿಯುವರೂ, ಒ
ಗುಂಪು. ರಾಜಬಂಧುಗಳೂ, ಪುರೋಹಿತರೂ, ಪುರಾಣಿಕರೂ, ಕ
ವಿದರೂ ಮತ್ತೊಂದು ಗುಂಪು.

ಹೀಗೆ ಸಾಗಿತ್ತು ಗುಂಪುಗುಂಪುಗಳಾಗಿ ರಾಯನ ಸೈನ್ಯ.

ಸೈನ್ಯದ ಮುಖದಲ್ಲಿ ಸುಮಾರು ನಾಲ್ಕುಗಾವುದು ದೂರದಲ್ಲಿ ಐವ
ಸಾವಿರ ಜನರ ಸೈನ್ಯ ಸಾಗಿತ್ತು. ಇವರ ಕೆಲಸವೇನೆಂದರೆ ಶತ್ರುಗಳ ಚ
ವಲನಗಳನ್ನು ಪರಿಶೀಲಿಸಿ ಸೈನ್ಯ ಶಿಬಿರಕ್ಕೆ ಮುಟ್ಟಿಸುವುದು. ಸೈನ
ಬೇಕಾಗುವ ನೀರನ್ನೂ ಸರಬರಾಜು ಮಾಡಲು ಹನ್ನೆರಡು ಸಾವಿರ ನೀ
ಗಂಟಿಗಳು ನಿಯೋಜಿತರಾಗಿದ್ದರು. ಅವರು ದಂಡಿನ ಮುಖದಲ್ಲಿ ಸಂ
ಸುತ್ತ ಕುಡಿಯುವ ನೀರನ್ನೂ ನೀರು ದೊರಕುವ ಸ್ಥಳಗಳಿಂದ ಚವ
ಚೀಲಗಳಲ್ಲಿ, ಗಾಡಿಗಳ ಮೇಲೆ, ಎತ್ತು, ಕುದುರೆಗಳ ಮೇಲೆ ತ
ಸೈನ್ಯಕ್ಕೆ ಒದಗಿಸುತ್ತಿದ್ದರು. ಅಂತೆಯೇ ಸೈನಿಕರ ಬಟ್ಟೆ ಒಗೆಯಲು
ಸರೂ, ಸೈನಿಕರ ಮನರಂಜಿಸಲು ಹಾವಾಡಿಗರೂ, ದೊಂಬರೂ, ಸಂಗಿ
ಗಾರರೂ, ನಾಟಕದವರೂ ಇದ್ದರು.

ಈ ಸೈನ್ಯ ಸುಮಾರು ಮೂರು ನಾಲ್ಕು ತಿಂಗಳು ಸಂತತವಾಗಿ
ಣವಮಾಡಿ, ರಾಯಚೂರಿನ ಬಳಿಗೆ ಬಂದಿಳಿಯಿತು. ರಾಯಚೂ
ಮೀಪದಲ್ಲಿ ಮಲ್ಲಿಯ ಬಂಡೆ ಎಂಬ ಸ್ಥಳದಲ್ಲಿ ಸೈನ್ಯವು ಬೀಡುಬಿಟ್ಟು
ಕಾಲ ವಿಶ್ರಾಂತಿ ತೆಗೆದುಕೊಳ್ಳಲು ತಂಗಿತು. ರಾಯನು ಮುಂದೆ
ಲಿರುವ ಮುತ್ತಿಗೆಯ ಯೋಜನೆಯನ್ನು ಸಿದ್ಧಪಡಿಸಲು ಪ್ರಾರಂಭಿ
.

ಮಲ್ಲಬಂಡೆಯಲ್ಲಿ ಬೀಡು ಬಿಟ್ಟಿದ್ದ ರಾಯನ ಸೈನ್ಯ ಶಿಬಿರವನ್ನು
ದರೆ ಎಂತಹವರಿಗೂ ಅಚ್ಚರಿಯಾಗುತ್ತಿತ್ತು. ಶಿಬಿರದ ಕೇಂದ್ರದಲ್ಲಿ
ನ ಶಿಬಿರ. ಅದರ ಸುತ್ತಲೂ ದುರ್ಭೇದ್ಯವಾದ ಮುಳ್ಳಿನ ಬೇಲಿ.
ದ್ವಾರದಲ್ಲಿ ಸದಾಕಾಲ ಶಸ್ತ್ರಸಜ್ಜಿತ ಸೈನಿಕರು ಕಾಯುತ್ತಿದ್ದರು.
ನ ಶಿಬಿರದ ಹೊರವಲಯದಲ್ಲಿ ಸುತ್ತಲೂ ಉಳಿದ ದಂಡನಾಯಕರ
ಳು ಎಲ್ಲರಿಗೂ ಅವರವರ ದರ್ಜೆಗೆ ಅನುಕೂಲವಾಗುವಂತೆ
ನ್ಯವನ್ನು ಕಲ್ಪಿಸಿಕೊಟ್ಟಿದ್ದರು. ಹೊರನೋಟಕ್ಕೆ ಅದು ಚಲಿಸುವ
ಂತೆ ಕಾಣುತ್ತಿತ್ತು. ನಗರದಲ್ಲಿ ದೊರೆಯುವ ಎಲ್ಲ ಸೌಲಭ್ಯಗಳು
ೊರೆಯುತ್ತಿದ್ದವು.

ಇಲ್ಲಿ ಒಂದು ತಿಂಗಳ ಕಾಲ ರಾಯನು ವಿಶ್ರಾಂತಿಯನ್ನನುಭವಿಸಿ
ರಾಯಚೂರಿನ ಮೇಲೆ ಧಾಳಿಯಿಡಲು ನಿರ್ಧರಿಸಿದನು. ಆದರೆ
ನು ಶತ್ರುವನ್ನು ಹುಡುಕಿಕೊಂಡು ಹೋಗಬೇಕಾಗಿರಲಿಲ್ಲ. ಶತ್ರುವೇ
ನಿದ್ದಲ್ಲಿಗೆ ಬಂದನು.

ಅದಿಲ್‌ಷಹನು ಕೃಷ್ಣದೇವರಾಯನ ಪ್ರಚಂಡಸೇನೆಯನ್ನು ನೋಡಿ
ಶರಣಾಗತನಾಗಲಿಲ್ಲ. ಅವನು ಈ ಮೂರು ನಾಲ್ಕು ವರ್ಷಗಳಲ್ಲಿ
ನ ಮೇಲೆ ಬೀಳಲೆಂದೇ ಸೈನ್ಯವನ್ನು ಸಂಗ್ರಹಿಸುತ್ತಾ ಬಂದಿದ್ದನು.
ರಾಯನಂತೆಯೇ ವೀರಯೋಧ. ಮೇಲಾಗಿ ಮದೋನ್ಮತ್ತ.
ಹಿಂದಿನ ಸುಲ್ತಾನರೂ ವೈಭವಶಾಲಿಗಳು. ಅನೇಕ ವರ್ಷಗಳಿಂದ
ಜ್ಯದ ಆಕ್ರಮಣ, ಸುಲಿಗೆಗಳಿಂದ ರಾಜ ಬೊಕ್ಕಸವನ್ನು ತುಂಬಿದ್ದರು.
ಬಹಮನೀ ರಾಜ್ಯಗಳಿಗೆ ಬಿಜಾಪುರ ಮಕುಟಪ್ರಾಯವಾಗಿತ್ತು.
ಪುರದ ಏಳಿಗೆಯನ್ನು ಕಂಡು ಕರುಬುತ್ತಿದ್ದರೂ—ಬಿಜಾಪುರದ ವಿರುದ್ಧ

ಯುದ್ಧ ಕೈಗೂಡಲಾಗದೆ ಇತರ ಮಹಮದೀಯ ಸುಲ್ತಾನರು ಬಿಜಾಪು ರದ ಸುಲ್ತಾನನನ್ನು ತಮ್ಮ ನಾಯಕನೆಂದು ಅಂಗೀಕರಿಸಿದ್ದರು. ದುರ್ಬಲ ರಾಜರು ವಿಜಯನಗರದ ಸಿಂಹಾಸನವನ್ನು ಹತ್ತಿದಾಗ ಅವರನ್ನು ಸೋಲಿಸಿ ಬಿಜಾಪುರದ ಸುಲ್ತಾನರು ವಿಜಯನಗರಕ್ಕೆ ಸೇರಿದ್ದ, ರಾಯಚೂರು, ಮುದ್ಗಲ್ಲುಗಳನ್ನು ವಶಮಾಡಿಕೊಂಡು ತಮ್ಮ ಗಡಿಯನ್ನು ಮುಂದೊತ್ತಿದ್ದರು. ಇವುಗಳನ್ನು ಆಕ್ರಮಿಸಿಕೊಳ್ಳಲೆಂದೇ ರಾಯನು ರಾಯಚೂರಿನ ಮೇಲೆ ಧಾಳಿಯಿಡಲು ಬಂದದ್ದು.

ರಾಯನು ತನ್ನ ಪ್ರಚಂಡ ಸೇನೆಯನ್ನು ನೋಡಿ ಬಿಜಾಪುರದ ಸುಲ್ತಾನನು ಶರಣಾಗತನಾಗುವನೆಂದು ಊಹಿಸಿದ್ದನು. ಆದರೆ ಆ ಊಹೆ ಸುಳ್ಳಾಯಿತು.

ಬಿಜಾಪುರದ ಸುಲ್ತಾನ ಇಬ್ರಾಹಿಂ ಅದಿಲ್‌ಷಹನು ಏಕಾಂಗಿಯಾ ಗಿಯೇ ರಾಯನನ್ನು ಎದುರಿಸಲು ತನ್ನ ಸಮಸ್ತ ಸೇನಾಬಲದೊಂದಿಗೆ ಕೃಷ್ಣೆಯ ಇನ್ನೊಂದೆಡೆಯಲ್ಲಿ ಶಿಬಿರವನ್ನು ಹಾಕಿ ನಿಂತನು. ಉಳಿದ ಸುಲ್ತಾ ನರಿಗೂ ಅದಿಲ್‌ಷಹನಿಗೂ ವೈಮನಸ್ಯವಿದ್ದುದರಿಂದ ಈಗ ಸುಲ್ತಾನನಿ ತಮ್ಮ ಸಹಾಯವನ್ನು ನಿರಾಕರಿಸಿದರು. ಎಲ್ಲ ರಾಜ್ಯಗಳ ಸೈನ್ಯವನ್ನು ಸಂಗ್ರಹಿಸಿಕೊಂಡು ಬಂದಿದ್ದರೆ ಅವನನ್ನು ಸೋಲಿಸುವುದು ಕಷ್ಟವೇ ಆಗ ತ್ತಿತ್ತು. ಅದಿಲ್‌ಷಹನಿಗೆ, ರಾಯನನ್ನು ಬಗ್ಗು ಬಡೆದು, ಅವನನ್ನು ಸೋಲಿಸಿ, ಅನಂತರ ಉಳಿದ ಬಹಮನೀ ಸುಲ್ತಾನರನ್ನು ನೋಡಿಕೊಳ್ಳ ಬೇಕೆಂಬ ಆಸೆ. ರಾಯನನ್ನು ಸೋಲಿಸಿದ ಮೇಲೆ, ತಾನು ಅವರ ಮೇಲೆ ದಂಡೆತ್ತಿ ಹೋಗಬೇಕಾದ ಕಾರಣವೇ ಇಲ್ಲ. ತಾವಾಗಿಯೇ ಅವರು ತನ್ನ ಅಧೀನರಾಗುವರು ಎಂದೆಲ್ಲ ಕನಸು ಕಾಣುತ್ತ, ಸುಲ್ತಾನನು ಕೃಷ್ಣೆಯ ದಂಡೆಯಲ್ಲಿ ರಾಯನ ಚಲನ ವಲನಗಳನ್ನು ಈಕ್ಷಿಸುತ್ತಾ ಕುಳಿತನು.

ಇದರಿಂದ ರಾಯನಿಗೆ ಬಹಳ ನಿರಾಶೆಯಾಯಿತು. ಅವನಿ ಒಮ್ಮೊಮ್ಮೆ ಇಲ್ಲಿ ಕುಳಿತಿರುವುದು ಕಾಲಹರಣವಾಗುತ್ತಿದೆ ಎಂದೆನಿಸುತ್ತಿತ್ತು ಮೊದಲು ಹೋಗಿ ಅದಿಲ್‌ಷಹನ ಸೈನ್ಯದ ಮೇಲೆ ಬಿದ್ದು ಅವನನ್ನ ಸೋಲಿಸಬೇಕೆಂದು ಚಡಪಡಿಸಿದನು. ಆದರೆ ತಿಮ್ಮರಸನು ಶತ್ರುವೇ ತವ ಮೇಲೆ ಬೀಳಲು ಹೊಂಚು ಹಾಕಿ ಕಾದಿರುವಾಗ ತಾವು ಯಾವ ಒಂದ

ತಪ್ಪು ಮಾಡಿದರೂ, ಅದರಿಂದ ತಮಗೆ ಅನರ್ಥವಾಗುವುದೆಂದೂ, ತಾವು ಆದಿಲ್‌ಷಹನ ಸೈನ್ಯದ ಮೇಲೆ ಬೀಳಲು ಹೋದರೆ ತುಂಬು ಪ್ರವಾಹದ ಕೃಷ್ಣೆಯನ್ನು ದಾಟಬೇಕೆಂದೂ ಆದ್ದರಿಂದ ಶತ್ರುಗಳಮೇಲೆ ಜಯ ಸಂಪಾದಿಸುವುದು ಕಷ್ಟವೆಂದೂ, ವಿವೇಕ ಹೇಳಿದನು. ತಿಮ್ಮರಸನ ಅನುಭವಪೂರ್ಣವಾದ ಮಾತುಗಳಿಂದ ರಾಯನ ಉತ್ಸಾಹಕ್ಕೆ ತಣ್ಣೀರೆರಚಿದಂತಾದರೂ ಅವುಗಳು ವಿಚಾರ ಮಾಡಬೇಕಾದ್ದ ವಿಷಯವಾದ್ದರಿಂದ ರಾಯನು ಸುಮ್ಮನಾದನು.

ಈ ಮಧ್ಯೆ ತಿಮ್ಮರಸನು ಉಪಾಯಾಂತರವಾಗಿ, ಅದಿಲ್‌ಷಹನ ಕಿವಿಗೆ ಒಂದು ಸುಳ್ಳು ಸುದ್ದಿ ಬೀಳುವಂತೆ ಮಾಡಿದ್ದನು. ಅದಿಲ್‌ಷಹನ ಅಪಾರ ಸೈನ್ಯವನ್ನು ನೋಡಿ ಕೃಷ್ಣದೇವರಾಯನು ಗಾಬರಿಗೊಂಡಿರುವನೆಂದೂ, ಅಂತಲೇ ಆದಿಲ್‌ಷಹನ ಮೇಲೆ ಬೀಳಲು ಹೆದರಿ ತಟಸ್ಥನಾಗಿರುವನೆಂದೂ ಅದಿಲ್‌ಷಹನ ಕಿವಿಗೆ ಸುದ್ದಿಬಿತ್ತು. ಇದನ್ನು ನಿಜವೆಂದೇ ನಂಬಿ ಅವನು ಒಂದು ದೊಡ್ಡ ಅವಿವೇಕದ ಕೆಲಸ ಮಾಡಿದನು. ರಾಯನು ತನ್ನ ಸೈನ್ಯಕ್ಕೆ ಹೆದರಿ ಕುಳಿತಿರುವುದರಿಂದಲೇ, ತಮ್ಮ ವೈಮೇಲೆ ಬೀಳಲು ಹಿಂದು ಮುಂದು ತುಳಿಯುತ್ತಿರುವುದು. ರಾಯನು ಹೆದರಿರುವಾಗಲೇ, ತಾನು ನದಿಯನ್ನು ದಾಟಿ, ರಾಯನ ಸೈನ್ಯವನ್ನು ಮುತ್ತಿ ಹಾವಳಿ ಮಾಡಿದರೆ, ರಾಯನು ಶಿಬಿರದಿಂದ ಓಡಿ ಹೋಗುವನೆಂದೂ ತನಗೆ ಅಖಂಡ ಜಯ ದೊರೆಯುವುದೆಂದೂ ಭಾವಿಸಿದನು. ಇದಕ್ಕೆ ಇಂಬುಗೊಡುವಂತೆ, ಅದಿಲ್‌ಷಹನ ಬಲಗೈಯಂತಿದ್ದ ಸೇನಾಧಿಪತಿ, ಅಂಕುಸ್‌ಖಾನನು, ಅದಿಲ್‌ಷಹನಿಗೆ ಹೀಗೆ ಸಲಹೆ ಮಾಡಿದನು.

'ಖಾವಂದ್, ಕೃಷ್ಣದೇವರಾಯನು ನಮ್ಮ ಸೈನ್ಯವನ್ನು ನೋಡಿ ಬಹಳ ಹೆದರಿದ್ದಾನೆ. ಹೀಗೆಂಬ ಕೂಗು ಎಲ್ಲೆಡೆಯೂ ಹಬ್ಬಿದೆ. ನಾವು ಇಲ್ಲಿಗೆ ಬಂದು ತಿಂಗಳಾದರೂ, ಇನ್ನೂ ನಮ್ಮ ಮೇಲೆ ಬೀಳುವ ಪ್ರಯತ್ನ ಮಾಡದೆ ಇರುವುಧನ್ನು ನೋಡಿದರೆ ಈ ಮಾತಿನಲ್ಲಿ ಸತ್ಯವಿದೆ ಎನಿಸುತ್ತದೆ. ಕೃಷ್ಣದೇವರಾಯನು, ತನ್ನ ಪೂರ್ವಜರಿಗೆ ಬಿಜಾಪುರದ ಸುಲ್ತಾನರಿಂದ ಉಂಟಾಗಿದ್ದ ಪರಾಭವ, ಅಪಮಾನ, ಕಿರುಕುಳಗಳನ್ನು ನೆನೆದು ತತ್ತರಿಸಿರಬೇಕು. ಹೆದರಿ, ಕುರಿ ಹಿಂಡಿನಂತಿರುವ ಸೈನ್ಯವನ್ನು ನಿಮಿಷ ಮಾತ್ರದಲ್ಲಿ

ಹೊಸಕಿಹಾಕಬಹುದು. ನಾವು ನದಿಯನ್ನು ದಾಟಿ, ಶತ್ರುಗಳ ಮೇಲೆ ಹಠಾತ್ತನೆ ಬಿದ್ದರೆ ಜಯದ ಮಾಲೆ ನಮ್ಮ ಕೊರಳಿಗೇ ಬೀಳುವುದು. ಇದು ಖಂಡಿತ.'

ಅಂಕುಸ್‌ಖಾನನ ಮಾತು ಅದಿಲ್‌ಷಹನಿಗೆ ತುಂಬಾ ಪ್ರಿಯವಾಯಿತು. ಆದರೆ ಅಂಕುಸ್‌ಖಾನನ ಸಲಹೆಯನ್ನು ಅನುಮೋದಿಸದೆ ಇರುವವರೂ ಅದಿಲ್‌ಷಹನ ಶಿಬಿರದಲ್ಲಿ ಇಲ್ಲದಿರಲಿಲ್ಲ. ರಾಜತಂತ್ರಜ್ಞರಾದ ಸಲಬತ್‌ಖಾನ್ ಮೊದಲಾದ ವೀರರು ಈ ಸಲಹೆಯನ್ನು ಅನುಮೋದಿಸಲಿಲ್ಲ. ಯುದ್ಧಕುಶಲನಾದ ಕೃಷ್ಣದೇವರಾಯನು ತಟಸ್ಥನಾಗಿರುವುದರಲ್ಲಿ ಏನೋ ಕುಟಿಲತೆ ಅಡಗಿದೆ ಎಂದು ಅವನ ವಾದ. ತಾವು ತುಂಬಿ ಹರಿಯುತ್ತಿರುವ ನದಿಯನ್ನು ದಾಟಿ ಶತ್ರುಗಳ ಮೇಲೆ ಬಿದ್ದರೆ ಶತ್ರುಗಳ ಕೈ ಮೇಲಾಗಿ ತಮಗೆ ತಪ್ಪಿಸಿಕೊಂಡು ಹೋಗಲು ಮಾರ್ಗವಿಲ್ಲದೆ ತಾವು ಶತ್ರುಗಳಿಗೆ ಸುಲಭವಾಗಿ ಬಲಿಯಾಗುವುದಾಗಿಯೂ ಅವನು ವಾದಿಸಿದನು. ಸ್ವಯಂ ಸುಲ್ತಾನನೇ ಯುದ್ಧಕ್ಕಾಗಿ ಚಡಪಡಿಸುತ್ತಿದ್ದುದರಿಂದ ಸಲಬತ್ ಖಾನನ ಮಾತನ್ನು ಯಾರೂ ಲಕ್ಷಿಸಲಿಲ್ಲ.

ಅದಿಲ್‌ಷಹನ ನಿರ್ಧಾರದಂತೆ ಒಂದು ದಿನ ರಾತ್ರಿ ಅವನ ಸೈನ್ಯವೆಲ್ಲ ನದಿ ಹೆಚ್ಚು ಆಳವಿಲ್ಲದ ಸ್ಥಳದಲ್ಲಿ ನದಿಯನ್ನು ದಾಟಿತು. ಪದಾತಿಗಳೂ, ಬಿಲ್ಗಾರರೂ, ಕತ್ತಿ ಗುರಾಣಿಯವರೂ, ಅಶ್ವ ಸೈನ್ಯ, ಗಜಸೈನ್ಯಗಳೂ ನದಿಯನ್ನು ಸುರಕ್ಷಿತವಾಗಿ ದಾಟಿಬಂದುವು. ನದಿಯ ಇನ್ನೊಂದು ದಂಡೆಯಲ್ಲಿ ಅದಿಲ್‌ಷಹನ ಸೈನ್ಯಶಿಬಿರ ಹೂಡಲಾಯಿತು.

ಇದು ಅವನು ಮಾಡಿದ ಅವಿವೇಕದ ಪರಮಾವಧಿ ಎಂದೇ ಹೇಳಬೇಕು. ಅವರು ನದಿಯನ್ನು ಹಾದು ಈ ದಂಡೆಗೆ ಬಂದುದು ಕುರಿ ಕಟುಕನನ್ನು ಹುಡುಕಿಕೊಂಡು ಬಂದಂತಾಯಿತು. ಅದಿಲ್‌ಷಹನು ಮಾಡಿದ ಅವಿವೇಕದಿಂದ ಕೃಷ್ಣದೇವರಾಯನ ಕೆಲಸ ಸುಲಭವಾಯಿತು. ಇನ್ನು ಜಯ ಸಿದ್ಧವೆಂದು ರಾಯನು ಮನದಲ್ಲೇ ಹರ್ಷಿಸಿದನು.

೬

ರಾತ್ರಿಯೆಲ್ಲ ಶಿಬಿರದಲ್ಲಿ ಯಾರಿಗೂ ನಿದ್ರೆಯಿಲ್ಲ. ಕೃಷ್ಣದೇವರಾಯ ನಿಂದ ತೊಡಗಿ ಸಾಮಾನ್ಯ ಸೈನಿಕನವರಿಗೆ ಎಲ್ಲರಿಗೂ ಯುದ್ಧದ ಗಡಿಬಿಡಿ–ಸಂಭ್ರಮ. ಮರುದಿನ ಮುಂಜಾನೆ ಆದಿಲ್‌ಷಹನ ಸೈನ್ಯದ ಮೇಲೆ ಧಾಳಿ ಯಿಡಬೇಕೆಂದು ರಾಯನು ನಿರ್ಧರಿಸಿದ್ದನು. ರಾಯನ ನಿರ್ಧಾರವನ್ನು ಸೈನಿಕ ಶಿಬಿರದಲ್ಲಿ ಕೊಂಬು ಕಹಳೆಗಳ ಮೂಲಕ ಬಿತ್ತರಿಸಲಾಯಿತು. ಎಲ್ಲೆಲ್ಲೂ ಸಂತೋಷ, ಉತ್ಸಾಹಗಳು ತಾಂಡವಾಡುತ್ತಿತ್ತು. ಸೈನಿಕರಿಗೆ ಎಂದಿಗೆ ಬೆಳಗಾಗುವುದೊ, ವೈರಿಗಳ ನಿರ್ನಾಮಕ್ಕೆ ಎಂದಿಗೆ ತೊಡಗುವೆವೊ ಎಂಬ ಕಾತರ.

ಶಿಬಿರದಲ್ಲಿ ಯಾರಿಗೂ ಮನಸ್ಸು ಸ್ಥಿಮಿತದಲ್ಲಿರಲಿಲ್ಲ. ಎಲ್ಲರಿಗೂ ಮರುದಿನ ಬರಲಿರುವ ಯುದ್ಧದಲ್ಲಿ ಏನಾಗುವುದೋ ಎಂಬ ಕಳವಳ. ವಿಜ ಯವೇನೋ ತಮ್ಮ ಪಾಲಿಗೇ ಎಂಬ ನಂಬಿಕೆ ಇದ್ದರೂ ಯುದ್ಧದ ಮಾತು ಹೀಗೆಂದು ಹೇಳಲು ಬಾರದು! ಕಡೆಯತನಕ ಸೋಲಾದಂತೆ ಕಂಡಮೇಲೂ ಎಷ್ಟೋ ಬಾರಿ ವಿಜಯದಲ್ಲಿ ಯುದ್ಧ ಪರಿಸಮಾಪ್ತಿಯಾಗುವುದೂ, ಆರಂಭ ದಲ್ಲಿ ಜಯವಾದಂತೆ ಕಂಡು ಅಂತ್ಯದಲ್ಲಿ ಸೋಲಾಗುವುದೂ ಯುದ್ಧದಲ್ಲಿ ಅಚ್ಚರಿಯಲ್ಲ. ಕಟ್ಟಕಡೆಯ ಘಳಿಗೆಯಲ್ಲಿ ಒಬ್ಬ ವ್ಯಕ್ತಿಯ ಧೈರ್ಯ ಸಾಹಸ ಗಳಿಂದ ಯುದ್ಧ ನಿರ್ಣಯವಾಗಬಹುದು. ಯುದ್ಧವೆಂದರೆ ದೈವದ ಒಂದು ಆಟ. ಇದರಲ್ಲಿ ಸೋಲು ಗೆಲವುಗಳನ್ನು ನಿರ್ಣಯಿಸುವುದು ಅಗೋಚರ ಶಕ್ತಿಯೇ ಹೊರತು ಮನುಷ್ಯರಲ್ಲ! ಅಂತಲೇ ಸೈನಿಕರಿಗೆಲ್ಲಾ ಯುದ್ಧದಲ್ಲಿ ಏನಾಗುವುದೊ ಎನ್ನುವ ಕಳವಳ ಆರಂಭವಾಗಿತ್ತು.

ಹೀಗಿದ್ದರೂ ಶಿಬಿರದಲ್ಲಿ ಉತ್ಸಾಹಶಾಲಿಗಳಿಗೆ ಕೊರತೆಯಿರಲಿಲ್ಲ. ಹಲವು ಬಾರಿ ಯುದ್ಧದಲ್ಲಿ ಪಾತ್ರವಹಿಸಿ ಯಶಸ್ವಿಯಾಗಿದ್ದವರೂ—ಹರೆ ಯದ ಯುವಕರೂ ಯುದ್ಧದ ಬಗ್ಗೆ ಆಶಾವಾದಿಗಳಾಗಿಯೇ ಇದ್ದರು. ತಮ್ಮ ಶಕ್ತಿಸಾಮರ್ಥ್ಯಗಳನ್ನು ಪ್ರದರ್ಶಿಸಲು ಅದೊಂದು ಅಪೂರ್ವ ಸುಯೋಗವೆಂದೇ ಅವರ ಭಾವನೆ ಇದು ಒಂದು ಪಂಗಡದ ಮನೋಭಾ ವದ ಚಿತ್ರಣ. ಮತ್ತೊಂದು ಪಂಗಡಕ್ಕೆ ಯುದ್ಧದಲ್ಲಿ ಕೊಳ್ಳೆ ಹೊಡೆಯುವ

ಆಸೆ. ಮಹಮುದೀಯ ಸೈನ್ಯ ಶಿಬಿರದಲ್ಲಿನ ವೈಭವ ಅಲ್ಲಿ ದೊರೆಯು
ದ್ರಾಕ್ಷಾರಸ, ನರ್ತಕಿಯರ ಕೀರ್ತಿ ಕೇಳಿದ್ದವರಿಗೆ ಗಮನ ಹರಿಂ
ದ್ದುದೂ ಆ ಕಡೆಗೇ. ಶತ್ರುಸೈನ್ಯದ ಮೇಲೆ ಬಿದ್ದು ವೀರಾವೇಶ
ಹೋರಾಡಬೇಕೇ ಹೊರತು ಸುಲಿಗೆಗೆ ಮತ್ತು ಹೆಂಗಸರ ಗೊಡವೆಗೆ ಹ
ಬಾರದೆಂಬ ಅಭಿಪ್ರಾಯ ಕೆಲವರದಾದರೆ, ಹೆಂಡಿರು ಮಕ್ಕಳನ್ನು
ಸಾವಿನ ದವಡೆಗೆ ನುಗ್ಗಲು ಸಿದ್ಧರಾಗಿರುವಾಗ, ಭೂಮಿಯ ಮೇಲೆ
ಸುಖವನ್ನನುಭವಿಸಬಹುದೋ ಅಷ್ಟನ್ನು ಅನುಭವಿಸಿಬಿಡಬೇಕೆಂದು
ಕೆಲವರ ಅಭಿಪ್ರಾಯ. ಹೀಗೆ ಬೇರೆ ಬೇರೆ ಅಭಿಪ್ರಾಯಗಳಿಂದ ಪ್ರೇ
ರಾಗಿ, ಸೈನಿಕರು ಯುದ್ಧ ಸನ್ನದ್ಧರಾಗತೊಡಗಿದ್ದರು.

ರಾಯನಂತೂ ಇಡೀ ರಾತ್ರಿಯನ್ನು ಮುಂದಿನ ಯುದ್ಧದ
ಆಲೋಚಿಸುವುದರಲ್ಲಿಯೇ ಕಳೆದಿದ್ದನು. ಸೈನ್ಯಾಧಿಪತ್ಯದ ಅಗ್ರ
ವನ್ನು ಯಾರಿಗೆ ಕೊಡಬೇಕು, ಯುದ್ಧವನ್ನು ಹೇಗೆ ಆರಂಭಿಸಬೆ
ರಕ್ಷಣಾ ವ್ಯವಸ್ಥೆ, ವ್ಯೂಹರಚನೆ ಇವೇ ಮೊದಲಾದ ವಿಷಯಗಳಲ್ಲಿ
ಕೈಕೆಳಗಿನ ದಂಡನಾಯಕರೊಂದಿಗೆ ಸಮಾಲೋಚನೆ ಮಾಡುವುದರಲ್ಲಿ
ರಾಯನ ಎಲ್ಲ ವೇಳೆ ಸರಿದಿತ್ತು. ತಿಮ್ಮರಸನಂತೂ ಯುವಕರನ್ನು
ಸುವ ಉತ್ಸಾಹದಲ್ಲಿ ಸೈನ್ಯಕ್ಕೆ ಸಂಬಂಧಿಸಿದ ಅನೇಕ ವಿಚಾರಗಳಲ್ಲಿ
ಗೊಟ್ಟು ಹಗಲು ರಾತ್ರಿಯೆನ್ನದೆ ದುಡಿಯುತ್ತಿದ್ದನು.

ಸೂರ್ಯೋದಯದೊಳಗಾಗಿ ಎಲ್ಲ ಸಿದ್ಧತೆ ಮುಗಿಯಬೇ
ಅಂತಲೇ ರಾತ್ರಿಯೆಲ್ಲಾ ಶಿಬಿರದಲ್ಲಿ ಜೇನು ನೊಣಗಳನ್ನು ಮೀ
ಚಟುವಟಿಕೆ. ಶಿಬಿರವನ್ನು ಕೀಳುವ ಚಟುವಟಿಕೆ. ತಮ್ಮ ಬಾಣ,
ಮೊದಲಾದ ಶಸ್ತ್ರಾಸ್ತ್ರಗಳನ್ನು ಸಜ್ಜುಗೊಳಿಸುವುದರಲ್ಲಿ, ತಮ್ಮ ವಾ
ಳಾದ ಆನೆ, ಕುದುರೆ, ಒಂಟೆಗಳನ್ನು ಸಿಂಗರಿಸಿ ಸಿದ್ಧಪಡಿಸುವುದರಲ್ಲಿ ಎ
ತೊಡಗಿದ್ದರು. ಎಷ್ಟು ಮಾಡಿದರೂ ಮುಗಿಯದ ಕೆಲಸಗಳು
ಇದ್ದೇ ಇದ್ದವು.

ಮುಂಜಾನೆಯ ವೇಳೆಗೆ, ಸೂರ್ಯೋದಯವಾಗುವುದಕ್ಕಿಂತ ಮೊ
ಸೈನ್ಯ ಶಿಬಿರವನ್ನು ಕಿತ್ತು ಹೊರಡಬೇಕಾಗಿತ್ತು. ರಾಯನು ದಂಡನಾ
ಕರ ಸಭೆ ಸೇರಿಸಿ ಶ್ರೀರಂಗಪಟ್ಟಣದ ಮಂಡಲೇಶ್ವರ ಕುಮಾರ ವೀ

ನಿಗೆ ಸೈನ್ಯಾಧಿಪತಿಯ ಪಟ್ಟಕಟ್ಟಿ ಅಗ್ರತಾಂಬೂಲವನ್ನು ಕೊಟ್ಟು ಮರು ದಿನದ ನಾಯಕನೆಂದು ಘೋಷಿಸಿದರು.

ಯುದ್ಧಕ್ಕೆ ತೆರಳುವ ಮುನ್ನ ಯುದ್ಧದಲ್ಲಿ ತಮಗೆ ಜಯ ದೊರೆಯಲೆಂದು ದೇವತೆಗಳ ಪ್ರಾರ್ಥನೆ. ಅನಂತರ ಯುದ್ಧದ ಅಭಿಮಾನ ದೇವತೆಗಳಿಗೆ ನರಬಲಿ. ಇದಾದನಂತರವೇ ಯುದ್ಧಕ್ಕೆ ಪ್ರಯಾಣ.

ಯುದ್ಧಾಭಿಮಾನದೇವತೆಯ ಪ್ರೀತ್ಯರ್ಥವಾಗಿ, ರಣಗಂಬವೊಂದನ್ನು ನಿಲ್ಲಿಸಲಾಗಿತ್ತು. ಅದನ್ನು ಅರಶಿನ ಕುಂಕುಮಗಳಿಂದ ಪೂಜಿಸಲಾಯಿತು. ಪುರೋಹಿತರು ವೇದಮಂತ್ರಗಳನ್ನು ಘೋಷಿಸಿ ರಣಗಂಬದಲ್ಲಿ ದೇವಿಯ ಆವಾಹನೆ ಮಾಡಿದರು. ಅನಂತರ ತಾನಾಗಿಯೇ 'ಭೈರವ'ನಾಗಲು ಒಪ್ಪಿದ್ದ ವ್ಯಕ್ತಿಯನ್ನು ವೈಭವದಿಂದ ಕರೆತರಲಾಯಿತು. ಅವನು ಕೆಂಪು ವಸ್ತ್ರವನ್ನುಟ್ಟು, ಮುಡಿಗೆ ಕೆಂಪುಬಣ್ಣದ ಬಗೆಬಗೆಯ ಹೂಗಳನ್ನು ಮುಡಿದಿದ್ದನು ಹಣೆಯ ತುಂಬಾ ಕುಂಕುಮಲೇಪನ. ಅವನು ರಕ್ತದಲ್ಲಿ ತೊಯ್ದ ಕತ್ತಿಯನ್ನು ಝಳಪಿಸುತ್ತಾ, ಕೊರಳಿಗೆ ದಾಸವಾಳದ ಮಾಲೆಯನ್ನು ಹಾಕಿಕೊಂಡು, ರಣವಾದ್ಯಗಳಿಗೆ ತಕ್ಕಂತೆ ಕುಣಿಯುತ್ತಾ ಸಶರೀರನಾಗಿಯೇ ಸ್ವರ್ಗಕ್ಕೆ ಹೋಗುವವನಂತೆ ಆವೇಶದಲ್ಲಿ ಮೈಮರೆತಿದ್ದನು. ಅವನು ದೇವಿಯನ್ನು ಅನನ್ಯ ಭಕ್ತಿಯಿಂದ ನಮಸ್ಕರಿಸಿ ಪ್ರಾರ್ಥನೆ ಸಲ್ಲಿಸಿ ಅನಂತರ ರಣಗಂಬದ ಬಳಿಗೆ ಬಂದು ಮಂಡಿಯೂರಿ ಕುಳಿತುಕೊಂಡನು. ಎಲ್ಲರೂ ಅವನ ಮೇಲೆ ಪುಷ್ಪವೃಷ್ಟಿ ಕರೆದರು. ಅನಂತರ ರಣಗಂಬದ ಒಳಯೇ ನೆಟ್ಟಿದ್ದ ಸೆಳೆಗಂಬವನ್ನು ಬಾಗಿಸಿ, ಅದರ ಕೊನೆಗೆ ಭೈರವನ ಶಿಖೆಯನ್ನು ಭದ್ರವಾಗಿ ಕಟ್ಟಲಾಯಿತು. ಈಗ ರಣವಾದ್ಯಗಳು ಮತ್ತೊಮ್ಮೆ ಭಯಂಕರವಾಗಿ ಶಬ್ದಮಾಡಿದವು. ಭೇರಿ, ಕಹಳೆ, ಕೊಂಬುಗಳನ್ನು ಕಿವುಡಾಗುವಂತೆ ನುಡಿಸಲಾಯಿತು. ರಣೋನ್ಮತ್ತರಾದ ಸೈನಿಕರು ಜಯಘೋಷ ಮಾಡಿದರು. ಅವರು ನೋಡುತ್ತಿರುವಂತೆಯೇ ಒಬ್ಬ ಸೈನಿಕನು ಬಂದು ರಣಗಂಬದ ಬಳಿ ನಿಂತನು. ತನ್ನ ಒರೆಯಿಂದ ಕತ್ತಿ ಎಳೆದು ಕತ್ತಿಯನ್ನು ಮೂರು ಬಾರಿ ರಣಗಂಬಕ್ಕೆ ಮುಟ್ಟಿಸಿ, ನಮಸ್ಕರಿಸಿ, ಅದರ ಕೊನೆಯಿಂದ ಅವನ ತಲೆಗೆ ಮೂರು ಬಾರಿ ಮುಟ್ಟಿಸಿ ಕತ್ತಿಯನ್ನು ಬೀಸಿದನು. ಆ ಪೆಟ್ಟಿಗೆ ಭೈರವನ ರುಂಡ ಕ್ಷಣಾರ್ಧದಲ್ಲಿ ಮುಂಡದಿಂದ ಬೇರ್ಪಟ್ಟು ಬಾಗಿ

ಸಿದ್ಧ ಸೆಳೆಗಂಬ ನೆಟ್ಟಗಾಗಿ ರಣಗಂಬದ ಮಕುಟ ಮಣಿಯಂತೆ ಶೋಭಿಸಿತು. ಭೈರವನ ದೇಹ ನೆಲಕ್ಕುರುಳಿ ರಕ್ತದ ಕಾಲುವೆ ಹರಿಯಿತು.

ರಾಯನು ತನ್ನ ಸಕಲ ಸೈನ್ಯಕ್ಕೆ ಮುಂದುವರೆಯುವ ಆಜ್ಞೆಯಿತ್ತನು. ಸೈನಿಕರು ಮದವಣಿಗರಂತೆ ನಿಯತ ಗತಿಯಲ್ಲಿ ಹೊರಟರು.

ಸೂರ್ಯೋದಯವಾದ ಕೆಲವು ಕಾಲದಲ್ಲಿ ಎರಡು ಸೈನ್ಯಗಳು ಒಂದನ್ನೊಂದು ಸಂಧಿಸಿದವು. ಎಲ್ಲರಿಗೂ ಮುಂದಾಗಿ ಹೊರಟಿದ್ದ ಕುಮಾರ ವೀರಯ್ಯನ ದಳ ಭಯಂಕರ ಉತ್ಸಾಹದಲ್ಲಿ ಶತ್ರುಗಳ ಮೇಲೆ ಬಿದ್ದಿತು. ಅವರು ಕೈಗೆ ಸಿಕ್ಕಿದ ಶತ್ರುಗಳನ್ನು, ಕತ್ತಿ, ಈಟಿ, ಭಲ್ಲೆ, ಬಿಲ್ಲು ಬಾಣಗಳಿಂದ ತುಂಡರಿಸಿ ಚೆಂಡಾಡಿದರು. ಇದರಿಂದ ಶತ್ರು ಸೈನ್ಯ ಕೆಲವು ಕಾಲ ಗಾಬರಿಗೊಂಡಿತು. ಆಗ ಆದಿಲ್‌ಷಹನ ಸೇನಾನಿಗಳಿಗೆ ಬೇರೇನೂ ತೋರದೆ ಮೈಗಾವಲಿಗೆಂದು ನಿಲ್ಲಿಸಿದ್ದ ಫಿರಂಗಿಯ ಕಾರ್ಯಾಚರಣೆಗೆ ಆರಂಭಿಸಿದರು. ಹಠಾತ್ತಾಗಿ ಬರತೊಡಗಿದ ಗುಂಡಿನ ಮಳೆಯನ್ನು ಎದುರಿಸಲಾರದೆ ರಾಯನ ಸೈನ್ಯ ತರೆಗೆಲೆಯಂತೆ ನೆಲಕ್ಕುರುಳಿತು. ಇದರಿಂದ ಉಳಿದ ಸೈನ್ಯಕ್ಕೆ ಗಾಬರಿಯಾಗಿ ಪ್ರಾಣದ ಮೇಲಿನ ಆಸೆಯಿಂದ ಯುದ್ಧರಂಗದಿಂದ ಹಿಮ್ಮೆಟ್ಟಿ ಓಡತೊಡಗಿತು. ಈ ಸಮಯವನ್ನು ಸಾಧಿಸಿ ಆದಿಲ್‌ಷಹನ ಸೈನಿಕರು ಕೈಗೆ ಸಿಕ್ಕಿದ ರಾಯನ ಸೈನ್ಯವನ್ನು ಕೊಲ್ಲಲು ಅವರನ್ನು ಬೆನ್ನಟ್ಟಿಬಂದರು. ರಾಯನ ಸೈನ್ಯ ದಿಕ್ಕುಗೆಟ್ಟು ಚದುರಿ ಶತ್ರುಗಳ ಕೈಗೆ ಸಿಕ್ಕಿ ಅನ್ಯಾಯವಾಗಿ ಹತವಾಯಿತು. ಇದನ್ನು ಕಂಡ ಕೃಷ್ಣದೇವರಾಯನಿಗೆ ವಿಪರೀತ ಕೋಪ ಬಂತು. ಅವನು ಹಿಮ್ಮೆಟ್ಟಿ ಓಡುತ್ತಿರುವ ತನ್ನ ಸೈನಿಕರಿಗೆದುರಾಗಿ ಕುದುರಿಯನ್ನು ಓಡಿಸಿ ಏರಿದ ಧ್ವನಿಯಲ್ಲಿ ಗರ್ಜಿಸಿದನು.

'ರಣ ಹೇಡಿಗಳಿರಾ! ಓಡುತ್ತಿರುವಿರೇಕೆ? ನಿಮ್ಮ ಶೌರ್ಯಕ್ಕೆ ಧಿಕ್ಕಾರ! ನೀವು ಪುರುಷರೆ? ಕೈಯಲ್ಲಿ ಹಿಡಿದಿರುವುದು ಕತ್ತಿ ಎಂದು ಹೇಳಲು ನಿಮಗೆ ನಾಚಿಕೆಯಿಲ್ಲವೇ! ನೀವು ರಣರಂಗದಿಂದ ಓಡಿದರೂ ಪ್ರಾಣ ಉಳಿಯುತ್ತದೆಂದು ಭಾವಿಸಿದಿರಾ? ಇಲ್ಲಿ ಕೇಳಿ.... ನೀವು ಮುಂದೆ ನುಗ್ಗಿದರೆ ಶತ್ರುಗಳಿಂದ ಹತರಾಗುವಿರಿ! ಇದು ಖಂಡಿತ! ಇದರಿಂದ ನಿಮ್ಮ ಪ್ರಾಣ ಹೇಗೂ ಉಳಿಯುವುದಿಲ್ಲ! ಯುದ್ಧಕ್ಕೆ ಬಂದೂ ನಿಮಗಿನ್ನೂ ಪ್ರಾಣದ ಮೇಲೆ ಆಸೆಯೇ?.... ಧೀರರಾಗಿ ವರ್ತಿಸಿ! ನಿಮಗೂ ನಿಮ್ಮನ್ನು

ಹೆತ್ತವರಿಗೂ ಕೀರ್ತಿ ತನ್ನಿ ! ಹೇಡಿತನದಿಂದ ನಿಮ್ಮ ಸರ್ವನಾಶವಾಗುತ್ತದೆ. ಎಲೈ ವೀರಪುತ್ರರೇ ಏಳಿ ! ಹೆದರಬೇಡಿ. ಯುದ್ಧಮಾಡಿ ಮಡಿದರೆ ವೀರಸ್ವರ್ಗ. ಬದುಕಿ ಉಳಿದರೆ ಶತ್ರುಗಳನ್ನು ಜಯಿಸಿದ ಕೀರ್ತಿ ! ಇವುಗಳಲ್ಲಿ ಯಾವುದನ್ನು ಆರಿಸಿಕೊಳ್ಳುತ್ತೀರಿ ? ಮುಂದೆ ನುಗ್ಗಿ ! ಶತ್ರುಗಳನ್ನು ಸದೆಬಡಿದು ಯಮಪುರಿಗೆ ಅಟ್ಟಿ ! ಈ ಪವಿತ್ರ ಕಾರ್ಯದಲ್ಲಿ ಈ ನಶ್ವರ ದೇಹ ಬಿದ್ದು ಹೋಗಲಿ. ಎಂದಿದ್ದರೂ ಈ ನಶಿಸಬೇಕಾದ ದೇಹವನ್ನು ದೇಶದ ಹಿತಕ್ಕಾಗಿ ಬಲಿದಾನ ಮಾಡಿ. ಎಲೈ ಕನ್ನಡ ಪುತ್ರರೇ ! ನುಗ್ಗಿ ಮುಂದೆ ನುಗ್ಗಿ ! ಕತ್ತಿಯನ್ನು ಹಿರಿಯಿರಿ !' ಎಂದು ಹುರಿದುಂಬಿಸಿದನು. ರಾಯನ ವೀರೋದ್ಗಾರವನ್ನು ಕೇಳಿ ಸೈನಿಕರ ಮೈಯಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಅವರು ಪ್ರಾಣದ ಮೇಲಿನ ಆಸೆಯನ್ನು ತೊರೆದು ರಾಯನನ್ನು ಹಿಂಬಾಲಿಸಿದರು.

ಅವರ ನಾಯಕನಾಗಿ ತಿಮ್ಮರಸನ ಮಗ ಗೋವಿಂದರಾಜನು ಮುಂದೆ ಬಂದನು. ಒಮ್ಮೆಲೆ ಹಿಮ್ಮೆಟ್ಟುತ್ತಿದ್ದ ಸೇನೆ ಹಠಾತ್ತನೆ ತನ್ನನ್ನು ಎದುರಿಸಿದುದನ್ನು ಕಂಡು ಅದಿಲ್‌ಷಹನ ಸೇನೆಗೆ ಅಚ್ಚರಿಯಾಯಿತು. ರಾಯನ ಸೈನಿಕರು ಆವೇಶ ಬಂದವರಂತೆ ಮೈಮೇಲೆ ಎಚ್ಚರವಿಲ್ಲದೆ ಎದುರಿಗೆ ಸಿಕ್ಕಿದ ಸೈನಿಕರ ಮೇಲೆಬಿದ್ದು ಅವರನ್ನು ಎದುರಿಸಿ ಒಂದಾದ ಮೇಲೊಂದರಂತೆ ಕಾಳಗ ಕೊಟ್ಟರು. ಜೀವದ ಹಂಗು ತೊರೆದು ವೀರಾವೇಶದಿಂದ ಹೋರಾಡಿದ ರಾಯನ ಕಟ್ಟಾಳುಗಳ ಕೈಗೆ ಸಿಕ್ಕಿದ ಶತ್ರುಸೇನೆ ಛಿದ್ರಛಿದ್ರವಾಯಿತು. ಅವರ ಹೊಡೆತವನ್ನು ತಾಳಲಾರದೆ ಶತ್ರುಸೈನ್ಯ ತತ್ತರಿಸಿತು. ಅವರು ರಾಯನ ಸೈನ್ಯವನ್ನು ಎದುರಿಸಲಾರದೆ ಕತ್ತಿ ಎತ್ತಿದ್ದವರೆಲ್ಲರೂ ಯುದ್ಧರಂಗದಲ್ಲಿ ಮಡಿದರು. ಉಳಿದವರು ಜೀವಗಳ್ಳರಂತೆ ಯುದ್ಧಭೂಮಿಯನ್ನು ಬಿಟ್ಟು ಓಡಿದರು. ಕೇವಲ ಕೆಲವು ನಿಮಿಷಗಳ ಹಿಂದೆ ಸುಲ್ತಾನನ ಸೈನ್ಯಕ್ಕೆ ವಿಜಯವಾದೀತೆಂದು ಇದ್ದ ಪರಿಸ್ಥಿತಿ ಹಠಾತ್ತನೆ ಬದಲಾಗಿತ್ತು. ರಾಯನ ಸೈನ್ಯದ ಪ್ರಹಾರಗಳನ್ನು ಎದುರಿಸಲಾರದೆ, ಅದಿಲ'ಷಹನ ಸೈನ್ಯ ಕಂಗೆಟ್ಟು, ದಿಕ್ಕಾಪಾಲಾಗಿ ಅಸ್ತವ್ಯಸ್ತವಾಗಿ ಓಡಿತು. ತಮ್ಮನ್ನು ಬೆನ್ನಟ್ಟಿ ಬರುವ ರಾಯನ ಸೈನಿಕರ ಕೈಯಿಂದ ತಪ್ಪಿಸಿಕೊಳ್ಳುವ ಆತುರದಲ್ಲಿ ತಾವು ಏನು ಮಾಡುತ್ತಿರುವೆವೆಂದು

ಆಲೋಚಿಸದೆ ಓಡಿದರು. ಅವರು ವಿಚಾರ ಮಾಡದೆ ತಮ್ಮ ನಾಯಕನು ಓಡಿದತ್ತ ಓಡಿದರು. ತಮ್ಮ ನಾಯಕನನ್ನು ಹಿಂಬಾಲಿಸಿ ಬಂದುದಕ್ಕೆ ಅವರಿಗೆ ದೊರೆತ ಪ್ರತಿಫಲ ? ಕಗ್ಗೊಲೆ !

ರಾಯನ ಸೈನಿಕರು ಆದಿಲ್‌ಷಹನ ಸೈನ್ಯವನ್ನು ಹಿಂಬಾಲಿಸಿಕೊಂಡು ಬಂದಿದ್ದರಷ್ಟೆ. ಅವರ ಒತ್ತಡವನ್ನು ತಾಳಲಾರದೆ ಸುಲ್ತಾನನ ಸೈನ್ಯ ಓಡಿ ಓಡಿ ನದಿಯ ದಂಡೆಗೆ ಬಂದು ಮುಟ್ಟಿತು. ತಾವು ಎಂತಹ ಇಕ್ಕಟ್ಟಿಗೆ ಸಿಕ್ಕಿಬಿದ್ದೆವೆಂದು ಅವರಿಗೆ ಅರಿವಾಯಿತು. ಗೋವಿಂದರಾಜನು ಬೇಕೆಂದೇ ಈ ಬಗೆಯ ವ್ಯೂಹವನ್ನು ರಚಿಸಿದ್ದನು. ಶತ್ರುಗಳನ್ನು ಮೂರು ದಿಕ್ಕಿನಿಂದ ಅಟ್ಟಿಸಿಕೊಂಡು ಬಂದು, ಅವರನ್ನು ಬೇರೆಲ್ಲೂ ಹೋಗಲು ಬಿಡದೆ ನದಿಯ ದಿಕ್ಕಿನಲ್ಲಿ ಹೋಗುವಂತೆ ಮಾಡಿದ್ದ ಅವನ ಹಂಚಿಕೆ ಯಶಸ್ವಿಯಾಗಿತ್ತು.

ಶತ್ರುಗಳು ತಮ್ಮ ಪ್ರಾಣವನ್ನು ಉಳಿಸಿಕೊಳ್ಳಲು ಬಂದವರು ಈಗ ನದಿಯ ದಂಡೆಯನ್ನು ಸೇರಿದರು. ಮೂರು ದಿಕ್ಕಿನಲ್ಲೂ ತಮ್ಮ ಮೇಲೆ ಗುಂಡಿನ ಮಳೆ ಕರೆಯುತ್ತಾ ಈಟಿ ಭಲ್ಲೆಗಳಿಂದ ಕೊಚ್ಚುತ್ತಾ ಬೆನ್ನಟ್ಟಿ ಯಮ ದೂತರಂತೆ ಬರುತ್ತಿರುವ ರಾಯನ ಸೈನ್ಯ. ಇನ್ನೊಂದು ದಿಕ್ಕಿನಲ್ಲಿ ತುಂಬಿ ಹರಿಯುತ್ತಿರುವ ಕೃಷ್ಣೆ. ಅವರ ದುರದೃಷ್ಟಕ್ಕೆ ತಕ್ಕಂತೆ ಆ ಪ್ರದೇಶದಲ್ಲಿ ನದಿಯು ಬಹಳ ಆಳವಾಗಿದ್ದು ಅದರ ಪಾತ್ರ ವಿಶಾಲವಾಗಿತ್ತು. ಅವರಿಗೆ ಬೇರೇನೂ ತೋಚದೆ ಬುದ್ಧಿಕುಂಠಿತವಾಗಿ, ಪ್ರಾಣ ಉಳಿಸಿಕೊಳ್ಳಲು ನದಿಯ ನೀರಿಗೆ ಬಿದ್ದರು.

ಇಲ್ಲಿಗೆ ಅವರ ಕಥೆ ಮುಗಿದಂತೆ ಆಯಿತು.

ಮೊದಲೇ ಆಳವಾಗಿ ಹರಿಯುತ್ತಿರುವ ನೀರಿನ ಸೆಳವಿಗೆ ಸಿಕ್ಕಿ ಅನೇಕರು ಸತ್ತರು. ಮತ್ತೆ ಕೆಲವರು ಪ್ರವಾಹದ ಹೊಡೆತವನ್ನು ಎದುರಿಸಲಾರದೆ ಅದರೊಂದಿಗೆ ಕೊಚ್ಚಿಕೊಂಡು ಹೋದರು. ಈಜುಬರುತ್ತಿದ್ದ ಸೈನಿಕರು ತಮ್ಮ ಶಕ್ತಿಮೀರಿ ನದಿಯನ್ನು ದಾಟಲು ಪ್ರಯತ್ನಿಸುತ್ತಿದ್ದರು. ಈ ವೇಳೆಗೆ ರಾಯನ ಯುದ್ಧದಾನೆಗಳು ನೀರಿಗೆ ಇಳಿದು ನದಿಗೆ ಬಿದ್ದವರನ್ನು ತಮ್ಮ ಸೊಂಡಿಲುಗಳಿಂದ ಎತ್ತಿ ಅಪ್ಪಳಿಸುತ್ತಾ ತಮ್ಮ ಕೋರೆ ದಂತಗಳ ಕೂರ್ಗತ್ತಿಗಳಿಗೆ ಬಲಿಕೊಡುತ್ತಾ ಹಾವಳಿಮಾಡಿದವು. ಇಷ್ಟೇ ಸಾಲದೆಂಬಂತೆ ಅಸಹಾಯರಾಗಿ ನೀರಿಗೆ ಬಿದ್ದ ಸೈನಿಕರನ್ನು ಸುರಕ್ಷಿತವಾಗಿ ದಂಡೆಯ

ಮೇಲೆ ನಿಂತಿದ್ದ ರಾಯನ ಸೈನಿಕರು ಬಾಣಗಳಿಂದ ದೊಡ್ಡ ದೊಡ್ಡ ಕಲ್ಲುಗಳಿಂದ ಮೀನುಗಳನ್ನು ಬೇಟೆಯಾಡುವಂತೆ ಬೇಟೆಯಾಡಿದರು.

ಅಷ್ಟರಲ್ಲಿ ಅಲ್ಲಿಗೆ ಬಂದಿದ್ದ ರಾಯನಿಗೆ ಶತ್ರು ಸೈನ್ಯಕ್ಕೆ ಬಂದಿದ್ದ ದುರವಸ್ಥೆಯನ್ನು ನೋಡಿ ಕನಿಕರವಾಯಿತು. ಸೈನಿಕರ ಕಗ್ಗೊಲೆಯನು ನಿಲ್ಲಿಸಲು ನಿರ್ಧರಿಸಿದನು. ರಾಯನ ಕರುಣೆಯಿಂದಾಗಿ ನೀರಿಗೆ ಬಿದ್ದಿದ್ದ ಅಳಿದುಳಿದವರು ಜೀವಂತರಾಗಿ ಉಳಿದುಕೊಂಡರು. ಸಾವಿನ ದವಡೆಯಲ್ಲಿದ್ದ ಆ ನಿರ್ಭಾಗ್ಯರಿಗೆ ಜೀವದಾನ ದೊರೆಯಿತು. ಅವರು ಧೈರ್ಯವಾಗಿ ನದಿಯನ್ನು ದಾಟಿ ದಡವನ್ನು ಮುಟ್ಟಿದರು. ಕೈಸೆರೆ ಸಿಕ್ಕಿದವರನ್ನು ಉತ್ತಮ ರೀತಿಯಲ್ಲಿ ನೋಡಿಕೊಳ್ಳಲು ರಾಯನು ತನ್ನ ಸೈನಿಕರಿಗೆ ಆಜ್ಞಾಪಿಸಿದನು.

ಅಲ್ಲಿಂದ ಹೊರಡುವ ಮುನ್ನ ತನಗೆ ದೊರೆತ ಜಯದ ಎಲ್ಲ ಹೊಣೆಗಾರಿಕೆ ಗೋವಿಂದರಾಜನದನೆಂದು ಅವನನ್ನು ಬಾಚಿ ತಬ್ಬಿಕೊಂಡು ಅವನ ಶೌರ್ಯಸಾಹಸಗಳನ್ನು ಪ್ರಶಂಸೆ ಮಾಡಿದನು. ರಾಯನ ಬಾಯಿಂದ ಬಂದ ತನ್ನ ಗುಣಗಾನವನ್ನು ಕೇಳಿ ಗೋವಿಂದರಾಜನು ಮೂಕನೇ ಆದ. ರಾಯನ ನಿಷ್ಪಕ್ಷಪಾತ ಬುದ್ಧಿಗೆ ಇದು ನಿದರ್ಶನ. ರಾಯನು ಗೋವಿಂದರಾಜನನ್ನು ಸನ್ಮಾನಿಸಿ ವೀರೋಚಿತಮರ್ಯಾದೆ ಮಾಡಿದನು.

ಈಗ ಒಂದು ಕ್ಷಣ ಕಾಲವನ್ನೂ ವ್ಯರ್ಥಮಾಡುವಂತಿರಲಿಲ್ಲ. ಶತ್ರು ಸೈನ್ಯ ಶರಣುಬಂದುದರಿಂದ ಯುದ್ಧ ಮುಗಿಯಲಿಲ್ಲ. ಅವರ ಶಿಬಿರವನ್ನು ವಶಪಡಿಸಿಕೊಳ್ಳಬೇಕಾಗಿತ್ತು. ಅಲ್ಲದೆ ಅದಿಲ್‌ಷಹನು ಯುದ್ಧದಲ್ಲಿ ಮಡಿದನೇ ? ಓಡಿಹೋದನೇ ? ಎಂಬುದು ಇದುವರೆಗೂ ತಿಳಿದಿರಲಿಲ್ಲ. ಅವನನ್ನು ವಿಚಾರಿಸಿಕೊಳ್ಳಲು ರಾಯನೇ ಸೈನ್ಯ ಸಮೇತನಾಗಿ ಅವನ ಶಿಬಿರದ ಕಡೆ ಹೊರಟನು.

ಬಿಜಾಪುರದ ಸೈನಿಕ ಶಿಬಿರ ನಾಯಕರಿಲ್ಲದೆ ಅಸ್ತವ್ಯಸ್ತವಾಗಿತ್ತು. ಅದನ್ನು ಶತ್ರುಗಳು ಬಿಟ್ಟು ಓಡಿಹೋಗಿದ್ದರು. ಅದನ್ನು ವಶಪಡಿಸಿಕೊಳ್ಳಲು ಹೆಚ್ಚು ಕಷ್ಟವಾಗಲಿಲ್ಲ. ಅದಿಲ್‌ಷಹನ ಅರಮನೆಯ ಸದೃಶವಾಗಿದ್ದ ಶಿಬಿರದ ವಿಲಾಸ, ಶ್ರೀಮಂತಿಕೆ ವೈಭವಗಳು ರಾಯನನ್ನು ಬೆರಗುಗೊಳಿಸಿದ ವೆಂದಮೇಲೆ ಅದರ ಬಗ್ಗೆ ಹೇಳುವುದೇನಿದೆ ? ರಾಯನು ಆ ರಾತ್ರಿಯನ್ನು ಅಲ್ಲಿಯೇ ಕಳೆಯಲು ನಿರ್ಧರಿಸಿದನು.

ರಾಯನು ಅಲ್ಲಿನ ಹಂಸತೂಲಿಕಾತಲ್ಪದ ಮೇಲೆ ನೈಚಾಚಿ ಮಲಗಿದನು. ಅವನಿಗೆ ಬೆಳಗಾದ ಮೇಲೇ ಎಚ್ಚರ. ಯುದ್ಧದಿಂದ ಆಯಾಸಗೊಂಡ ರಾಯನಿಗೆ ಗಾಢವಾದ ನಿದ್ರೆ ಬಂದಿತ್ತು.

೭

ಕೃಷ್ಣದೇವರಾಯನು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಶತ್ರು ಶಿಬಿರವನ್ನು ನೋಡಲು ಹೊರಟನು. ಶತ್ರು ಶಿಬಿರದಲ್ಲಿ ದೊರೆತ ಸೂರೆ ಅಪಾರವಾಗಿತ್ತು. ನಾಲ್ಕುಸಾವಿರ ಕುದುರೆಗಳೂ, ನೂರಾರು ಆನೆಗಳೂ, ನಾನೂರು ತೋಪುಗಳೂ, ಒಂಭೈನೂರು ಸಿಡಿಮದ್ದಿನ ಚೀಲಗಳೂ ದೊರೆತವು. ಅಲ್ಲದೆ ಅಸಂಖ್ಯಾತವಾದ ಡೇರೆಯ ಸಾಮಾನುಗಳೂ, ಯುದ್ಧ ಸಾಮಗ್ರಿಗಳೂ, ಯಥೇಚ್ಛವಾದ ಆಹಾರ ಸಾಮಗ್ರಿಗಳೂ ದೊರೆಯಿತು. ಇದರಿಂದ ರಾಯನ ಮುಂದಿನ ಯುದ್ಧಕ್ಕೆ ಅನುಕೂಲವಾಯಿತು.

ರಾಯನು ತ್ವರಿತವಾಗಿ ನಡೆಯಬೇಕಾಗಿದ್ದ ಕೆಲಸಗಳಿಗೆ ಗಮನ ಕೊಟ್ಟನು. ಯುದ್ಧದಲ್ಲಿ ಮಡಿದ ವೀರರಿಗೆ ಶವಸಂಸ್ಕಾರ ಮಾಡಿ, ಅವರಿಗಾಗಿ ಅನೇಕ ದಾನಧರ್ಮಗಳನ್ನು ಮಾಡಿದನು. ಯುದ್ಧದಲ್ಲಿ ಉಳಿದ ಸೈನಿಕರಿಗೆ ಅನೇಕ ಸಂಭಾವನೆಗಳನ್ನು ಕೊಟ್ಟು ಉಚಿತ ರೀತಿಯಲ್ಲಿ ಸನ್ಮಾನಿಸಿದನು. ಅನಂತರ ರಾಯನು ಯುದ್ಧದಲ್ಲಿ ಕೈಸೆರೆ ಸಿಕ್ಕಿದವರನ್ನು ವಿಚಾರಿಸಿಕೊಳ್ಳಲು ಹೊರಟನು.

ಯುದ್ಧದಲ್ಲಿ ಅದಿಲ್‌ಷಹನ ಅರ್ಧಕ್ಕಿಂತ ಹೆಚ್ಚು ಸೈನ್ಯ ಮಡಿದಿತ್ತು. ಇಲ್ಲವೇ ಸೈನಿಕರು ಕೈಕಾಲು ಕಳೆದುಕೊಂಡು ವಿಪರೀತ ಗಾಯಗೊಂಡು ನರಳುತ್ತಿದ್ದರು. ಅಂಥವರ ಆರೈಕೆಗಾಗಿ ವ್ಯವಸ್ಥೆಮಾಡಿ ಜೀವಂತ ಕೈಸೆರೆ ಸಿಕ್ಕಿದವರನ್ನು ಅವಮಾನ ಮಾಡದೆ ಅವರನ್ನು ಗೌರವವಾಗಿಯೇ ನಡೆಸಿಕೊಂಡನು. ಯುದ್ಧದಲ್ಲಿ ಕೈಸೆರೆ ಸಿಕ್ಕಿದ ಅನೇಕ ಸರದಾರರೂ, ದಂಡನಾಯಕರ ಪೈಕಿ ಪ್ರಸಿದ್ಧನಾದವನು ಸಲಬತ್‌ಖಾನ್ ಎನ್ನುವ ವೀರ.

ಸಲಬತ್‌ಖಾನ್ ಬಿಜಾಪುರದ ಸುಲ್ತಾನನ ಪ್ರಮುಖ ಸೇನಾನಿಗಳಲ್ಲೊಬ್ಬ. ಯುದ್ಧರಂಗದಲ್ಲಿ ಅವನ ಮುಂದೆ ನಿಲ್ಲುವ ವೀರ ಯಾರೂ ಇರ

ಲಿಲ್ಲ. ಸಲಬತ್‌ಖಾನ ಇದ್ದಲ್ಲಿ ಜಯ ಸಿದ್ಧವೆಂದು ಪ್ರತೀತಿ ಹರಡುವ ಮಟ್ಟಿಗೆ ಯುದ್ಧದ ಕಲೆಯಲ್ಲಿ ಅವನು ನಿಷ್ಣಾತನಾಗಿದ್ದನು. ಅವನ ಬಳಿ ಐದುನೂರು ಪೋರ್ಚುಗೀಸ್ ಸೈನಿಕರಿದ್ದರು. ಅವರು ಮದ್ದು ಗುಂಡುಗಳಿಂದ ಸುಸಜ್ಜಿತರಾಗಿದ್ದರು.

ಸಲಬತ್‌ಖಾನನೇ ರಾಯನ ಸೈನ್ಯವನ್ನು ಮದ್ದು ಗುಂಡುಗಳಿಂದ ತತ್ತರಿಸುವಂತೆ ಮಾಡಿ, ಯುದ್ಧರಂಗದಿಂದ ಹಿಮ್ಮೆಟ್ಟುವಂತೆ ಮಾಡಿದವನು. ಆದರೆ ರಾಯನು ಓಡುತ್ತಿದ್ದ ಸೈನಿಕರನ್ನು ಹುರಿದುಂಬಿಸಿ ಶತ್ರು ಸೈನ್ಯದ ಮೇಲೆ ಬೀಳುವಂತೆ ಮಾಡಿದ ಮೇಲೆ, ವೀರಾವೇಶದಿಂದ ಕಾದಾಡಿದ ರಾಯನ ಕಟ್ಟಾಳುಗಳ ಹೊಡೆತ ತಡೆಯಲಾರದೆ ಶತ್ರು ಸೈನ್ಯವು ಹೆದರಿ ಓಡಿಹೋಗಲು ಪ್ರಾರಂಭಿಸಿತು. ಆಗ ಓಡುತ್ತಿರುವ ಸೈನ್ಯವನ್ನು ಕೂಡಿಸಿ ಕೊಂಡು ಸಲಬತ್‌ಖಾನನು ರಾಯನ ಸೈನ್ಯದ ಮೇಲೆ ಬಿದ್ದು ಕೈಗೆ ಸಿಕ್ಕಿದ ವರನ್ನು ತನ್ನ ಕತ್ತಿಗೆ ಆಹುತಿ ಕೊಡುತ್ತಾ ಬಂದನು. ಆಗ ಗೋವಿಂದರಾಜನೇ ಬಂದು ಇವನನ್ನು ಎದುರಿಸಿದ. ಇಬ್ಬರೂ ರಣಧೀರರು. ಕರಲಾಘವ ದಲ್ಲಿ ಸಿದ್ಧಹಸ್ತರು. ಯಾರು ಗೆಲ್ಲುವರು ಎಂದು ಊಹಿಸುವುದೇ ಕಷ್ಟ ವಾಗಿತ್ತು. ಮೊದಲು ಮೊದಲು ಸಲಬತ್‌ಖಾನನ ಕೈ ಮೇಲಾಯಿತು. ಆದರೆ ಅಧಿಕ ಸಂಖ್ಯೆಯಲ್ಲಿದ್ದ ರಾಯನ ಸೈನ್ಯ ಸಲಬತ್‌ಖಾನನ ಸೈನ್ಯ ವನ್ನು ಸುತ್ತುಗಟ್ಟಿ ಕೊಲ್ಲುತ್ತಾ ಬಂದರು. ಗೋವಿಂದರಾಜನು ಹುರುಪು ಗೊಂಡು ಬೀಸಿದ ಕತ್ತಿಯ ಏಟಿಗೆ ಸಲಬತ್‌ಖಾನನ ಕುದುರೆ ಕೆಳಗೆ ಬಿತ್ತು. ಅವನು ಮತ್ತೊಂದು ಕುದುರೆಯನ್ನೇರುವ ಮೊದಲೇ ಎದುರಾಳಿ ಅವನ ಕತ್ತಿಯನ್ನು ಹಾರಿಸಿಬಿಟ್ಟನು. ಸಲಬತ್‌ಖಾನನನ್ನು ಕೊಲ್ಲದೆ ಕೈಸೆರೆ ಹಿಡಿ ಯಬೇಕೆಂಬ ಆಶಯ ಗೋವಿಂದರಾಜನಿಗೆ. ತಾನು ಸತ್ತರೂ ಚಿಂತೆಯಿಲ್ಲ, ಕೈಸೆರೆ ಸಿಕ್ಕ ಬಾರದೆಂದು ನಿರ್ಧರಿಸಿದ್ದ ಸಲಬತ್‌ಖಾನ್. ಆದರೆ ಅವನ ನಿರ್ಧಾರ ಸಫಲವಾಗಲಿಲ್ಲ.

ಕಡೆಗೂ ಸಲಬತ್‌ಖಾನನು ಗೋವಿಂದರಾಜನಿಗೆ ಕೈಸೆರೆ ಸಿಕ್ಕಬೇಕಾ ಯಿತು. ಅವನು ಒಬ್ಬನು ಕೈಸೆರೆ ಸಿಗಬೇಕಾದರೆ ಗೋವಿಂದರಾಜನ ಸಾವಿ ರಾರು ಸೈನಿಕರು ಹತರಾಗಿದ್ದರು.

ರಾಯನಿಗೆ ಸಲಬತ್‌ಖಾನನ ಅಸಾಧಾರಣ ಶೌರ್ಯವನ್ನು ಕೇಳಿ ಅವನ

ವಿಷಯದಲ್ಲಿ ಗೌರವವುಂಟಾಯಿತು. ಅವನನ್ನು ವೀರೋಚಿತವಾಗಿ ಬರಮಾಡಿಕೊಂಡು ಉಚಿತರೀತಿಯಲ್ಲಿ ನಡೆಸಿಕೊಂಡನು. ಅವನು ಯುದ್ಧ ಬಂದಿಯಾದುದರಿಂದ ನಿರ್ವಾಹವಿಲ್ಲದೆ ಸೆರೆಮನೆಯಲ್ಲಿಟ್ಟನು.

ಸಲಬತ್ ಖಾನನ ಶೌರ್ಯವನ್ನು ಕಂಡಮೇಲೆ, ಇಂತಹ ಹತ್ತು ಮಂದಿ ವೀರರು ತಮ್ಮ ಮೇಲೆ ಧಾಳಿ ಇಟ್ಟರೆ ತಮ್ಮ ಸೈನ್ಯ ಉಳಿಯುವುದಿಲ್ಲವೆಂದು ರಾಯನು ಭಾವಿಸಿದನು.

ರಾಯನಿಗೆ ಅದಿಲ್ ಷಹನ ಕಡೆ ಮನಸ್ಸು ಹರಿಯಿತು. ಅವನು ಏನಾದನೆಂದು ಇದುವರೆಗೂ ತಿಳಿಯದಾಗಿತ್ತು. ರಾಯನು ಈ ಬಗ್ಗೆ ವಿಚಾರ ಮಾಡುತ್ತಿರುವಾಗಲೇ ತಿಮ್ಮರಸನು ಸುದ್ದಿಯನ್ನು ಸಂಗ್ರಹಿಸಿ ಕೊಂಡು ರಾಯನ ಬಳಿಗೆ ಬಂದನು.

ಅದಿಲ್ ಷಹನು ಕೃಷ್ಣೆಯನ್ನು ದಾಟಿಬಂದೇ ಇರಲಿಲ್ಲವಂತೆ. ಅವನ ಸೈನ್ಯ ವನ್ನು ಮುಂದೆ ನಡೆಸುವ ಜವಾಬ್ದಾರಿ ಸಲಬತ್ ಖಾನನಿಗೆ ವಹಿಸಿ ಅವನು ಆಚೆಯ ದಡದಲ್ಲಿ ಯುದ್ಧವನ್ನು ಈಕ್ಷಿಸುತ್ತಾ ಕುಳಿತಿದ್ದನಂತೆ. ಉತ್ಕಲದ ಗಜಪತಿಯನ್ನು ಸೋಲಿಸಿದ್ದ ರಾಯನು–ದಕ್ಷಿಣಾಪಥದ ಅನೇಕ ದೊಡ್ಡ ಪುಟ್ಟ ಸಾಮ್ರಾಜ್ಯಗಳನ್ನು ಪದಾಕ್ರಾಂತ ಮಾಡಿಕೊಂಡಿದ್ದ ರಾಯನು— ಇತರ ವಿಜಯನಗರದ ಅರಸುಗಳಂತೆ ಅಲ್ಲ, ಅವನನ್ನು ಸೋಲಿಸುವುದು ಕಠಿಣವೆಂದು ಸುಲ್ತಾನನು ಮನಗಂಡಿದ್ದನು. ಯುದ್ಧದಲ್ಲಿ ಗೆಲುವಾದರೆ ಸಂತೋಷ. ಒಂದು ವೇಳೆ ಯುದ್ಧದಲ್ಲಿ ಸೋಲಾದರೆ ಆಗ ತಪ್ಪಿಸಿಕೊಂಡು ಹೋಗಲು ಮುಂಜಾಗ್ರತೆ ಕ್ರಮ ವಹಿಸಿಯೇ ಅವನು ಕೆಲವು ಆಪ್ತ ಮಿತ್ರ ರೊಂದಿಗೆ ಸಾಕಷ್ಟು ಮೈಗಾವಲು ಪಡೆಯೊಂದಿಗೆ, ತನ್ನ ಶಿಬಿರವನ್ನು ಬಿಟ್ಟು ಬಂದಿರಲಿಲ್ಲ. ತಾನು ಹಿಂದೆ ಉಳಿದರೆ ತನ್ನ ಸೈನ್ಯದ ಅಪನಂಬಿಕೆಗೆ ಪಾತ್ರ ನಾಗಬಹುದೆಂದು ಊಹಿಸಿ ಸೈನಿಕ ಶಿಬಿರದಲ್ಲಿ ತನಗಾಗಿ ಒಂದು ಭವ್ಯವಾದ ಅರಮನೆಯಂತಹ ಡೇರೆಯನ್ನು ರಚಿಸಲು ಆಜ್ಞಾಪಿಸಿದ್ದನು ಆದರೆ ಅಲ್ಲಿಗೆ ಮಾತ್ರ ಅವನು ಬಂದಿರಲಿಲ್ಲ. ಈ ವಿಷಯ ಯಾರಿಗೂ ತಿಳಿಯದಂತೆ ಗೋಪ್ಯವಾಗಿ ಇಡಲಾಗಿತ್ತು. ಅವನ ಆಪ್ತ ಮಿತ್ರರ ಮೂಲಕ ಆಚೆಯ ದಂಡೆಯಲ್ಲಿ ನಡೆಯುವ ಎಲ್ಲ ಸಮಾಚಾರ ಸುಲ್ತಾನನಿಗೆ ತಿಳಿಯುತ್ತಿತ್ತು. ಸುಲ್ತಾನನು ತನ್ನ ಡೇರೆಯಿಂದಲೇ ಯುದ್ಧದ ಕಾರ್ಯಾಚರಣೆ ನಡೆಸುತ್ತಿ

ದ್ದನು. ಇದರಿಂದಾಗಿಯೇ ಸುಲ್ತಾನನ ಸೈನಿಕರಿಗೆ ಸರಿಯಾದ ನಿರ್ದೇಶನ ದೊರೆಯದೆ ಸೈನ್ಯದಲ್ಲಿ ಅವ್ಯವಸ್ಥೆ ತಲೆದೋರಿತ್ತು.

ಮೊದಲು ಬಿಜಾಪುರದ ಸುಲ್ತಾನನಿಗೆ ಜಯವಾಗುವಂತೆ ಕಂಡಿತ್ತು. ಸುಲ್ತಾನನ ಸೈನಿಕರು ವೀರಾವೇಶದಿಂದ ಹೋರಾಡಿ ರಾಯನ ಸೈನಿಕರನ್ನು ಬೆನ್ನಟ್ಟಿಕೊಂಡು ಹೋದಾಗ ತನ್ನ ಕೊರಳಿಗೇ ಜಯಮಾಲೆ ಬಿತ್ತೆಂದು ಅದಿಲ್‌ಷಹನು ಭಾವಿಸಿದನು. ಆದರೆ ಪ್ರವಾಹದ ದಿಕ್ಕು ಹಠಾತ್ತನೆ ಬದಲಾದಂತೆ ಯುದ್ಧದ ಸ್ವರೂಪವೇ ಬದಲಾಯಿತು. ರಾಯನ ಸೈನ್ಯಕ್ಕೆ ಅಖಂಡ ದಿಗ್ವಿಜಯ ದೊರೆಯಿತು.

ಅದಿಲ್‌ಷಹನಿಗೆ ರಾಯನ ಕೈಯಿಂದ ಪಾರಾಗಿ ನದಿಯನ್ನು ದಾಟಿ ಬಂದವರಿಂದ ನಡೆದ ಎಲ್ಲ ಸಂಗತಿ ತಿಳಿದು ಇನ್ನು ತಾನು ಅಲ್ಲಿ ಉಳಿದರೆ ಪ್ರಾಣಕ್ಕೆ ಅಪಾಯವೆಂದು ಭಾವಿಸಿ ಅವನು ತನ್ನ ಮೈಗಾವಲು ಪಡೆಯವರೊಂದಿಗೆ ತಲೆ ತಪ್ಪಿಸಿಕೊಂಡು ಹೊರಟುಹೋಗಿದ್ದನು.

'ಈಗ ನಾವು ಉದಾಸೀನ ಮಾಡಬಾರದು ಪ್ರಭು. ನಾವು ಮೊದಲು ರಾಯಚೂರನ್ನು ಮುತ್ತಿ ವಶಪಡಿಸಿಕೊಳ್ಳಬೇಕು. ತಲೆ ತಪ್ಪಿಸಿಕೊಂಡು ಹೋಗಿರುವ ಅದಿಲ್‌ಷಹನು ರಾಯಚೂರಿನ ರಕ್ಷಣೆಗೆಂದು, ಅಳಿದುಳಿದ ತನ್ನ ಸೈನ್ಯವನ್ನು ಸಂಗ್ರಹಿಸಿಕೊಂಡು ಬಂದು ನಮ್ಮ ಮೇಲೆ ಬೀಳಬಹುದು. ಆಗ ರಾಯಚೂರನ್ನು ಗೆಲ್ಲುವುದು ಕಠಿಣವಾಗಬಹುದು. ಈಗ ಪರಿಸ್ಥಿತಿ ನಮಗೆ ಅನುಕೂಲವಾಗಿದೆ. ನಾವು ಈಗ ರಾಯಚೂರನ್ನು ಮುತ್ತಿದರೆ ಅದು ಸುಲಭವಾಗಿ ನಮ್ಮ ವಶವಾಗುವುದು ?' ಎಂದು ತಿಮ್ಮರಸನು ತನ್ನ ಆಲೋಚನೆಯನ್ನು ರಾಯನ ಮುಂದಿಟ್ಟನು.

ಕೃಷ್ಣದೇವರಾಯನಿಗೂ ಈ ಮಾತು ಸರಿಯೆನಿಸಿತು. ವಿಶ್ರಾಂತಿಯ ನೆಪದಲ್ಲಿ ತಾವು ರಾಯಚೂರನ್ನು ಮುತ್ತಲು ತಡಮಾಡಿದರೆ, ಮುಂದೆ ತಮಗೆ ವಿಪತ್ತು ಸಂಭವಿಸಬಹುದೆಂದು ಅರಿತು ಕೂಡಲೇ ತನ್ನ ಸೈನ್ಯವನ್ನು ರಾಯಚೂರಿನ ಮುತ್ತಿಗೆಗೆ ಸಿದ್ಧವಾಗಬೇಕೆಂದು ಆಜ್ಞಾಪಿಸಿದನು.

ರಾಯಚೂರು ಎತ್ತರವಾದ ಪ್ರದೇಶದಲ್ಲಿದ್ದ ದುರ್ಗಮವಾದ ದುರ್ಗ. ಅದಕ್ಕೆ ಸುತ್ತಲೂ ಮೂರು ಸುತ್ತಿನ ಕೋಟೆಯಿತ್ತು. ಹೊರಗಿನ ಕೋಟೆಯನ್ನು ಕಲ್ಲುಗಳಿಂದ ಕಟ್ಟಿದ್ದರು. ಕೋಟೆಯ ಹಿಂದೆ ಭದ್ರವಾದ ಒಳ

ಕೋಟೆ. ಈ ಒಳಕೋಟೆಯಲ್ಲಿ ವರ್ಷದ ಎಲ್ಲಾ ಕಾಲದಲ್ಲಿ ನೀರಿನಿಂದ ತುಂಬಿ ಹರಿಯುತ್ತಿದ್ದ ಒಂದು ಚಿಲುಮೆ ಇತ್ತು. ಇದು ಪುರಜನರಿಗೆ ಬೇಕಾಗುತ್ತಿದ್ದ ನೀರಿನ ಪೂರೈಕೆ ಮಾಡುತ್ತಿತ್ತು. ಈ ಒಳಕೋಟೆಯಲ್ಲಿ ಒಂದೆರಡು ವರ್ಷಗಳಿಗೆ ಬೇಕಾಗುವ ಆಹಾರಸಾಮಗ್ರಿಗಳು ದಾಸ್ತಾನಾಗಿತ್ತು. ಅದಿಲ್‌ಷಹನು ಕೃಷ್ಣದೇವರಾಯನ ದೃಷ್ಟಿ ರಾಯಚೂರಿನ ಮೇಲೆ ಬೀಳುವುದೆಂದು ಮೊದಲೆ ಅರಿತಿದ್ದುದರಿಂದ ಅಲ್ಲಿ ಒಂದು ಸುವ್ಯವಸ್ಥಿತ ಸೈನ್ಯವನ್ನೂ ಅಪಾರ ಮದ್ದು ಗುಂಡುಗಳನ್ನೂ ಇಟ್ಟಿದ್ದನು. ದುರ್ಗದ ಬತೇರಿಯ ಮೇಲೆ ಇನ್ನೂರು ಭಾರಿ ತೋಪುಗಳನ್ನಿಟ್ಟು ಅದನ್ನು ರಕ್ಷಿಸಲು ಅನುಭವಿಯಾದ ಒಬ್ಬ ದಳಪತಿಯನ್ನು ನಿಯಮಿಸಿದ್ದನು. ಹೀಗಿರುವಾಗ ಅದು ಸುಲಭವಾಗಿ ರಾಯನ ವಶವಾಗುವಂತೆ ಇರಲಿಲ್ಲ.

ರಾಯನ ಸೈನ್ಯ ಕೋಟೆಯ ಸಮೀಪದಲ್ಲೇ ಠಾಣೆ ಊರಿತು. ಸೈನ್ಯವು ಒಳಕೋಟೆಯ ಗೋಡೆಯನ್ನು ಸಮೀಪಿಸಲು ಮಾಡಿದ ಎಲ್ಲ ಪ್ರಯತ್ನ ವಿಫಲವಾಯಿತು ಕೋಟೆಯ ಗೋಡೆಯ ಮೇಲಿಂದ ಶತ್ರುಗಳು ಮದ್ದು ಗುಂಡುಗಳನ್ನೂ, ಬಾಣಗಳನ್ನೂ, ಕಲ್ಲುಗುಂಡುಗಳನ್ನೂ ಎಸೆದು ರಾಯನ ಸೈನ್ಯವು ಮುಂದಕ್ಕೆ ಒಂದು ಹೆಜ್ಜೆಯನ್ನೂ ಇಡಲಾಗದಂತೆ ಮಾಡಿತು. ರಾಯನು ಯಾವ ದಿಕ್ಕಿನಿಂದ ಕೋಟೆಯನ್ನು ಸಮೀಪಿಸಲು ಅನುಕೂಲವೆಂದು ಸುತ್ತಲೂ ನೋಡಿ ಬಂದನು. ಎಲ್ಲ ದಿಕ್ಕಿನಲ್ಲೂ ಭಾರಿ ಭಾರಿ ತೋಪುಗಳನ್ನು ಇಟ್ಟಿದ್ದರು. ಇದರಿಂದಾಗಿ ಯಾವ ದಿಕ್ಕಿನಿಂದಲೂ ಕೋಟೆಯನ್ನು ಸಮೀಪಿಸಲು ಸಾಧ್ಯವಾಗದೆ ಹೋಯಿತು. ರಾಯಚೂರಿನ ಕೋಟೆಯ ಬಳಿ ರಾಯನು ಮೂರು ತಿಂಗಳ ಕಾಲ ಹೆಣಗಾಡಿದರೂ ಕೋಟೆಯ ಒಂದು ಕಲ್ಲನ್ನೂ ಕೀಳಲು ಸಾಧ್ಯವಾಗಲಿಲ್ಲ. ಇದೇ ರೀತಿಯಲ್ಲಿ ತನ್ನ ಮುತ್ತಿಗೆ ಮುಂದುವರಿದರೆ ಇದನ್ನು ವಶಪಡಿಸಿಕೊಳ್ಳಲು ಕನಿಷ್ಟ ಪಕ್ಷ ಒಂದು ವರ್ಷವಾದರೂ ಬೇಕೆಂದು ರಾಯನು ಭಾವಿಸಿದನು. ಒಂದು ವರ್ಷ ಕಾಲವನ್ನು ರಾಯಚೂರು ದುರ್ಗವನ್ನು ವಶಪಡಿಸಿಕೊಳ್ಳಲು ಉಪಯೋಗಿಸಿದರೆ ರಾಯನ ಉಳಿದ ಯೋಜನೆಗಳು ಕಾರ್ಯಗತವಾಗಬೇಕಾದರೆ ಅನೇಕ ವರ್ಷಗಳೇ ಬೇಕಾಗಿತ್ತು. ಸುಮ್ಮನೆ ಮುತ್ತಿಗೆ ಮುಂದುವರೆಯುತ್ತಿದೆಯಲ್ಲಾ ಎಂದು ರಾಯನು ವ್ಯಾಕುಲಗೊಂಡನು. ರಾಯನು ಇದೇ

ಚಿಂತೆಯಲ್ಲಿ ಕುಳಿತಿರುವಾಗಲೇ ಅಲ್ಲಿಗೆ ತಿಮ್ಮರಸನು ಬಂದನು.

'ಪ್ರಭುಗಳೇಕೋ ತುಂಬಾ ಚಿಂತಿಸುವಂತಿದೆ. ಅದೇನೆಂದು ಅಪ್ಪಣೆ ಕೊಡಿಸುವುದಾದರೆ, ಬಗೆಹರಿಸಲು ಸಾಧ್ಯವಾದಷ್ಟು ಪ್ರಯತ್ನಪಡುತ್ತೇನೆ.'

'ನನ್ನನ್ನು ಕಾಡುತ್ತಿರುವ ಚಿಂತೆ ಏನೆಂದು ಅಪ್ಪಾಜಿಯವರಿಗೂ ತಿಳಿದಿದೆ. ನಾನು ರಾಯಚೂರಿನ ಮುತ್ತಿಗೆ ಇಷ್ಟು ದೀರ್ಘವಾಗುತ್ತದೆ ಎಂದು ತಿಳಿದಿರಲಿಲ್ಲ. ನಾವು ಇಲ್ಲಿ ಬೀಡು ಬಿಟ್ಟು ಮೂರು ತಿಂಗಳಾಯಿತು. ಕೋಟೆಯ ಒಂದು ಕಲ್ಲನ್ನೂ ಕದಲಿಸಲು ಸಾಧ್ಯವಾಗಿಲ್ಲ ಎಂದ ಮೇಲೆ ದುರ್ಗವನ್ನು ಆಕ್ರಮಿಸಲು ನಮಗೆ ಅನೇಕ ವರ್ಷಗಳೇ ಬೇಕಾಗುವುದು' —ಎಂದು ರಾಯನು ಖಿನ್ನನಾಗಿ ನುಡಿದನು.

'ಇವಕ್ಕೇಕೆ ಪ್ರಭುಗಳು ಇಷ್ಟು ಚಿಂತೆ ಮಾಡಬೇಕು ? ಇನ್ನು ಕೆಲವು ದಿನಗಳಲ್ಲಿ ದುರ್ಗ ನಮ್ಮ ವಶವಾಯಿತೆಂದೇ ತಿಳಿಯಿರಿ. ಈಗಾಗಲೇ ಶತ್ರುಗಳು ತಣ್ಣಗಾಗುತ್ತಾ ಬಂದಿದ್ದಾರೆ. ಅವರೂ ಎಷ್ಟು ಕಾಲ ಕೋಟೆಯನ್ನು ಹೀಗೆ ರಕ್ಷಿಸಲು ಸಾಧ್ಯವಾದೀತು ? ಇಂದಲ್ಲ ನಾಳೆಯಾದರೂ ಕೋಟೆ ನಮ್ಮ ವಶವಾಗಬೇಕು. ಇದು ಖಂಡಿತ !'

'ಈ ಕೋಟೆಯೊಂದು ನಮ್ಮ ವಶವಾದರೆ ನನ್ನ ಅನೇಕ ಆಲೋಚನೆಗಳನ್ನು ಕಾರ್ಯಗತಮಾಡಲು ಅನುಕೂಲವಾಗುತ್ತದೆ. ಬಿಜಾಪುರದ ಸುಲ್ತಾನನನ್ನು ಅವನ ಅರಮನೆಯಲ್ಲಿಯೇ ಸೆರೆಹಿಡಿಯುವ ಆಸೆ ನನ್ನದು— ನಮ್ಮ ಸೈನ್ಯದ ಎಲ್ಲ ಶಕ್ತಿ-ಶಸ್ತ್ರಾಸ್ತ್ರಗಳು ಈ ಒಂದು ಕೋಟೆಯನ್ನು ಹಿಡಿಯುವುದರಲ್ಲಿ ವಿನಿಯೋಗಿಸಲ್ಪಟ್ಟರೆ, ನಾವು ಬಿಜಾಪುರದ ಮೇಲೆ ಏರಿ ಹೋಗುವ ಹೊತ್ತಿಗೆ ನಮ್ಮ ಶಕ್ತಿಗುಂದಿ ದುರ್ಬಲರಾಗಿ ಬಿಡುತ್ತೇವೆ. ಈಗ ನಾವು ಕಳೆಯುವ ಒಂದೊಂದು ಕ್ಷಣವೂ ಅಮೂಲ್ಯವಾದುದು. ನಾವು ಇಲ್ಲಿ ತಡಮಾಡಿದಷ್ಟೂ ಶತ್ರುಗಳ ಬಲವೃದ್ಧಿಯಾಗುತ್ತಿದೆಯಲ್ಲಾ ಎಂಬುದೇ ನನ್ನ ಚಿಂತೆ.'

'ತಾವು ಈ ಬಗ್ಗೆ ಚಿಂತಿಸಬಾರದು ಪ್ರಭು ! ಇನ್ನು ತಿಂಗಳೊಪ್ಪತ್ತಿಗೆ ಹೇಗಾದರೂ ಮಾಡಿ ಈ ಮುತ್ತಿಗೆಯನ್ನು ಕೊನೆ ಮುಟ್ಟಿಸಬೇಕೆಂದು ಸಿದ್ಧತೆಯನ್ನು ಮಾಡುತ್ತಿದ್ದೇನೆ. ತಾವು ಈ ಬಗ್ಗೆ ಯಾವ ಆಲೋಚನೆಯನ್ನೂ ಮಾಡದೆ ನಿಶ್ಚಿಂತರಾಗಿರಿ. ದುರ್ಗದ ಮುತ್ತಿಗೆಯ ಅಗ್ರವೀಳ್ಯ

ವನ್ನು ನನಗೆ ಕೊಡಿ' ಎಂದು ಹೇಳಿ, ಪ್ರಭುಗಳಿಂದ ಅಗ್ರವೀಳ್ಯವನ್ನು ಪಡೆದೇ ಅಲ್ಲಿಂದ ಕಾಲ್ತೆಗೆದ ತಿಮ್ಮರಸ.

ಪ್ರಭುಗಳಿಗೆ ಮಾತು ಕೊಟ್ಟಮೇಲೆ ತಿಮ್ಮರಸನು ತನ್ನ ಶಿಬಿರಕ್ಕೆ ಬಂದು ದುರ್ಗವನ್ನು ಹೇಗೆ ಮುತ್ತಿ ವಶಪಡಿಸಿಕೊಳ್ಳಬೇಕೆಂದು ಆಲೋಚಿಸುತ್ತಿರುವಾಗಲೇ ದೂತನೊಬ್ಬನು ಕಾಣಿಸಿಕೊಂಡು ತಿಮ್ಮರಸನ ಭೇಟಿಗೆ ಯಾರೋ ವಿದೇಶಿಯರು ಬಂದಿರುವುದಾಗಿ ತಿಳಿಸಿದನು.

ತನ್ನನ್ನು ಯುದ್ಧರಂಗದಲ್ಲಿ ಭೇಟಿ ಮಾಡಲು ಬಂದಿರುವ ವಿದೇಶಿಯರಾರೆಂದು ನೋಡಲು ತಿಮ್ಮರಸನೇ ಎದ್ದು ಬಂದನು. ಹೊರಗೆ ತಿಮ್ಮರಸನ ಪೂರ್ವಪರಿಚಯದ ಕ್ರಿಸ್ಟಫರ್ ಫಿಗೈರೋಡೊ ಎನ್ನುವ ಪೋರ್ಚುಗೀಸ್ ಸರದಾರನು ತಿಮ್ಮರಸನಿಗಾಗಿ ಕಾಯುತ್ತಿದ್ದನು. ಅವನು ತಿಮ್ಮರಸನನ್ನು ನೋಡುತ್ತಲೇ ವಿದೇಶಿಯ ರೀತಿಯಲ್ಲಿ ಸೆಲ್ಯೂಟ್ ಮಾಡಿ ಗೌರವಿಸಿದನು. ಅನಂತರ ತಿಮ್ಮರಸನು ಅವನನ್ನು ಕುಶಲಪ್ರಶ್ನೆ ಮಾಡಿ ಒಳಗೆ ಕರೆತಂದು ಆಸನ ಕೊಟ್ಟು, ಗೌರವಿಸಿದನು.

ಫಿಗೈರೋಡೊ ಕೃಷ್ಣದೇವರಾಯನ ಹಳೆಯ ಮಿತ್ರ. ಅವನು ಒಬ್ಬ ಪೋರ್ಚುಗೀಸ್ ವ್ಯಾಪಾರಿ. ಕಳೆದ ನಾಲ್ಕೈದುವರ್ಷಗಳಿಂದ ಅವನು ವಿಜಯ ನಗರದಲ್ಲಿ ನೆಲೆಸಿದ್ದನು. ಅವನು ಅಶ್ವ ವಿದ್ಯಾಪಾರಂಗತ. ಕುದುರೆಯ ವ್ಯಾಪಾರದಲ್ಲಿ ಸಿದ್ಧಿಮರ್ಕಾರನಷ್ಟೇ ಬುದ್ಧಿವಂತ. ಅವನು ಕೆಲವು ತಿಂಗಳ ಹಿಂದೆ ರಾಯನ ಆದೇಶದಂತೆ ಓರ್ಮುಜ'ಗೆ ಕುದುರೆಗಳನ್ನು ಕೊಂಡು ತರಲು ಹೋಗಿದ್ದವನು ಈಗಷ್ಟೇ ಓರ್ಮುಜ್‌ನಿಂದ ಉತ್ತಮಾಶ್ವಗಳೊಂದಿಗೆ ಗೋವೆಯ ಬಂದರಿಗೆ ಬಂದು ಇಳಿದಿದ್ದನು. ಕುದುರೆಗಳಿಗೆ ಮುಂಗಡ ಸ್ವಲ್ಪ ಹಣಕೊಟ್ಟು, ಉಳಿದುದನ್ನು ಕುದುರೆಗಳು ಬಂದರಿಗೆ ಬಂದು ಇಳಿಯುತ್ತಲೇ ಪಾವತಿ ಮಾಡುವುದಾಗಿ ಒಪ್ಪಂದವಾಗಿತ್ತು. ಅದರಂತೆ ಸಿದ್ಧಿಮರ್ಕಾರನೊಂದಿಗೆ ರಾಯನು ನಲವತ್ತು ಸಹಸ್ರ ಪಗೋಡಗಳನ್ನು ಕೊಟ್ಟು ಕಳುಹಿದ್ದನು. ಆದರೆ ಸಿದ್ಧಿಮರ್ಕಾರನು ಹಣದೊಂದಿಗೆ ಪರಾರಿಯಾಗಿದ್ದನಷ್ಟೆ. ಅನಂತರ ರಾಯನು ಬಿಜಾಪುರದ ಸುಲ್ತಾನನ ಮೇಲೆ ಯುದ್ಧವನ್ನು ಘೋಷಿಸಿ ರಾಯಚೂರಿನ ಮುತ್ತಿಗೆಯಲ್ಲಿ ತೊಡಗಿದ್ದನು. ಕಾರಣಾಂತರಗಳಿಂದ, ಓರ್ಮುಜ್‌ನಿಂದ ಬರಬೇಕಾಗಿದ್ದ ಕುದುರೆಗಳು

ಗೋವೆಗೆ ಬರಲು ಎರಡು ಮೂರು ತಿಂಗಳು ತಡವಾಗಿದ್ದವು. ಹೀಗಾಗಿ ಫಿಗ್ವೈರೋಡೊ ಗೋವೆಗೆ ಬಂದಿಳಿಯುವ ವೇಳೆಗೆ ಹಣದೊಂದಿಗೆ ಯಾರೂ ಅಲ್ಲಿರಲಿಲ್ಲ. ರಾಯನು ಬಿಜಾಪುರಕ್ಕೆ ಹೊರಟ ಸಂಗತಿ ಕೇಳಿ ನೇರ ಇಲ್ಲಿಗೆ ಬಂದಿದ್ದ. ಆದರೆ ಅವನು ಒಂಟಿಯಾಗಿ ಬಂದಿರಲಿಲ್ಲ. ತಾನು ಯುದ್ಧದಲ್ಲಿ ತೊಡಗಿರುವ ರಾಯನನ್ನು ನೋಡಲು ಹೋಗುತ್ತಿರುವುದು. ಸಮಯ ಬಿದ್ದರೆ ರಾಯನಿಗೆ ತನ್ನ ಸಹಾಯದ ಅಗತ್ಯ ಬೀಳಬಹುದೆಂದು ಅವನು ಪೂರ್ವಭಾವಿಯಾಗಿ ಆಲೋಚಿಸಿ ಸುಸಜ್ಜಿತವಾದ ಸೈನ್ಯದೊಡನೆ ರಾಯಚೂರಿಗೆ ಬಂದಿಳಿದಿದ್ದನು. ಅವನು ತಿಮ್ಮರಸನಿಗೆ ತಾನು ಬಂದಿರುವ ಉದ್ದಿಶ್ಯವನ್ನು ತಿಳಿಸಿ ರಾಯನನ್ನು ಭೇಟಿ ಮಾಡಿಸಲು ಕೋರಿದನು. ಈಗ ರಾಯನು ಯುದ್ಧದಲ್ಲಿ ತೊಡಗಿದ್ದುದರಿಂದ ಮೊದಲಿನಂತೆ ಯಾರು ಯಾವಾಗ ಬೇಕಾದರೂ ರಾಯನನ್ನು ಭೇಟಿ ಮಾಡುವಂತಿಯಿರಲಿಲ್ಲ. ರಾಯನ ರಕ್ಷಣೆಗಾಗಿ ಬಹಳ ವ್ಯವಸ್ಥೆ ಮಾಡಲಾಗಿತ್ತು. ರಾಯನನ್ನು ಭೇಟಿ ಮಾಡಬೇಕಾದವರೆಲ್ಲರೂ, ಶತ್ರುವೇ ಇರಲಿ, ಮಿತ್ರರೇ ಇರಲಿ ಮೊದಲು ತಿಮ್ಮರಸನನ್ನು ಭೇಟಿ ಮಾಡಬೇಕಾಗಿತ್ತು. ಅಂತಲೇ ಅವನು ತಿಮ್ಮರಸನನ್ನು ಕಾಣಲು ಬಂದಿದ್ದನು.

ತಿಮ್ಮರಸನು ತಡಮಾಡದೆ, ರಾಯನಿಗೆ ಫಿಗ್ವೈರೋಡೊ ಬಂದಿರುವ ಸುದ್ದಿಯನ್ನು ತಿಳಿಸಿದನು. ರಾಯನಿಗೆ ತಾನು ಯುದ್ಧದಲ್ಲಿ ತೊಡಗಿರುವಾಗಲೇ, ಓರ್ಮೆಜ್‌ನಿಂದ ಸಾವಿರಾರು ಕುದುರೆಗಳು ಬಂದುದಕ್ಕಾಗಿ ಬಹಳ ಸಂತೋಷವಾಯಿತು. ಅವನು ಫಿಗ್ವೈರೋಡೊವನ್ನು ಒಳಗೆ ಬರಮಾಡಿಕೊಂಡನು.

ಫಿಗ್ವೈರೋಡೊ ಬಂದ ರಾಯರು ಕೂಡಲೇ ಅವನನ್ನು ಕುಶಲ ಪ್ರಶ್ನೆ ಮಾಡಿ ಸತ್ಕರಿಸಿ ಅವನ ಪ್ರವಾಸದ ಬಗ್ಗೆ ವಿಚಾರಿಸಿಕೊಂಡನು.

'ತಮ್ಮ ಕೋರಿಕೆಯಂತೆ ಓರ್ಮೆಜ್‌ನಿಂದ ಉತ್ತಮಾಶ್ವಗಳನ್ನು ತಂದಿದ್ದೇನೆ ಪ್ರಭು.' ಎಂದು ಹೇಳಿದ ಫಿಗ್ವೈರೋಡೊ.

'ಬಹಳ ಸಂತೋಷ. ಅವುಗಳನ್ನು ನನಗೆ ಕೂಡಲೇ ಕಳುಹಿಸಿ ಕೊಡಿ. ಬಿಜಾಪುರದ ಯುದ್ಧದಲ್ಲಿ ಅವುಗಳ ನೆರವು ನನಗೆ ಬಹಳವಿದೆ.'

'ಕುದುರೆಗಳು ಇನ್ನೂ ಗೋವೆಯಲ್ಲಿಯೇ ಇದೆ. ಅವುಗಳ ಬೆಲೆ

ನಿಷ್ಕರ್ಷೆಯಾಗಿದ್ದರೂ, ಇನ್ನೂ ಪಾವತಿಯಾಗಬೇಕಾದ ಹಣ ಉಳಿದಿದೆ ಪ್ರಭು.'

'ಚಿಂತೆಯಿಲ್ಲ. ಎಷ್ಟು ಹಣ ಪಾವತಿಯಾಗಬೇಕಾಗಿದೆ?'

'ನಲವತ್ತು ಸಹಸ್ರ ವರಹಗಳು.'

ಈ ಮಾತು ಕೇಳಿ ರಾಯನು ಚಕಿತನಾದವನಂತೆ ವಿನೋದದಿಂದ ಹೇಳಿದ. 'ಏನು? ನಲವತ್ತು ಸಹಸ್ರ ವರಹಗಳೇ? ನಮ್ಮ ಭಂಡಾರದಲ್ಲಿ ರುವ ಚಿನ್ನವನ್ನೆಲ್ಲಾ ನಿಮ್ಮ ದೇಶಕ್ಕೆ ಕೊಳ್ಳೆ ಹೊಡೆಯುವ ಆಲೋಚನೆಯೇ ನಿಮ್ಮದು?'

'ಪ್ರಭುಗಳು ಅನ್ಯಥಾ ತಿಳಿಯಬಾರದು. ಪ್ರಭುಗಳ ಬಳಿಯಿರುವ ಸಂಪತ್ತನ್ನು ಕೊಳ್ಳೆಹೊಡೆದು ಸಾಗಿಸಲು ಒಂದೆರಡು ದಿನಗಳಲ್ಲ, ಹತ್ತಾರು ವರ್ಷಗಳು ಬೇಕು. ಸಾಗಿಸಲು ಕೊಳ್ಳೆಯ ಮಾತು ಹಾಗಿರಲಿ. ತಮ್ಮನ್ನು ಸೋಲಿಸಲು ಭೂಮಂಡಲದ ಅರಸರೆಲ್ಲ ಒಂದಾಗಿ ಬರಬೇಕಲ್ಲ!' ಎಂದು ಹೇಳಿದನು.

ಈ ಹೊಗಳಿಕೆಯನ್ನು ಕೇಳಿ ರಾಯನಿಗೆ ಸಂತೋಷವಾಯಿತು. 'ವ್ಯಾಪಾರದಲ್ಲಿ ನೀವು ಜಾಣರಿರುವಂತೆಯೇ ಮಾತಿನಲ್ಲಿ ಜಾಣರಾಗಿದ್ದೀರಿ!' ಎಂದು ನಗುತ್ತಾ ನುಡಿದನು.

'ನಮ್ಮ ಜಾಣತನವೆಲ್ಲ ಬರಿ ಮಾತಿನಲ್ಲಿ ಮುಗಿದು ಹೋದರೆ ಅದು ನಮ್ಮ ದುರದೃಷ್ಟ ಪ್ರಭು!'

'ಹಾಗೆಂದರೆ?'

'ನಾವು ಕೇವಲ ವ್ಯಾಪಾರದಲ್ಲಿ ಮಾತ್ರವಲ್ಲ. ಯುದ್ಧ ಕಲೆಯಲ್ಲೂ ನಿಷ್ಣಾತರಾಗಿದ್ದೇವೆ. ಪ್ರಭುಗಳು ನಮ್ಮ ಶೌರ್ಯವನ್ನು ಯುದ್ಧದಲ್ಲಿ ಪ್ರದರ್ಶಿಸಲು ಅವಕಾಶ ಕೊಡಬೇಕು.'

'ನಿಮ್ಮನ್ನು ಕೇವಲ ಅಶ್ವವ್ಯಾಪಾರಿಗಳೆಂದು ತಿಳಿದಿದ್ದೆ. ಈಗ ಸಮರವಿದ್ಯಾದುರಂಧರರೂ ಆಗಿರುವಿರೆಂದು ತಿಳಿದು ಸಂತೋಷವಾಯಿತು'

ಕೇವಲ ಮೆಚ್ಚಿಗೆಯನ್ನು ತೋರಿಸಿದರೆ ನಮ್ಮ ಮನಸ್ಸಿಗೆ ಸಮಾಧಾನ ವಿಲ್ಲ ಪ್ರಭು. ಯುದ್ಧದಲ್ಲಿ ನಮ್ಮ ಶಕ್ತಿ ಸಾಮರ್ಥ್ಯಗಳನ್ನು ನೋಡಿ ಮೆಚ್ಚಿಗೆ ಸೂಚಿಸಿದರೆ ಸಂತೋಷವಾಗುತ್ತದೆಯೇ ಹೊರತು ಈಗಲ್ಲ.'

ರಾಯನು ಈ ಮಾತನ್ನು ಕೇಳಿ ಏನೋ ಯೋಚಿಸುತ್ತಿರುವಂತೆ ತೋರಿತು.

'ಪ್ರಭುಗಳು ಏಕೋ ನಮಗೆ ಯುದ್ಧದಲ್ಲಿ ಭಾಗವಹಿಸುವ ಅವಕಾಶವೀಯಲು ಹಿಂದೆಗೆಯುತ್ತಿದ್ದೀರಿ. ಪೋರ್ಚುಗೀಸರೆಂದಿಗೂ ಯುದ್ಧಕ್ಕೆ ಹೆದರುವುದಿಲ್ಲ. ಯುದ್ಧ ಅವನಿಗೊಂದು ವಿನೋದ !'

'ಫಿಗ್ವೈರೋಡೊ ಅವರೇ, ನಿಮ್ಮ ಆಸೆಯನ್ನು ಈಡೇರಿಸಲು ಅಡ್ಡಿಯಿಲ್ಲ. ಆದರೆ ಯುದ್ಧವೆಂದರೆ ಸಾವು ನೋವುಗಳಿಂದ ಕೂಡಿದ ಹೋರಾಟ. ಮಿತ್ರರಂತೆ ಬಂದಿರುವ ನಿಮ್ಮನ್ನು ಯುದ್ಧಮುಖಕ್ಕೆ ಕಳುಹಿಸಿಕೊಟ್ಟು ನಾನು ಸ್ನೇಹಕ್ಕೆ ದ್ರೋಹ ಬಗೆಯಲೇ ?'

'ಪ್ರಭುಗಳು ನಮ್ಮ ವಿಷಯದಲ್ಲಿ ಇಟ್ಟುಕೊಂಡಿರುವ ಅಭಿಮಾನಕ್ಕೆ ನಾವು ಋಣಿಗಳಾಗಿದ್ದೇವೆ. ಆದರೆ ಪ್ರಭುಗಳು ನಮ್ಮನ್ನು ಸ್ನೇಹಿತರೆಂದು ತಿಳಿಯುವುದಾದರೆ–ಸ್ನೇಹ ಧರ್ಮದಲ್ಲಿ ನಮ್ಮದೂ ಒಂದು ಮಾತಿದೆ. ಸ್ನೇಹಿತರು ತೊಂದರೆಯಲ್ಲಿರುವಾಗ ಅವರಿಗೆ ನಮ್ಮಿಂದಾದ ಸಹಾಯ ಮಾಡಬೇಕೆಂದು ಸ್ನೇಹಧರ್ಮ ಸಾರುತ್ತದೆ. ಹೀಗಿರುವಲ್ಲಿ ತಾವು ನಮ್ಮನ್ನು ಯುದ್ಧಕ್ಕೆ ಕಳುಹಿಸಲು ಯಾವ ಯೋಚನೆಯನ್ನೂ ಮಾಡಬಾರದು.'

'ಹಾಗಲ್ಲ. ಫಿಗ್ವೈರೋಡೊ ಅವರೇ, ನೀವು ಸ್ನೇಹಕ್ಕಾಗಿ ಪ್ರಾಣವನ್ನು ಒಪ್ಪಿಸಲು ಸಿದ್ಧರಾಗಿರುವುದು ನಿಮ್ಮ ಘನತೆಗೆ ನಿದರ್ಶನ. ಆದರೂ ನಿಮ್ಮನ್ನು ಯುದ್ಧದಲ್ಲಿ ಭಾಗವಹಿಸುವಂತೆ ಮಾಡಿದರೆ ಆಕಸ್ಮಾತ್ ಕೇಡ ಕುಂಟಾದರೆ ಅದಕ್ಕೆ ಹೊಣೆ ಯಾರು ? ನಮಗೆ ಅಪಖ್ಯಾತಿ ಬಾರದೆ ಇರದು. ಆದ್ದರಿಂದ ನಿಮ್ಮನ್ನು ಯುದ್ಧರಂಗಕ್ಕೆ ಕಳುಹಿಸಲಾರೆ.'

'ಪ್ರಭುಗಳ ಮಾತಿನಿಂದ ಉಪಕೃತರಾಗಿದ್ದೇವೆ. ಆದರೆ ನಮ್ಮ ಸ್ನೇಹವನ್ನು ಒರೆ ಹಚ್ಚಿ ನೋಡಲು ಇದೇ ತಕ್ಕ ಸಮಯ. ತಮಗೆ ಈಗ ನಮ್ಮ ನೆರವು ಅಗತ್ಯವಿದೆ ಯುದ್ಧದಲ್ಲಿ ಸಾವು ನೋವು ಸಂಭವಿಸುವ ವಿಷಯದಲ್ಲಿ ಚಿಂತಿಸಬಾರದು ಪ್ರಭು. ಪೋರ್ಚುಗೀಸರೆಂದೂ ಸಾವಿಗೆ ಅಂಜರು. ಇದಕ್ಕೆ ಅಂಜುವುದಾದರೆ ಅವರು ತಮ್ಮ ಮನೆ ಮಠಗಳನ್ನು ಅಗಲಿ, ಸಾವಿರಾರು ಮೈಲಿ ದೂರ ಬರುತ್ತಿರಲಿಲ್ಲ. ಅವರಿಗೆ ಸಾವಿನೊಂದಿಗೆ ಸರಸವಾಡುವುದೇ ಒಂದು ವಿನೋದ. ಅವರಿಗೆ ಸಾವು ಬರುವುದಾದರೆ

ವೀರೋಚಿತವಾದ ಸಾವನ್ನೇ ಆಹ್ವಾನಿಸುತ್ತಾರೆ. ಹೀಗಿರುವಲ್ಲಿ ತಾವು ನಮ್ಮ ಬಗ್ಗೆ ಚಿಂತೆ ಪಡದೆ ಯುದ್ಧದಲ್ಲಿ ಭಾಗವಹಿಸಲು ಅವಕಾಶವೀಯಬೇಕು. ಇದೇ ನಮ್ಮ ಸ್ನೇಹದ ಚಿರ ಬಾಂಧವ್ಯದ ಗುರುತು.' ಎಂದು ಹೇಳಿದ.

ಇಷ್ಟು ಹೇಳಿದ ಮೇಲೆ ರಾಯನು ಫಿಗ್ಯೆರೋಡೊ ಮಾತಿಗೆ ಸಮ್ಮತಿ ಸಲೇಬೇಕಾಯಿತು.

ಅಂದೇ ಫಿಗ್ಯೆರೋಡೊ ತನ್ನ ಸೇನೆಯೊಡನೆ ರಾಯನ ಸೈನ್ಯದೊ ದಿಗೆ ಸೇರಿಕೊಂಡನು.

ಫಿಗ್ಯೆರೋಡೊ ರಾಯನ ಸೈನ್ಯದೊಂದಿಗೆ ಸೇರಿದ ಮೇಲೆ ಯುದ್ಧದ ಸ್ವರೂಪವೇ ಬದಲಾಯಿಸಿತು. ಫಿಗ್ಯೆರೋಡೊ ರಾಯಚೂರು ದುರ್ಗವನ್ನು ವಶಪಡಿಸಿಕೊಳ್ಳಲು ತನ್ನದೇ ಆದ ಯೋಜನೆಯನ್ನು ಸಿದ್ಧಪಡಿಸಿದನು. ಅದರಂತೆ ಅವನ ಸೈನಿಕರು ಆಯಕಟ್ಟಿನ ಸ್ಥಳಗಳಲ್ಲಿ ಕಂದಕವನ್ನು ತೋಡಿ ಅವುಗಳಲ್ಲಿ ಕುಳಿತು ತಮ್ಮ ಕಾರ್ಯಾಚರಣೆಗೆ ಪ್ರಾರಂಭಿಸಿದರು. ಅವರು ಶತ್ರುಗಳ ಗಮನವನ್ನು ತಮ್ಮ ಕಡೆ ಎಳೆಯುತ್ತಿರುವಾಗಲೇ ಉಳಿದ ಸೈನಿಕರು ಮದ್ದು ಗುಂಡುಗಳನ್ನು ಹಾರಿಸಿ ಆ ಪ್ರದೇಶವನ್ನು ಧೂಳಿನಿಂದ ಮುಚ್ಚಿಬಿಟ್ಟರು. ಈ ಹೊಗೆಯಲ್ಲಿ ಗೋವಿಂದರಾಜ ಹಾಗೂ ಇತರ ಸೈನಿಕರು ಸುಲಭವಾಗಿ ಕೋಟೆಯನ್ನು ಸಮೀಪಿಸಿಬಿಟ್ಟರು.

ತಮ್ಮ ಕಣ್ಣು ತಪ್ಪಿಸಿ, ಕೋಟೆಯ ಬಳಿಗೆ ಬಂದು ಸೇರಿದ ಸೈನ್ಯವನ್ನು ನಿಶ್ಶೇಷಗೊಳಿಸಲು, ಬತೇರಿಯ ಮೇಲಿದ್ದ ಶತ್ರು ಸೈನ್ಯವು ಮೇಲಿನಿಂದ ದೊಡ್ಡ ಕಲ್ಲುಗುಂಡುಗಳನ್ನೂ, ಕಾದ ಎಣ್ಣೆಯನ್ನು ಸುರಿದು ಕೆಳಗಿದ್ದ ಸೈನಿಕರಿಗೆ ಕಿರಕುಳ ಕೊಡಲಾರಂಭಿಸಿದರು. ಈ ಹಿಂಸೆಯನ್ನು ಲೆಕ್ಕಿಸದೆ ರಾಯನ ಸೈನಿಕರು ಕೋಟೆಯನ್ನು ಒಡೆಯುವ ಕಾರ್ಯದಲ್ಲಿ ತೊಡಗಿದರು.

ಇದೇ ಸಮಯದಲ್ಲಿ ಬತೇರಿಯ ಮೇಲೆ ನಿಂತು ರಾಯನ ಸೈನ್ಯದ ಮೇಲೆ ಕೈಮಾಡುತಿದ್ದ ಶತ್ರು ಸೈನಿಕರು ಫಿಗ್ಯೆರೋಡೊವಿನ ಅನುಚರರ ಗುಂಡಿಗೆ ಸುಲಭವಾಗಿ ಬಲಿಯಾದರು. ಬತೇರಿಯ ಮೇಲೆ ನಿಂತುಕೊಂಡು ಶತ್ರುಗಳ ಗುಂಡಿಗೆ ಬಲಿಯಾಗಲಾರದೆ, ಗೋಡೆಯಾಚೆಗೆ ನಿಂತು ಗೋಡೆಯನ್ನು ಒಡೆಯತೊಡಗಿದ್ದ ಸೈನಿಕರ ಮೇಲೆ ಕೈ ಮಾಡಲಾರಂಭಿಸಿದರು. ಅವರಿಗೆ ಶತ್ರುಗಳನ್ನು ಹೇಗೆ ಹಿಮ್ಮೆಟ್ಟಿಸಬೇಕೆಂದು ತಿಳಿಯದೆ, ತಮ್ಮ ನಾಯ

ಕನ ಬಳಿಗೆ ಓಡಿ ಹೋದರು. ಅವರ ನಾಯಕನು ಪರಿಸ್ಥಿತಿ ಏನೆಂದು ತಿಳಿಯದೆ, ಶತ್ರುಗಳ ಕಾರ್ಯಾಚರಣೆಯ ವಿಹಂಗಮ ನೋಟವನ್ನು ತೆಗೆದುಕೊಳ್ಳಲು ತನ್ನ ಇತರ ಸೇನಾಧಿಪತಿಗಳೊಂದಿಗೆ ಬತೇರಿಯ ಮೇಲೆ ಹತ್ತಿ ನಿಂತನು. ಇದೇ ಸಮಯದಲ್ಲಿ ಪೋರ್ಚುಗೀಸ್ ಸೈನಿಕನೊಬ್ಬನ ಗುಂಡು ಹಾರಿ ಬಂದು ಆ ದುರ್ಗಾಧಿಪತಿಯ ತಲೆಗೆ ಬಡಿಯಿತು. ಅವನು ಅಲ್ಲೇ ನೆತ್ತರು ಕಾರಿ ಸತ್ತುಬಿದ್ದನು. ತಮ್ಮ ನಾಯಕನಿಗಾದ ಗತಿಯನ್ನು ನೋಡಿ ಉಳಿದವರು ಪ್ರಾಣ ರಕ್ಷಣೆಗೆ ತೊಡಗುವ ಮುನ್ನವೇ ಗುಂಡಿನ ಮಳೆ ಕರೆದು ಅವರನ್ನು ಯಮಸದನಕ್ಕೆ ಅಟ್ಟಲಾಯಿತು. ಅಳಿದುಳಿದ ಸೈನಿಕರು ದಿಕ್ಕಾಪಾಲಾಗಿ ಚದುರಿ ಓಡಿದರು.

ಇದೇ ಸಮಯವನ್ನು ಸಾಧಿಸಿ ಗೋವಿಂದರಾಜನ ಮತ್ತು ಫಿಗ್ವೈರೋಡೋವಿನ ಸೈನಿಕರು ಕೋಟೆಯ ಗೋಡೆಯನ್ನು ಒಡೆದು ಆ ರಂಧ್ರದ ಮೂಲಕ ಪುರ ಪ್ರವೇಶ ಮಾಡಿದರು.

ಈಗ ಎಲ್ಲೆಲ್ಲೂ ಹಾಹಾಕಾರ ಉಂಟಾಯಿತು. ರಾಯನ ಸೈನಿಕರು ಕೋಟೆಯನ್ನು ಒಡೆದು ಪುರಪ್ರವೇಶ ಮಾಡಿದ ಸಂಗತಿಯನ್ನು ಕೇಳಿ ಜನ ಭೀತಿಯಿಂದ ಕಂಗೆಟ್ಟರು. ತಮ್ಮ ಕೋಟೆಯನ್ನು ಒಡೆಯುವುದಕ್ಕೆ ಯಾರಿಂದಲೂ ಸಾಧ್ಯವಿಲ್ಲವೆಂದು ತಿಳಿದು ನಿಶ್ಚಿಂತೆಯಿಂದಿದ್ದ ಜನ, ರಾಯನ ಸೈನಿಕರು ಕೋಟೆಯನ್ನು ಒಡೆದು ಒಳಗೆ ಬಂದ ಸಂಗತಿಯನ್ನು ತಿಳಿದು ವಿಸ್ಮಯಗೊಂಡರು. ಅವರಿಗೆ ಫಿಗ್ವೈರೋಡೊವಿನ ಸೈನಿಕರ ರೂಪ ಅವರ ಕೈಲಿದ್ದ ಕೋವಿಯನ್ನು ಕಂಡು ಭೂತ ದರ್ಶನವಾದಂತೆ ಹೆದರಿದರು. ಅವರ ಪಾಲಿಗೆ ಅವರು ಪಿಶಾಚಿಗಳೇ ಆಗಿದ್ದರು. ಇಲ್ಲದೆ ಇದ್ದರೆ ಅಸಾಧ್ಯವೆಂದು ತಿಳಿದಿದ್ದ ಕೋಟೆಯನ್ನು ಸಾಮಾನ್ಯ ಗುಂಡುಗಳಿಂದ ಒಡೆದು ಒಳಗೆ ಬರುವುದೆಂದರೇನು ?

ಇದ್ದಕ್ಕಿದ್ದಂತೆ ಒಳಕೋಟೆಯಲ್ಲಿ ಹಾಹಾಕಾರವೆದ್ದಿತು. ಒಳಕೋಟೆಯೂ ಶತ್ರುಗಳಿಗೆ ಬಲಿಯಾಯಿತೆಂದೂ ಅದನ್ನು ಸ್ವಾಧೀನಕ್ಕೆ ತೆಗೆದುಕೊಂಡು ಶತ್ರುಗಳು ಪುರದ ಬೀದಿಗಳಲ್ಲಿ ಬರುತ್ತಿರುವರೆಂದೂ ತಿಳಿಯಿತು. ಹೊರಗೆ ತಲೆಯಿಟ್ಟರೆ ಎಲ್ಲಿ ಸಾಯಬೇಕಾಗುವುದೊ ಎಂದು ಪುರಜನರು ತಮ್ಮ ಮನೆಗಳನ್ನು ಸೇರಿಕೊಂಡು ಭದ್ರಪಡಿಸಿಕೊಳ್ಳಲಾರಂಭಿಸಿದರು.

ಶತ್ರುಸೈನ್ಯ ನಾಯಕನು ಮಡಿದನಂತರಕೋಟೆ ಅನಾಯಕವಾಗಿತ್ತು. ಅದು ಸುಲಭವಾಗಿ ರಾಯನಿಗೆ ವಶವಾಯಿತು. ನೋಡು ನೋಡುತ್ತಿರು ವಂತೆಯೇ ದುರ್ಗದ ಬತೇರಿಯ ಮೇಲೆ ಹಾರಾಡುತ್ತಿದ್ದ ಸುಲ್ತಾನನ ಪತಾಕೆ ಕೆಳಗಿಳಿದು ಅದರ ಸ್ಥಳದಲ್ಲಿ ವಿಜಯ ನಗರದ ವರಾಹಾಂಕಿತ ಧ್ವಜವು ಮೆರೆಯಿತು.

ಇದನ್ನು ಕಂಡು ರಾಯನ ಶಿಬಿರದಲ್ಲಿ ಎಲ್ಲರಿಗೂ ಸಂತೋಷ ಆಶ್ಚರ್ಯ ಗಳುಂಟಾದವು. ದುರ್ಗವನ್ನು ತಮ್ಮ ಸೈನಿಕರು ವಶಪಡಿಸಿಕೊಂಡಿರುವು ದಕ್ಕೆ ಅದು ಸಂಕೇತವೆಂದು ತಿಳಿದು ಅವರು ತಮ್ಮಲ್ಲೇ ಹರ್ಷಿಸಿದರು. ಕೃಷ್ಣದೇವರಾಯನು ಜನರ ಜಯಕಾರ ಕೇಳಿ ತನ್ನ ಮಂದಿರದಿಂದ ಹೊರ ಬಂದು ದುರ್ಗದ ಬತೇರಿಯ ಮೇಲೆ ಮೆರೆಯುತ್ತಿರುವ ತಮ್ಮ ಧ್ವಜವನ್ನು ನೋಡಿ ಹಿಗ್ಗಿದನು. ಈ ವಿಜಯದ ಸಂಕೇತವಾಗಿ ಮೂವತ್ತೊಂದು ಫಿರಂಗಿಗಳನ್ನು ಹಾರಿಸುವಂತೆ ಆಜ್ಞಾಪಿಸಿ, ವಿಜಯಿಗಳಾದ ಗೋವಿಂದರಾಜ ಮತ್ತು ಫಿಗ್ರೈರೋಡೊ ಅವರನ್ನು ಸ್ವಾಗತಿಸಲು ಸಿದ್ಧನಾದನು.

ಈ ವೇಳೆಗೆ ರಾಯಚೂರು ಗೋವಿಂದರಾಜನ ಸ್ವಾಧೀನವಾಗಿತ್ತು. ಪುರಜನರು ಕೈಯಲ್ಲಿ ಬಿಳಿಯ ಬಾವುಟಗಳನ್ನು ಹಿಡಿದುಕೊಂಡು ಕಂಗಾ ಲಾಗಿ ಬಂದು ಶರಣಾಗತರಾದರು. ಅಲ್ಲಿಗೆ ಯುದ್ಧವು ಪರಿಸಮಾಪ್ತಿ ಗೊಂಡಿತು. ಪುರಜನರಿಗೆಲ್ಲ ಶಾಂತಿ ಭಿಕ್ಷೆ ನೀಡಲಾಯಿತು.

ರಾಯಚೂರಿನ ಪೌರರು ಸಾಲುಗಟ್ಟಿಕೊಂಡು ಬಂದು ರಾಯನನು ಕಾಪಾಡಲು ಮೊರೆಯಿಟ್ಟರು.

'ಮಹಾ ಪ್ರಭು! ಅರಿಯದೆ ನಾವು ಮಾಡಿರುವ ಅಪರಾಧವನ್ನು ಮನ್ನಿಸಬೇಕು. ತಮ್ಮ ಮೇಲೆ ಸಮರಕ್ಕೆ ಏಳಿಸಿದ ತಪ್ಪನ್ನು ಮನ್ನಿಸ ಬೇಕು' ಎಂದು ಬೇಡಿಕೊಂಡರು. ಕೃಷ್ಣದೇವರಾಯನಿಗೆ ಆ ಪುರಜನರ ಮೊರೆಯನ್ನು ಕೇಳಿ ಕರುಣೆಯುಂಟಾಯಿತು. ಅವನು ಪುರಜನರನ್ನು ಪ್ರೀತಿಯಿಂದ ಮಾತನಾಡಿಸಿ, ಅವರು ಯಾವ ತಪ್ಪನ್ನೂ ಮಾಡಲಿಲ್ಲವೆಂದು ಅವರು ತಮ್ಮ ಗೃಹಗಳಿಗೆ ನಿಶ್ಚಿಂತೆಯಾಗಿ ತೆರಳಬಹುದೆಂದು, ಅವರ ಕೂದಲುಎಳೆಯೂ ಸಹ ಕೊಂಕದಂತೆ ನೋಡಿಕೊಳ್ಳುವುದಾಗಿ ಭರವಸೆಯಿತ್ತು ಅವರನ್ನು ಹಿಂದಿರುಗಿಸಿದನು.

ಭಯಭೀತರಾಗಿದ್ದ ಜನ ಈಗ ಧೈರ್ಯವಾಗಿ ತಮ್ಮ ಮನೆಗಳಿಗೆ ತೆರಳಿದರು. ವಿಜಯಿಯಾದ ರಾಜನಿಂದ ತಮಗೆ ಯಾವ ಸಂಕಟ, ಕಷ್ಟ :ಉಳಿದಿದೆಯೊ ಎಂದು ಅವರು ಗಾಬರಿಗೊಂಡಿದ್ದರು. ರಾಯನ ದಯೆ ಔದಾರ್ಯಗಳನ್ನು ಕಂಡು ಅವರು ಬೆರಗಾದರು. ರಾಯಚೂರಿನ ನಾಗರಿಕರಿಗೆ ರಾಯನು ತಮ್ಮನ್ನು ಉದ್ಧರಿಸಲು ಬಂದ ದೇವತಾಮನುಷ್ಯನಂತೆ ಕಂಡನು.

ರಾಯಚೂರಿನ ಜನರು ಬಹುಮಟ್ಟಿಗೆ ಹಿಂದುಗಳು. ಮೇಲಾಗಿ ಕನ್ನಡಿಗರು. ಇವರು ಮೊದಲು ವಿಜಯನಗರ ಸಾಮ್ರಾಜ್ಯಕ್ಕೆ ಸೇರಿದ್ದರೂ, ಕಾಲಗತಿಯಿಂದ ಎರಡು ಮೂರು ದಶಕಗಳಿಂದ ಬಿಜಾಪುರದ ಸುಲ್ತಾನನ ಆಳ್ವಿಕೆಗೆ ಒಳಗಾಗಿದ್ದರು. ಅಲ್ಲಿನ ನಾಗರಿಕರು ಸುಲ್ತಾನನ ದಬ್ಬಾಳಿಕೆಯಿಂದ ನೊಂದಿದ್ದರು. ಈಗ ಅವರು ಮತ್ತೆ ತಮ್ಮ ದೇಶ ಬಾಂಧವರನ್ನು ಕೂಡಿಕೊಳ್ಳುವ ಅಪೂರ್ವ ಸುಯೋಗ ದೊರೆತಿತ್ತು. ಇದರಿಂದ ಅವರಿಗೆ ಅಮಿತ ಆನಂದವಾಗಿತ್ತು.

ಮಾರನೆಯದಿನ ಮುಂಜಾನೆಗೆ ಕೃಷ್ಣದೇವರಾಯನು ರಾಯಚೂರನ್ನು ಪ್ರವೇಶಿಸುವನೆಂದು ಡಂಗೂರ ಸಾರಿಸಲಾಗಿತ್ತು. ಪುರಜನರಾದಿಯಾಗಿ ಎಲ್ಲರೂ ಸಡಗರದಿಂದ ಬೀದಿಗಳನ್ನು ತಳಿರು ತೋರಣಗಳಿಂದ ಸಿಂಗರಿಸಿ ರಾಯನನ್ನು ವೈಭವದಿಂದ ಸ್ವಾಗತಿಸಲು ಸಿದ್ಧತೆ ಮಾಡಿದರು.

ರಾಯನು ನಿಶ್ಚಿತ ವೇಳೆಗೆ ಸರಿಯಾಗಿ ಪುರಪ್ರವೇಶ ಮಾಡಿದನು. ಅವನ ಎಡಬಲಗಳಲ್ಲಿ ಫಿಗೈರೊಡೋ ಮತ್ತು ಗೋವಿಂದರಾಜರು ಸಾಗಿದ್ದರು. ಅವರ ಹಿಂದೆ ತಿಮ್ಮರಸ, ರಾಯಸಂಕೊಂಡ ಮರಸಯ್ಯ ಮತ್ತಿತರ ಪ್ರಮುಖ ಸೇನಾನಿಗಳೂ ಪುರಪ್ರಮುಖರೂ ನಡೆದಿದ್ದರು. ಜನ ಜಯಘೋಷಮಾಡಿ, ಅವರ ಮೇಲೆ ಪುಷ್ಪವೃಷ್ಟಿ ಮಾಡಿ ಅವರನ್ನು ನಗರದೊಳಗೆ ಸ್ವಾಗತಿಸಿ ಅವನಿಗೆಂದೇ ಸಿದ್ಧಪಡಿಸಲಾಗಿದ್ದ ಮಂಟಪದೊಳಗೆ ಕರೆದೊಯ್ದರು.

ಮಂಟಪವನ್ನು ಭವ್ಯವಾಗಿ ರಚಿಸಿ, ಬಗೆ ಬಗೆಯಾಗಿ ಸಿಂಗರಿಸಿದ್ದರು. ಅಲ್ಲಿನ ಗದ್ದುಗೆಯ ಮೇಲೆ ರಾಯನು ಮಂಡಿಸಿದನು. ಪುರಪ್ರಮುಖರೆಲ್ಲ ರಾಯನ ಸಮ್ಮುಖಕ್ಕೆ ಬಂದು ಮುಜುರೆಮಾಡಿ ನಜರು ಒಪ್ಪಿಸಿ ಹೋದರು.

ಅನಂತರ ರಾಯನು ಪುರಜನರನ್ನು ಉದ್ದೇಶಿಸಿ ಮಾತನಾಡಿದನು.

'ನನ್ನ ನೆಚ್ಚಿನ ಪೌರರೇ, ನೀವು ಇನ್ನು ಮೇಲೆ ಯಾವ ಬಗೆಯ ಭೀತಿಗೂ ಒಳಗಾಗಬೇಕಿಲ್ಲ. ಇದುವರೆಗೆ ನೀವು ಪರಕೀಯರ ಪದಾಘಾತ ದಿಂದ ಸಾಕಷ್ಟು ನೊಂದಿದ್ದೀರಿ, ನರಳಿದ್ದೀರಿ. ರಾಹುಗ್ರಸ್ತರಂತಿದ್ದ ನಿಮ್ಮನ್ನು ಭಗವಂತನೇ ಇಂದು ಬಿಡುಗಡೆ ಮಾಡಿದ್ದಾನೆ. ನಿಮ್ಮನ್ನು ಮತ್ತೆ ನನ್ನ ಪ್ರೀತಿಯ ಪ್ರಜೆಗಳನ್ನಾಗಿ ಪಡೆದುದಕ್ಕೆ ನನಗೆ ಬಹಳ ಸಂತೋಷವಾಗಿದೆ. ನೀವು ವಿಜಯನಗರ ಸಾಮ್ರಾಜ್ಯದ ಛತ್ರದಡಿಯಲ್ಲಿ ಉಳಿದ ಸೋದರರಂ ತೆಯೇ ನೆಮ್ಮದಿಯಿಂದ, ನಿಷ್ಠೆಯಿಂದ ಬದುಕಿ ಸಾಮ್ರಾಜ್ಯಕ್ಕೆ ಕೀರ್ತಿ ತನ್ನಿ!

ಈ ಸಮಯದಲ್ಲಿ ಒಂದು ಮಾತನ್ನು ಹೇಳಬಯಸುತ್ತೇನೆ. ನಾವು ವಿಜಯಿಗಳಾಗಿದ್ದರೂ, ನಿಮಗೆ ನಮ್ಮ ಸೈನ್ಯದಿಂದ ಯಾವ ವಿಧವಾದ ಭೀತಿಗೂ ಕಾರಣವಿಲ್ಲ. ಒಂದು ವೇಳೆ ಇಲ್ಲಿ ಇದ್ದದ್ದೇ ನಿಮ್ಮ ನೆಮ್ಮದಿಗೆ ಭಂಗಬರಬಹುದೆಂದು ಯಾರಿಗಾದರೂ ಅನಿಸಿದರೆ, ಅವರು ಈ ಕೂಡಲೇ ತಮ್ಮ ಸಮಸ್ತ ಸಂಪತ್ತನ್ನು ತೆಗೆದುಕೊಂಡು, ಈ ನಗರವನ್ನು ಬಿಟ್ಟು ಹೊರಡಬಹುದು. ಅಂತಹವರಿಗೆ ಬಿಜಾಪುರದ ಗಡಿಯವರೆಗೆ ರಕ್ಷಣೆ ಕೊಡಲಾಗುವುದು. ನೀವು ಇಲ್ಲಿಯೇ ನೆಮ್ಮದಿಯಿಂದ ಇರಬಯಸುವು ದಾದರೆ ನಮಗೆ ತುಂಬಾ ಸಂತೋಷ.' ಎಂದು ಹೇಳಿ ಮಾತು ಮುಗಿ ಸಿದನು.

ಜನ ಜಯಕಾರ ಮಾಡಿ ರಾಯನಿತ್ತ ಆಶ್ವಾಸನಕ್ಕೆ ಕೃತಜ್ಞತೆ ತೋರಿಸಿದರು.

ಈ ವೇಳೆಗೆ, ನಗರದ ಒಂದು ಮೂಲೆಯಿಂದ ಆರ್ತಧ್ವನಿ ಕೇಳ ಬಂತು. ಅದೇನೆಂದು ವಿಚಾರಿಸಲಾಗಿ ಆ ಭಾಗದಲ್ಲಿದ್ದ ನಿವಾಸಿಗಳ ಮೇಲೆ ಸೈನಿಕರು ಬಿದ್ದು ಮನೆಗಳಲ್ಲಿ ಕೊಲೆ, ಸುಲಿಗೆ, ಅತ್ಯಾಚಾರಗಳನ್ನು ಮಾಡಲು ತೊಡಗಿದ್ದರಂತೆ! ಈ ಸುದ್ದಿಯನ್ನು ರಾಯನಿಗೆ ಅರಿಕೆ ಮಾಡಲು ಅಲ್ಲಿನ ನಿವಾಸಿಗಳು ಓಡಿಬರುತ್ತಿದ್ದರು.

ಈ ವಾರ್ತೆಯನ್ನು ಕೇಳಿ ರಾಯನು ಕುಳಿತಲ್ಲೇ ಕಿಡಿಕಿಡಿಯಾದನು. ಕೂಡಲೇ ಆ ದುರುಳರನ್ನು ಹಿಡಿತರಲು ಸೈನಿಕರನ್ನು ಅಟ್ಟಿದನು. ಸೈನಿ

ಕರು, ಕುಡಿದು ಮದೋನ್ಮತ್ತರಾದ ಕೆಲವು ಸೈನಿಕರನ್ನು ಹಿಡಿದು ತಂದು ರಾಯನ ಸಮ್ಮುಖದಲ್ಲಿ ನಿಲ್ಲಿಸಿದರು. ಅವರನ್ನು ಚೆನ್ನಾಗಿ ಹೊಡೆದು, ಕತ್ತೆಗಳ ಮೇಲೆ ಕೂಡಿಸಿ ಪುರದಲ್ಲೆಲ್ಲಾ ಮೆರವಣಿಗೆ ಮಾಡಲು ರಾಯನು ಆಜ್ಞಾಪಿಸಿದನು.

ಈ ಶಿಕ್ಷೆಯನ್ನು ಕೇಳಿದ ಜನತೆಗೆ ರಾಯನ ಮಾತಿನಲ್ಲಿ ನಂಬಿಕೆ ಉಂಟಾಯಿತು. ರಾಯನು ದುಷ್ಟಶಿಕ್ಷಕ, ಶಿಷ್ಟಪರಿಪಾಲಕನೆಂಬುದರ ಬಗ್ಗೆ ಅವರಿಗೆ ಸಂಶಯ ಉಳಿಯಲಿಲ್ಲ.

ರಾಯನು ಈ ಘಟನೆಗೆ ಕಾರಣರಾದ ಅತ್ಯಾಚಾರಿಗಳನ್ನು ಶಿಕ್ಷಿಸಿದುದಲ್ಲದೆ ಅವರು ದೋಚಿಕೊಂಡು ಹೋಗಿದ್ದ ಸಂಪತ್ತನ್ನು ಹಿಂದಿರುಗಿಸಿದುದು ಜನತೆಗೆ ರಾಯನಲ್ಲಿ ಪೂಜ್ಯಭಾವನೆ ಉಂಟಾಗುವಂತೆ ಮಾಡಿತು.

ರಾಯನು ರಾಯಚೂರಿನಲ್ಲಿರುವಂತೆಯೇ ವಿಜಯನಗರದಿಂದ ಪುರೋಹಿತರು ಒಂದು ಶುಭವಾರ್ತೆಯನ್ನು ತಂದರು. ರಾಯನ ಪಟ್ಟದ ರಾಣಿ ತಿರುಮಲಾದೇವಿಯ ಹೊಟ್ಟೆಯಲ್ಲಿ ಪುತ್ರರತ್ನವೊಂದು ಜನಿಸಿತ್ತು. ಈ ಸಂಗತಿಯನ್ನು ಅವರು ಅರುಹಿ ರಾಯನನ್ನು ಆಶೀರ್ವದಿಸಿದರು. ಒಮ್ಮೆಲೆ ದೊರೆತ ಎರಡು ಸಂತೋಷವಾರ್ತೆಗಳಿಂದ ರಾಯನ ಹೃದಯ ಹಿಗ್ಗಿತು. ಅವನು ಕೂಡಲೇ ಪುರಜನರಿಗೆ ಸಿಹಿಯನ್ನು ಹಂಚಲು ವ್ಯವಸ್ಥೆ ಮಾಡಿ, ಸಮಾಚಾರವನ್ನು ತಂದ ಪುರೋಹಿತರಿಗೆ ಪಾರಿತೋಷಕಗಳನ್ನು ಕೊಟ್ಟು ತೃಪ್ತಿಪಡಿಸಿದನು.

ಅನಂತರ ರಾಯನು ಎಂಟು ದಿನಗಳ ಕಾಲ, ಸಂತೋಷ ಸಂಭ್ರಮೆಗಳಿಂದ ಉತ್ಸವವನ್ನಾಚರಿಸಲು ಅಪ್ಪಣೆ ಮಾಡಿ, ರಾಯಚೂರಿನ ಆಡಳಿತದ ಬಗ್ಗೆ ವ್ಯವಸ್ಥೆ ಮಾಡಿ, ತಾಯಿ ಮಗುವನ್ನು ನೋಡಲು ರಾಜಧಾನಿಗೆ ಪ್ರಯಾಣ ಬೆಳೆಸಿದನು.

## ೮

ಮಹಾರಾಣಿ ತಿರುಮಲಾದೇವಿ ಕೃಷ್ಣದೇವರಾಯನ ಪಟ್ಟಮಹಿಷಿ. ಇವಳು ಶ್ರೀರಂಗಪಟ್ಟಣದ ಮಹಾಮಂಡಲೇಶ್ವರನಾದ ಕುಮಾರ ವೀರಯ್ಯನ

ಮಗಳು. ಬಾಲ್ಯದಲ್ಲಿಯೇ ಸಂಗೀತ, ಸಾಹಿತ್ಯಗಳಲ್ಲಿ ಸಿದ್ಧಿ ಪಡೆದಿದ್ದವ ನೃತ್ಯದಲ್ಲಿ ನಾಟ್ಯ ಸರಸ್ವತಿ ಎಂಬ ಬಿರುದನ್ನು ಪಡೆದವಳು. ಅವಳ ಗು ನಡತೆ, ರೂಪ, ಕುಲಗೋತ್ರಗಳನ್ನು ಕಂಡು ಮೆಚ್ಚಿದ್ದ ತಿಮ್ಮರಸನು ಕೃ ದೇವರಾಯನಿಗೆ ಇವಳೇ ಪಟ್ಟಮಹಿಷಿಯಾಗಲು ತಕ್ಕವಳೆಂದು ನಿರ್ಧ ದ್ದನು.

ಒಂದು ರೀತಿಯಲ್ಲಿ ಇವರ ವಿವಾಹ ತಿಮ್ಮರಸನ ಬಲವಂತದಿಂದ ಆಯಿತೆನ್ನಬೇಕು. ಕೃಷ್ಣದೇವರಾಯನು ಬಾಲ್ಯದಿಂದಲೂ ಪ್ರೀತಿಸಿ ಚಿನ್ನಾದೇವಿಯನ್ನು ಪಟ್ಟ ಮಹಿಷಿಯನ್ನಾಗ ಮಾಡಿಕೊಳ್ಳಬೇಕೆಂದು ನಿ ರಿಸಿದ್ದನು. ಆದರೆ ತಿಮ್ಮರಸನು ಈ ವಿಷಯದಲ್ಲಿ ತನ್ನ ವಿರೋಧವ ವ್ಯಕ್ತಪಡಿಸಿದನು.

ಕೃಷ್ಣದೇವರಾಯನು ಚಿನ್ನಾದೇವಿಯನ್ನು ಪಟ್ಟದ ರಾಣಿಯನ್ನಾ ಮಾಡಿಕೊಳ್ಳುವ ವಿಷಯದಲ್ಲಿ ತಿಮ್ಮರಸನು ವಿರೋಧ ಸೂಚಿಸಲು ಪ್ರಬ ವಾದ ಕಾರಣವಿತ್ತು. ಚಿನ್ನಾದೇವಿಯಲ್ಲಿ ಪಟ್ಟಮಹಿಷಿಯಾಗಲು ಗುಣಗಳೂ ಇದ್ದವು. ಅವಳು ಅನುಪಮ ಸುಂದರಿ. ಸದ್ಗುಣ ಸಂಪನ್ನೆಯ ಆಗಿದ್ದಳು. ಕ್ಷತ್ರಿಯ ರಮಣಿಯರಿಗೆ ಒಪ್ಪುವ ಕುದುರೆ ಸವಾರಿ, ಕ ವರಸೆ, ಬಿಲ್ಗಾರಿಕೆ ಮೊದಲಾದ ವೀರವಿದ್ಯೆಗಳ ಪರಿಚಯವೂ ಆಕೆಗೆ ಇದ್ದಿತ ರಾಜಕೀಯದಲ್ಲಿ ಅಪಾರ ಆಸಕ್ತಿಯಿತ್ತು ಚಿನ್ನಾದೇವಿಗೆ. ಪ್ರಜೆಗಳ ಮಕ್ಕಳಂತೆನೋಡುವ ವಿಶಾಲ ಮನೋಭಾವನೆಯೂ ಇತ್ತು ಇವಳ ಆದರೆ ಒಂದೇ ಒಂದು ವಿಷಯದಲ್ಲಿ ಮಾತ್ರ ಅವಳಿಗೆ ಪೂಜ್ಯ ಪವಿತ್ರವೂ ಆದ ರತ್ನಸಿಂಹಾಸನದಲ್ಲಿ ರಾಯನ ಅರ್ಧಾ ಯಾಗಿ, ಮಂಡಿಸಲು ಅರ್ಹತೆ ಇರಲಿಲ್ಲ. ಇದು ಅವಳ ಕು ಗೋತ್ರಗಳ ವಿಷಯು. ಚಿನ್ನಾದೇವಿಯ ತಂದೆ ತಾಯಿ ಯಾರು ಅವರ ಕುಲಗೋತ್ರಗಳೇನು ? ಎಂಬುದು ಯಾರಿಗೂ ತಿಳಿದಿರಲಿ ಇಂತಹ ಅಜ್ಞಾತ ಕುಲಗೋತ್ರ ಸಂಭೂತೆಯನ್ನು ಪಟ್ಟದ ರಾಣಿಯನ್ನಾ ಮಾಡಿಕೊಳ್ಳಲು ತಿಮ್ಮರಸನಿಗೆ ಇಷ್ಟವಿರಲಿಲ್ಲ. ಅಂತಲೇ ತಿಮ್ಮರಸ ಚಿನ್ನಾದೇವಿಯಲ್ಲಿ ರಾಯನಿಗಿರುವ ಅನುಪಮ ಪ್ರೀತಿಯನ್ನು ನೋಡಿ ಅ ಳನ್ನು ಭೋಗ ಕಾಂತೆಯಾಗಿ ಇರಿಸಿಕೊಳ್ಳಲು ತನ್ನ ಅಭ್ಯಂತರವಿಲವೆಂ

ಸೂಚಿಸಿದಾಗ ಕೃಷ್ಣದೇವರಾಯನು ಕೆರಳಿ ' ಅಪ್ಪಾಜಿ, ಚಿನ್ನಾದೇವಿಯನ್ನು ನನ್ನ ಭೋಗಕಾಂತೆಯನ್ನಾಗಿ ತಿಳಿಯಲೇ ? ಯಾರನ್ನು ನಾನು ತ್ರಿಕರಣ ಪೂರ್ವಕವಾಗಿ ಒಲಿದು, ಗಾಂಧರ್ವ ರೀತಿಯಲ್ಲಿ ಸೂರ್ಯಚಂದ್ರರ ಸಾಕ್ಷಿಯಾಗಿ ಮದುವೆಯಾಗಿ, ಧರ್ಮಾರ್ಥ ಕಾಮ ಮೋಕ್ಷಗಳಲ್ಲಿ ಸಹಧರ್ಮಿಣಿ ಎಂದು ತಿಳಿದಿರುವ ಚಿನ್ನಾದೇವಿಯನ್ನು ಭೋಗ ಕಾಂತೆ ಎಂದು ತಿಳಿದು ಯಾವ ನರಕಕ್ಕೆ ಹೋಗಲಿ ? ಇದಕ್ಕಿಂತ ಘೋರ ನರಕ-ಆತ್ಮವಂಚನೆ ಬೇರೆ ಬೇಕೇ ?....ಅಪ್ಪಾಜಿ, ನೀವು ಏನು ತಿಳಿದರೂ ಸರಿ, ನಾನು ಚಿನ್ನಾದೇವಿಯನ್ನು ಶಾಸ್ತ್ರೋಕ್ತವಾಗಿ ಮದುವೆಯಾಗಿ ರಾಣಿ ಪದವಿಗೇರಿಸಬೇಕು- ಹಾಗೊಂದು ವೇಳೆ ಸಾಧ್ಯವಾಗದೆಇದ್ದರೆ ನಾನು ಈ ಜನ್ಮದಲ್ಲಿ ಮದುವೆಯಾಗುವುದೇ ಇಲ್ಲ' ಎಂದು ನಿಷ್ಠುರನಾಗಿ ಹೇಳಿದ್ದನು.

ಈ ಮಾತಿಗೆ ತಿಮ್ಮರಸನ ಬಾಯಿ ಕಟ್ಟಿಹೋಗಿತ್ತು. ವಿಚಾರ ಕುಂಠಿತವಾಗಿತ್ತು. ರಾಯನು ಸ್ಪಷ್ಟವಾದ ಮಾತಿನಲ್ಲಿ ಚಿನ್ನಾದೇವಿಯ ಬಗ್ಗೆ ತನ್ನ ನಿಲುವೇನೆಂದು ಹೇಳಿಬಿಟ್ಟಿದ್ದನು ಅವನು ತನ್ನ ನಿರ್ಧಾರವನ್ನು ಬದಲಿಸುವಂತೆ ಮಾಡಲು ಸಾಧ್ಯವಿರಲಿಲ್ಲ. ಕೃಷ್ಣದೇವರಾಯನು ಆಡಿದಂತೆ ನುಡಿಯುವ ವ್ಯಕ್ತಿ. ಅವನು ತನ್ನ ಪ್ರೇಮದ ಪುತ್ಥಳಿಯಾದ ಅವಳಿಗೆ ಕೊಟ್ಟಿದ್ದ ವಚನವನ್ನು ಉಳಿಸಿಕೊಳ್ಳುವುದಕ್ಕಾಗಿ ಯಾವ ತ್ಯಾಗ ಬೇಕಾದರೂ ಮಾಡುವನೆಂದು ತಿಳಿದಿದ್ದ. ಈ ಧರ್ಮ ಸಂಕಟದಿಂದ ಪಾರಾಗುವ ದಾರಿ ಕಾಣದೆ ತಿಮ್ಮರಸನಿಗೆ ತುಂಬಾ ಚಿಂತೆಗಿಟ್ಟುಕೊಂಡಿತು.

ಎಷ್ಟೋ ಬಾರಿ ತಿಮ್ಮರಸನೂ ಆಲೋಚಿಸುತ್ತಿದ್ದನು. ಈ ಚಿನ್ನಾದೇವಿಗೆ ರಾಜಲಕ್ಷಣಗಳೆಲ್ಲವೂ ಇದೆ. ಅವಳು ರಾಜಪುತ್ರಿ ಎಂದು ಮುಖದಲ್ಲಿನ ರಾಜಕಳೆ, ವರ್ಚಸ್ಸುಗಳು ಸಾರುತ್ತಿವೆ. ಅವಳ ಉದಾತ್ತ, ಗುಣ ನಡತೆಗಳು ರಾಯನ ಧರ್ಮಪತ್ನಿಯಾಗಲು ತಕ್ಕದ್ದಾಗಿದೆ. ಇವುಗಳ ಜೊತೆಗೆ ಅವಳ ಕುಲಗೋತ್ರಗಳ ವಿಷಯವೂ ಸ್ಪಷ್ಟವಾಗಿ ತಿಳಿದು ಬಂದಿದ್ದರೆ ? ಅವಳನ್ನು ರಾಯನು ವಿವಾಹವಾಗಲು ತಿಮ್ಮರಸನು ಸಮ್ಮತಿಸುತಿದ್ದ. ಆದರೆ ಚಿನ್ನಾದೇವಿಯ ಕುಲಗೋತ್ರಗಳ ವಿಷಯ ಅವಳ ಎಲ್ಲ ಸದ್ಗುಣಗಳ ನಡುವೆ ಕಲೆಯಂತೆ ಉಳಿದು ಬಿಟ್ಟಿತ್ತು. ಇದನ್ನು ತಿಳಿದೂ ತಿಳಿದೂ ಅಂತರ್ವಾಣಿಯ ವಿರುದ್ಧ ಅವಳನ್ನು ರಾಯನಿಗೆ ವಿವಾಹಮಾಡಿ

ಪವಿತ್ರ ಸಿಂಹಾಸನವನ್ನು ಅಪವಿತ್ರಗೊಳಿಸುವುದೇ ? ಎನ್ನುವ ಧ
ಸಂಕಟದಿಂದ ಹೊರಗೆ ಬರುವ ದಾರಿಕಾಣದೆ ಅವನು ರಾಯನಷ್ಟೇ ವ್ಯಾಕ
ಗೊಂಡಿದ್ದನು.

ರಾಯನು ಪಟ್ಟಕ್ಕೆ ಬರುವ ಮುನ್ನ ವೀರನರಸಿಂಹನ ಹೆದರಿಕೆಯಿ
ಅಜ್ಞಾತವಾಸ ಮಾಡುತ್ತಿದ್ದನಷ್ಟೆ. ಈ ಅಜ್ಞಾತವಾಸದಲ್ಲಿರುವ
ಚಿನ್ನಾದೇವಿಗೆ ತಾನು ಪಟ್ಟಕ್ಕೆ ಬಂದ ಕೂಡಲೇ ಅವಳನ್ನು ಮಹಾರಾಣಿ
ವಿಗೇರಿಸುವುದಾಗಿ ರಾಯನು ಮಾತು ಕೊಟ್ಟಿದ್ದನು. ಅದರಂತೆ ರಾಯ
ವೀರನರಸಿಂಹನ ನಂತರ ಸಿಂಹಾಸನವನ್ನೇರಿದಾಗ ಅವನು ತನ್ನ ಮಾತಿನ
ನಡೆಯಲು ನಿರ್ಧರಿಸಿದನು.

ರಾಯನ ನಿರ್ಧಾರವನ್ನು ಕೇಳಿ ದಿಲಾಗಾಯಿತು. ತಿಮ್ಮರಸನಿಗೆ
ನೀರುಗಳು ಸೇರದಾಯಿತು. ರಾಯನ ವಿವಾಹದ ಸಮಸ್ಯೆ ಇಷ್ಟು ಮ
ದ್ದಾಗುವುವೆಂದು ಅವನು ತಿಳಿದಿರಲಿಲ್ಲ. ಅವನ ಮನಸ್ಸು ಆ ತರುಣ
ಯಿಗಳಿಗಾಗಿ ಮರುಗುತ್ತಿತ್ತು. ಆದರೂ ಆ ಹೃದಯದ ಭಾವನೆಗ
ರಾಜಧರ್ಮವನ್ನು ಬಲಿಗೊಡಲು ತಿಮ್ಮರಸನು ಸಿದ್ಧನಿರಲಿಲ್ಲ..

ಆದರೆ ರಾಯನ ವಿಚಾರ ಸರಣಿಯೇ ಬೇರೆಯಾಗಿತ್ತು. ಚಿನ್ನಾದ
ಅಜ್ಞಾತ ಕುಲಗೋತ್ರಜೆ ಎಂಬ ಒಂದು ಕಾರಣದಿಂದ ಅವಳ ಎಲ್ಲ ಶ್ರೆ
ಗುಣಗಳನ್ನು ನಿರ್ಲಕ್ಷಿಸಲು ಅವನು ಸಿದ್ಧನಿರಲಿಲ್ಲ. ಕ್ಷತ್ರಿಯನಾದ ಅ
ಮನಸ್ಸನ್ನು ಅವಳು ಅಪಹರಿಸದಿದ್ದರೆ ಅವಳೂ ಕ್ಷತ್ರಿಯ ರಮಣಿಯೇ ಅ
ಬೇಕೆಂದು ಅವನ ಅಂತರಾತ್ಮ ಹೇಳುತ್ತಿತ್ತು. ಅವಳ ಯೋಗ್ಯತೆಯ
ಯುವ ಸಾಧನ ಅವಳ ಗುಣ ನಡತೆಗಳೇ ಹೊರತು ಅವಳ ವಂಶ ಚ
ಯಲ್ಲವೆಂದು ರಾಯನ ಅಭಿಮತ. ರಾಯನ ಭಾವನೆಯಲ್ಲಿ ಚಿನ್ನಾದೇವಿ
ಕೆಸರಿನಲ್ಲಿ ಹುಟ್ಟಿದ ಕಮಲದಂತೆ–ಪರಿಶುದ್ಧಳಾಗಿದ್ದಳು, ಕೆಚ್ಚಲಿನ ಹ
ನಂತೆ ಪವಿತ್ರಳಾಗಿದ್ದಳು ; ಮೃಗನಾಭಿಯ ಕಸ್ತೂರಿಯಂತೆ ಪೂಜನಿ
ವಾಗಿದ್ದಳು. ಅವಳ ಕುಲಡೊಂಕಾದರೂ ಅವಳ ನಿರ್ಮಲಾಂತಃಕ
ದೈವಿಕವಾದ ಪ್ರೀತಿಗೆ ಕಳಂಕವಿಲ್ಲವೆಂದು ರಾಯನ ವಾದ.

ಚಿನ್ನಾದೇವಿಯ ತಾಯಿ ಸುಭದ್ರಾದೇವಿ ವಿಜಯ ನಗರಕ್ಕೆ ಬಂ
ಅವಳು ತುಂಬು ಗರ್ಭಿಣಿ. ಅವಳು ಯಾರು ? ಯಾವ ದೇಶದವ

ಇವುಗಳೊಂದೂ ಯಾರಿಗೂ ತಿಳಿದಿರಲಿಲ್ಲ. ಇವುಗಳ ಬಗ್ಗೆ ಪ್ರಶ್ನಿಸಿದರೂ ಅವಳು ಆ ಬಗ್ಗೆ ಚಕಾರವೆತ್ತುತ್ತಿರಲಿಲ್ಲ. ಹೀಗಾಗಿ, ಈ ಸಂಗತಿಗಳು ಸುಭದ್ರಾದೇವಿ ಸಾಯುವ ತನಕ ಗೋಪ್ಯವಾಗಿಯೇ ಉಳಿದಿತ್ತು.

ಸುಭದ್ರಾದೇವಿ ಜೀವನದಲ್ಲಿ ತುಂಬಾ ನೊಂದಿದ್ದ ಹೆಣ್ಣು. ಅವಳು ತುಂಬು ಗರ್ಭಿಣಿಯಾಗಿ, ಅನಾಥೆಯಂತೆ ವಿಜಯನಗರಕ್ಕೆ ಬಂದಿದ್ದಳು. ಯಾರೋ ಧರ್ಮಾತ್ಮರ ಆಶ್ರಯ ಪಡೆದು ಅಲ್ಲಿಯೇ ಒಂದು ಹೆಣ್ಣು ಮಗುವಿಗೆ ಜನ್ಮವಿತ್ತಿದ್ದಳು. ಅವಳೇ ಚಿನ್ನಾದೇವಿ.

ಚಿನ್ನಾದೇವಿ ಹುಟ್ಟಿದ ಒಂದೆರಡು ವರ್ಷಗಳಲ್ಲಿ ಅವರ ಆಶ್ರಯದಾತನು ತೀರಿಕೊಂಡನು. ಇದರಿಂದಾಗಿ ಸುಭದ್ರದೇವಿ ಮತ್ತೆ ಬೀದಿಯ ಪಾಲಾದಳು. ನಿಲ್ಲಲು ನೆಲೆಯಿಲ್ಲದೆ ಅನಾಥರಾದ ಆ ತಾಯಿ ಮಕ್ಕಳು ಬಡತನದ ಬೇಗೆಯಲ್ಲಿ ಬೆಂದರು. ಆ ಮಹಾ ಪಟ್ಟಣದಲ್ಲಿ ಅವರಿಗೆ ಹಿಡಿ ಕೂಳು ಸಿಕ್ಕುವುದೂ ಕಷ್ಟವಾಯಿತು. ಸುಭದ್ರಾದೇವಿ ಮರ್ಯಾದೆಯನ್ನು ಬಿಟ್ಟು ಬಾಳಿದ್ದರೆ ಅವಳು ಅನ್ನವಸ್ತ್ರಗಳಿಗೆ ಕೊರಗಬೇಕಾದ ಕಾರಣವಿರಲಿಲ್ಲ. ಅಂತಹ ಹೇಯ ಬಾಳ್ವೆಯನ್ನು ಬಾಳುವುದಕ್ಕಿಂತ ಸಾಯುವುದೇ ಲೇಸೆಂದು ಅವಳ ಮತ. ಎಂದೂ ಮತ್ತೊಬ್ಬರ ಅನುಕಂಪ, ಸಹಾನುಭೂತಿಗಳನ್ನು ಅವಳು ಅಪೇಕ್ಷಿಸುತ್ತಿರಲಿಲ್ಲ ತಾನು ಬೆವರು ಸುರಿಸಿ ಹೊಟ್ಟೆ ಹೊರೆಯಬೇಕೆಂದೂ, ಯಾವ ಕಾಲಕ್ಕೂ ಹಂಗಿನ ಕೂಳಿಗೆ ಬೀಳಬಾರದೆಂದೂ ಅವಳ ನಿರ್ಧಾರ. ಅಂತಲೇ ಅವಳು ತನ್ನ ಆಶ್ರಯದಾತ ತೀರಿಕೊಂಡನಂತರ, ಬೇರೆಡೆಯಲ್ಲಿ ಉದ್ಯೋಗ ದೊರಕಿಸಿಕೊಂಡು ಮರ್ಯಾದೆಯಾಗಿ ಬಾಳಲು ಪ್ರಯತ್ನಿಸಿದಳು. ಆದರೆ ತುಂಬು ಯೌವ್ವನೆಯಾದ ಸುಭದ್ರಾದೇವಿಗೆ ಮಾನವನ್ನು ಕಾಯ್ದು ಕೊಂಡು ಬದುಕುವುದು ಕಷ್ಟವೇ ಆಯಿತು. ಅವಳು ಹೋದೆಡೆಯಲ್ಲೆಲ್ಲಾ ವಿಷಯ ಲಂಪಟರ, ಕಾಮುಕರ ದೃಷ್ಟಿಯಿಂದ ತಪ್ಪಿಸಿಕೊಳ್ಳುವುದು ಕಷ್ಟವಾಯಿತು. ಅಂತಹವರ ಕ್ರೂರ ದೃಷ್ಟಿಯಿಂದ ತನ್ನನ್ನು ಕಾಪಾಡಬೇಕೆಂದು ಆಕೆ ಪಂಪಾಪತಿಗೆ ಶರಣಾಗಿದ್ದಳು.

ಅವಳ ಮೊರೆ ಪಂಪಾಪತಿ ವಿರೂಪಾಕ್ಷನಿಗೆ ಸೇರಿತೆಂದು ತೋರುತ್ತದೆ. ಅವಳಿಗೆ ಯೋಗ್ಯರಾದ ಆಶ್ರಯದಾತರು ದೊರೆತು ಅವಳ ಎಲ್ಲ ಕಷ್ಟಗಳೂ

ಅಂದಿಗೇ ಪರಿಹಾರವಾದವು.

ಸುಭದ್ರಾ ದೇವಿಗೆ ಆಶ್ರಯವಿತ್ತ ವ್ಯಕ್ತಿ ಬೇರೆ ಯಾರೂ ಆಗಿರದೆ ವೀರನರಸಿಂಹನ ಕೈಕೆಳಗೆ ದಂಡನಾಯಕನಾಗಿದ್ದ ರಾಯಸಂ ಕೊಂಡಮರ ಸಯ್ಯ. ಅವನು ಮೊದಲು ರಾಯಸದ ಕೆಲಸ ಮಾಡುತ್ತಿದ್ದು ತನ್ನ ಸ್ವಶಕ್ತಿ ಸಾಮರ್ಥ್ಯಗಳಿಂದ, ಹಂತ ಹಂತವಾಗಿ ಮೇಲೇರಿ ದಂಡನಾಯಕನ ಪದವಿಗೇರಿದ್ದನು. ಅವನಿಗೆ ಲೆಕ್ಕಣಿಕೆಯನ್ನು ಉಪಯೋಗಿಸಿಕೊಳ್ಳುವ ಕಲೆ ತಿಳಿದಿದ್ದಂತೆ ಕತ್ತಿಯನ್ನು ಉಪಯೋಗಿಸುವ ಕಲೆಯೂ ತಿಳಿದಿತ್ತು. ಮುಂದೆ ಕೃಷ್ಣದೇವರಾಯನ ದಿಗ್ವಿಜಯಗಳಲ್ಲಿ ಉತ್ಕಲ, ಉದಯಗಿರಿ, ಪೊಟ್ಟನೂರು ಯುದ್ಧಗಳಲ್ಲಿ ಭಾಗವಹಿಸಿದ್ದ. ಸಿಂಹಾದ್ರಿ, ಶ್ರೀಕುರಂ, ಪೊಟ್ಟನೂರುಗಳಲ್ಲಿ ರಾಯನ ಕೀರ್ತಿಯನ್ನು ಸಾರುವ ವಿಜಯ ಸ್ತಂಭಗಳನ್ನು ಸ್ಥಾಪಿಸುವ ಭಾಗ್ಯ ಅವನದಾಗಿತ್ತು.

ಅವನು ಸಮರವಿದ್ಯಾಪಂಡಿತನಾಗಿದ್ದಂತೆ ಉದಾರಿಯೂ ಆಗಿದ್ದನು. ಕೊಂಡಮರಸಯ್ಯನ ಪತ್ನಿ ತನ್ನ ಮಕ್ಕಳಿಗೆ ಮಲತಾಯಿಯನ್ನು ತರಬಾರದೆಂದೂ, ಅವರನ್ನು ಪ್ರೀತಿಯಿಂದ ಕಾಣಬೇಕೆಂದು ವಚನ ಪಡೆದುಕೊಂಡೇ ಅಕಾಲಿಕ ಮೃತ್ಯುವಿಗೆ ತುತ್ತಾಗಿದ್ದಳು. ಸದಾ ಯುದ್ಧಗಳಲ್ಲಿ ತೊಡಗಿರುವ ತನ್ನಿಂದ ಯಾವ ಗೃಹಸೌಖ್ಯವೂ ಪತ್ನಿಗೆ ದೊರೆಯದೆಂದು ತಿಳಿದು ಅವನು ಮರಳಿ ಮದುವೆಯಾಗುವ ಆಲೋಚನೆಯನ್ನು ಮಾಡಿರಲಿಲ್ಲ. ಅಲ್ಲದೆ ಪ್ರಿಯ ಪತ್ನಿಗೆ ಮರಣಕಾಲದಲ್ಲಿ ಕೊಟ್ಟ ವಚನವನ್ನು ಪಾಲಿಸಬೇಕೆಂದು ಸಂಕಲ್ಪಮಾಡಿದ್ದನು. ಹೀಗಾಗಿ ಅವನು ಮತ್ತ ಮದುವೆಯಾಗದೆ ಚಿಕ್ಕ ಮಗುವಿವ ಆರೈಕೆಯನ್ನು ದಾಸಿಯರಿಗೆ ಒಪ್ಪಿಸಲು ಮನವಾಗದೆ ತನ್ನ ಮಕ್ಕಳನ್ನು ಪ್ರೀತಿಯಿಂದ ತಾಯ ಕೊರತೆಯನ್ನು ತುಂಬುವಂತೆ ನೋಡಿಕೊಳ್ಳುವ ವ್ಯಕ್ತಿಗಾಗಿ ಶೋಧಿಸುತ್ತಿರುವಾಗಲೇ ಅವನಿಗೆ ಸುಭದ್ರಾದೇವಿಯ ಪರಿಚಯವಾದುದು. ಸುಭದ್ರಾದೇವಿ ಉದಾರ ಚರಿತನೂ, ದೈವಭೀರುವೂ ಆಗಿದ್ದ ಕೊಂಡಮರಸಯ್ಯನ ಮಕ್ಕಳನ್ನು ನೋಡಿಕೊಳ್ಳುವ ಕೆಲಸವನ್ನು ಸಂತೋಷದಿಂದಲೇ ಒಪ್ಪಿಕೊಂಡಳು. ಅವಳು ಮಗು ವಿಜಯಭದ್ರನನ್ನು ತನ್ನ ಮಗನೆಂದೇ ಭಾವಿಸಿ ಪ್ರೀತಿಯಿಂದ ಸಲಹಿದಳು. ವಿಜಯಭದ್ರನಿಗೆ ಚಿನ್ನಾದೇವಿ ಅಭಿಮಾನದ ತಂಗಿ

ಯಾದಳು. ಕೊಂಡಮರಸಯ್ಯನಿಗೆ ಪ್ರೀತಿಯ ಕುವರಿಯಾದಳು.

ಆದರೆ ಸುಭದ್ರಾದೇವಿಯ ಭಾಗ್ಯ ಕೊನೆಯವರೆವಿಗೂ ಹೀಗೆಯೇ ಉಳಿಯಲಿಲ್ಲ. ಚಿನ್ನಾದೇವಿ ಹತ್ತು ವರ್ಷದವಳಿರುವಾಗಲೇ ಹಾಸಿಗೆ ಹಿಡಿದು ಮಲಗಿದ ಸುಭದ್ರಾದೇವಿ ಮತ್ತೆ ಮೇಲೇಳದೆ ಇಹಲೋಕದ ಯಾತ್ರೆಯನ್ನು ಮುಗಿಸಿದಳು. ಆದರೆ ಸಾಯುವ ಮುನ್ನ ಕೊಂಡಮರ ಸಯ್ಯನಿಗೂ, ಚಿನ್ನಾದೇವಿಗೂ ತನ್ನ ವೃತ್ತಾಂತವನ್ನೆಲ್ಲಾ ಹೇಳಿ ತೀರಿ ಕೊಂಡಿದ್ದಳು.

ಕೊಂಡಮರಸಯ್ಯನಿಗೆ ಸುಭದ್ರಾದೇವಿಯ ವೃತ್ತಾಂತ ಕೇಳಿ ಆಶ್ಚರ್ಯ ವಾಯಿತು. ತಾನು ಯಾರನ್ನು ಪರದೇಶಿ, ಅನಾಥೆ, ಎಂದು ತಿಳಿದಿದ್ದನೋ ಅವಳು ಬೇರಾರೂ ಅಲ್ಲ-ಪರಿತ್ಯಕ್ತ ರಾಜಪುತ್ರಿ ಎಂದು ತಿಳಿದಾಗ ಅವನಿಗಾದ ವಿಸ್ಮಯ ಅಷ್ಟಿಷ್ಟಲ್ಲ.

ಸುಭದ್ರಾದೇವಿ ಉತ್ತರ ದೇಶದ ಯಾವುದೋ ರಾಜ್ಯದ ರಾಜಪುತ್ರಿ. ಅವಳು ಪ್ರಾಪ್ತವಯಸ್ಸಿಗೆ ಬಂದಾಗ ತನ್ನ ಅಂತಸ್ತಿಗೆ, ಘನತೆಗೆ ತಕ್ಕ ರಾಜ ಕುಮಾರನೊಂದಿಗೆ ತಂದೆತಾಯಿಗೂ ಅವಳನ್ನು ವೈಭವದಿಂದ ವಿವಾಹ ಮಾಡಿದರು. ಮದುವೆಯಾದ ಕೆಲವು ವರ್ಷಗಳು ದಂಪತಿಗಳು ಅನ್ಯೋನ್ಯ ವಾಗಿ ಪ್ರೀತಿಯಿಂದಲೇ ಬಾಳಿದರು. ಒಮ್ಮೆ ತವರಿಗೆ ಬಂದಾಗ ನಡೆದ ಘಟನೆ ಅವಳ ಭವಿಷ್ಯವನ್ನು ಮಣ್ಣುಗೂಡಿಸಿತ್ತು.

ಸುಭದ್ರಾದೇವಿಯನ್ನು ಬಾಲ್ಯದಿಂದಲೂ ಒಬ್ಬ ಸಮೀಪದ ರಾಜ ಬಂಧುವು ಪ್ರೀತಿಸುತ್ತಿದ್ದನು. ಅವನ ದುರ್ನಡತೆಗಳನ್ನು ನೋಡಿ ಬೇಸತ್ತ ಸುಭದ್ರಾದೇವಿ ಅವನನ್ನು ತಿರಸ್ಕರಿಸಿದ್ದಳು. ಅಂದಿನಿಂದಲೂ ಅವನಿಗೆ ಸುಭದ್ರಾದೇವಿಯ ಮೇಲೆ ಮತ್ಸರದ ಹೊಗೆಯಾಡುತ್ತಿತ್ತು ಭಗ್ನ ಪ್ರಣಯಿಯಾದ ಅವನು ಅವಳ ಮೇಲೆ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದ. ಅವಳನ್ನು ಕೆಣಕಿ ಅಪಮಾನಿತನಾಗಿದ್ದ ಅವನು ರಾಜ ಧಾನಿಯನ್ನು ಬಿಡಬೇಕಾದ ಪ್ರಸಂಗ ಬಂದಿತ್ತು. ಈ ಘಟನೆಯ ವಿಷವೃಕ್ಷದ ಫಲವನ್ನು ಮುಂದೆ ಸುಭದ್ರಾದೇವಿ ಅನುಭವಿಸಬೇಕಾಯಿತು.

ಕ್ರೋಧದಿಂದ, ಸುಭದ್ರಾದೇವಿಯಮೇಲೆ ಸಿಟ್ಟಿಗೆದ್ದು, ಅವನು ರಾಜ್ಯ ತ್ಯಾಗ ಮಾಡಿದನು. ಆ ರಾಜಬಂಧುವು ಅವಳ ಪತಿಯ ರಾಜ್ಯಕ್ಕೆ ಬಂದು

ಉಪಾಯಾಂತರದಿಂದ ಅವನ ಸ್ನೇಹವನ್ನು ಸಂಪಾದಿಸಿಕೊಂಡು ಅಲ್ಲಿಯೇ ನೆಲೆಯಾಗಿ ನಿಂತನು ಅವನು ಕ್ರಮ ಕ್ರಮವಾಗಿ ಅವಳ ನಡತೆಯ ಬಗ್ಗೆ ಅವಳ ಪತಿಯು ಸಂಶಯ ಪಡುವಂತೆ ಮಾಡಿದನು. ಅವಳನ್ನು ಜಾರಿಣಿ ಎನ್ನುವ ಅಪಾದನೆಗೆ ಒಳಪಡಿಸಿ ರಾಜ್ಯದಿಂದ ಹೊರಗಟ್ಟುವ ಕಾರ್ಯದಲ್ಲಿ ಕಡೆಗೂ ಅವನು ಯಶಸ್ವಿಯಾದನು. ಅವನು ಸೃಷ್ಟಿಸಿದ್ದ ಸುಳ್ಳುಪತ್ರಗಳನ್ನು ನಿಜವೆಂದು ನಂಬಿ, ಸುಭದ್ರಾದೇವಿಯ ಗಂಡನು ಅವಳನ್ನು ಗರ್ಭಿಣಿಯೆಂದೂ ನೋಡದೆ ಅವಳನ್ನು ರಾಜ್ಯದಿಂದ ಹೊರಗಟ್ಟಿದನು. ತನ್ನ ಮೇಲಿನ ಅಪಾದನೆಗೆ ಬುಡವಿಲ್ಲವೆಂದು ಎಷ್ಟು ಹೇಳಿದರೂ ಅದಕ್ಕೆ ಸಮರ್ಥನೆ ದೊರೆಯಲಿಲ್ಲ. ಅವಳಿಗೆ ಬದುಕು ಬೇಸರವಾಗಿ, ಆತ್ಮಹತ್ಯೆ ಮಾಡಿಕೊಳ್ಳಲು ಒಂದು ನದಿಯ ಬಳಿಗೆ ಬಂದಿದ್ದಾಗ, ಅಲ್ಲಿ ಸ್ನಾನಾಹ್ನಿಕಗಳಿಗೆ ಬಂದಿದ್ದ ಸನ್ಯಾಸಿಯೊಬ್ಬನ ದೃಷ್ಟಿಗೆ ಬಿದ್ದು ಆಕೆ ಬದುಕಿಕೊಂಡಿದ್ದಳು. ಅವಳು ತನ್ನ ಹೊಟ್ಟೆಯಲ್ಲಿರುವ ಮಗುವಿನ ಸಲುವಾಗಿ ಸಾಯದೆ ಉಳಿದಳು. ಅವಳನ್ನು ಕರೆದುಕೊಂಡು ಬಂದು ಆ ಸಂನ್ಯಾಸಿ ವಿಜಯನಗರದಲ್ಲಿ ತನ್ನ ಪರಿಚಯಸ್ಥನೊಬ್ಬನ ಅಶ್ರಯದಲ್ಲಿ ಬಿಟ್ಟುಹೊರಟುಹೋದನು. ಅಲ್ಲೇ ಚಿನ್ನಾದೇವಿಯು ಹುಟ್ಟಿದುದು. ಆಶ್ರಯದಾತನು ತೀರಿಕೊಂಡನಂತರ ಆಕೆ ಕೊಂಡಮರಸಯ್ಯನ ಅಶ್ರಯಕ್ಕೆ ಬಂದಿದ್ದಳು. ಕೇವಲ ಹತ್ತು ವರ್ಷದ ಬಾಲೆಯಾದ ಚಿನ್ನಾದೇವಿಗೆ, ತನ್ನ ತಾಯಿ ಹೇಳಿದ್ದ ಸಂಗತಿಗಳ ಮಹತ್ವವೇನೆಂದು ಆಗ ತಿಳಿಯದಿದ್ದರೂ ಮುಂದೆ ಅವುಗಳ ಬೆಲೆ ಅರಿವಾಯಿತು.

ಸುಭದ್ರಾದೇವಿ ತನ್ನ ಎಲ್ಲ ಕಥೆಯನ್ನು ಕೊಂಡಮರಸಯ್ಯನಿಗೆ ಹೇಳಿ ತನ್ನ ಮಗಳನ್ನು ಕಾಪಾಡುವ ಜವಾಬ್ದಾರಿಯನ್ನು ಅವನಿಗೆ ವಹಿಸಿ ನಿಶ್ಚಿಂತೆಯಿಂದ ಪ್ರಾಣಬಿಟ್ಟಳು.

ಅವಳಿಗೆ ಕೊಟ್ಟ ವಚನದಂತೆ ಕೊಂಡಮರಸಯ್ಯನು ಚಿನ್ನಾದೇವಿಯನ್ನು ಹೊಟ್ಟೆಯಲ್ಲಿ ಹುಟ್ಟಿದ ಮಗಳೆಂಬಂತೆ ನೋಡಿಕೊಂಡನು. ಅವಳಿಗೆ ಸಂಗೀತ, ಸಾಹಿತ್ಯ, ನೃತ್ಯ ಕಲೆಗಳಲ್ಲಿ ಶಿಕ್ಷಣ ಕೊಟ್ಟನು. ಅವಳಿಗೆ ಕ್ಷತ್ರಿಯ ರಮಣಿಯರಿಗಿರಬೇಕಾದ ವೀರೋಚಿತ ವಿದ್ಯೆಗಳನ್ನು–ಕುದುರೆ ಸವಾರಿ, ಧನುರ್ವಿದ್ಯೆಗಳನ್ನು ತಾನೇ ನಿಂತು ಹೇಳಿಕೊಟ್ಟನು. ಇಷ್ಟೇಸಾಲದೆಂದು

ವಿಜಯಭದ್ರ, ಚಿನ್ನಾದೇವಿಯರನ್ನು ಯೋಗ್ಯರಾದ ಗುರುಗಳ ಬಳಿಯಲ್ಲಿ ವಿದ್ಯಾರ್ಜನೆಗೆ ಏರ್ಪಡಿಸಿದನು.

ಚಿನ್ನಾದೇವಿ ಗುರುಕುಲದಲ್ಲಿ ಶಿಕ್ಷಣ ಪಡೆಯುತ್ತಿರುವಾಗಲೇ ಅವಳಿಗೆ ಕೃಷ್ಣದೇವರಾಯನ ಪರಿಚಯವಾದುದು. ಅದೂ ವಿಚಿತ್ರ ರೀತಿಯಲ್ಲಿ.

ಆಗ ರಾಯನು ಇನ್ನೂ ಅಜ್ಞಾತವಾಸದಲ್ಲಿಯೇ ಇದ್ದನು. ಅವನಿಗೆ ಹೀಗೆ ತಲೆಮರೆಸಿಕೊಂಡಿರುವುದು ಬೇಸರವಾಗುತ್ತಿತ್ತು. ಅವನು ಒಮ್ಮೊಮ್ಮೆ. ಬಳಿಯಲ್ಲಿದ್ದ ಕಾನನಕ್ಕೆ ಮೃಗಯಾ ವಿನೋದಕ್ಕಾಗಿ ಹೋಗುತ್ತಿದ್ದನು. ಒಮ್ಮೆ ಬೇಟೆಗಾಗಿ ಹೊರಟ ರಾಯನಿಗೆ ಒಂದು ಹರಿಣಿ ಎದುರಾಯಿತು. ಅದನ್ನು ಬೆನ್ನಟ್ಟಿ ಬಹಳ ದೂರ ಹೊರಟನು. ಆ ಮೃಗವು ಓಡಿ ಓಡಿ ದಣಿದು, ಭಯವಿಹ್ವಲ ಗೊಂಡು ಕಡೆಗೆ ಒಂದೆಡೆ ನಿಂತಿತು. ಅದನ್ನು ಗುರಿ ಇಟ್ಟು ಇನ್ನೇನು ಬಾಣಪ್ರಯೋಗ ಮಾಡಬೇಕೆಂದು ಆಲೋಚಿಸುವಷ್ಟರಲ್ಲಿ ಅವನ ಧನಸ್ಸು ಠಣ್ ಎಂದು ಶಬ್ದ ಮಾಡಿ ಎರಡು ಭಾಗವಾಗಿ ಕತ್ತರಿಸಿ ಬಿತ್ತು. ರಾಯನು ಅಚ್ಚರಿಗೊಂಡು ನೋಡುತ್ತಿರುವಂತೆಯೇ ಎದುರಿಗೆ ನವಯೌವನೆಯಾಗಿ, ವನದೇವಿಯಂತೆ ಕಾಣುವ ಚಿನ್ನಾದೇವಿ ! ಅವಳೂ ಮೃಗಯಾವಿನೋದ ಕ್ಕಾಗಿಯೇ ಅಲ್ಲಿಗೆ ಬಂದಿದ್ದಳು. ವಿಜಯಭದ್ರ ಕಾರಣಾಂತರಗಳಿಂದ ಹಿಂದುಳಿದಿದ್ದ. ಅವಳು ಜಿಂಕೆಯನ್ನಟ್ಟಿಕೊಂಡು ಬಂದಿದ್ದ ರಾಯನನ್ನು ನೋಡಿ ಅತ್ತ ಬಂದಿದ್ದಳು.

ಚಿನ್ನಾದೇವಿ ಧನುಸ್ಸು ಮುರಿದ ಮೇಲೆ ತನ್ನನ್ನೇ ಮಂತ್ರ ಮುಗ್ಧನಂತೆ ನೋಡುತ್ತಿರುವ ರಾಯನನ್ನು ನೋಡಿ ನಕ್ಕು—

'ನೀವು ಕ್ಷತ್ರಿಯ ವೀರರಾಗಿದ್ದರೂ, ಕಾಡಿನ ಯಾವ ಪ್ರಾಣಿಯನ್ನು ಬೇಟೆಯಾಡಬೇಕೆಂದು ತಿಳಿದಂತೆ ತೋರುವುದಿಲ್ಲ. ಒಬ್ಬರಿಗೂ ಕೇಡು ಬಗೆ ಯದ, ತುಂಬು ಗರ್ಭಿಣಿಯಾಗಿ ಓಡಲು ತೊಂದರೆಪಡುತ್ತಿರುವ ಹರಿಣಿಯ ಮೇಲೆ ನಿಮ್ಮ ಶೌರ್ಯ ಪ್ರದರ್ಶನವೇ' ಎಂದು ಹುಸಿಕೋಪವನ್ನು ನಟಿಸುತ್ತಾ ಹೇಳಿದಳು. ಅವಳ ಹೇಳಿಕೆ ಅವಳ ಕೆಲಸವನ್ನು ಸಮರ್ಥಿಸುವಂತಿತ್ತು.

ಅವಳ ಮಾತನ್ನು ಕೇಳಿ ರಾಯನಿಗೆ ಆಶ್ಚರ್ಯವಾಯಿತು. ಅವಳ ಮಾತಿನಲ್ಲಿ ಸತ್ಯವಿದೆ ಎಂದು ತಿಳಿದು ಕ್ಷಮೆ ಯಾಚಿಸುವವನಂತೆ ದೀನನಾಗಿ

ಅವಳನ್ನು ನೋಡಿದನು. ಆಕೆ ಯಾರೋ ದೇವಾಂಗನೆ ಇರಬೇಕೆಂದು ಭ್ರಮಿಸಿದನು. ಆದರೆ ಅವಳು ದೇವಾಂಗನೆಯಲ್ಲ, ತನ್ನಂತೆ ಮಾನವಿ ಎಂದುತಿಳಿದಾಗ ಅವನಿಗೆ ತುಂಬಾ ಆಶ್ಚರ್ಯವಾಯಿತು.

' ನನ್ನ ಒರಟು ಮಾತುಗಳಿಂದ ನಿಮಗೆ ನೋವಾಗಿದ್ದರೆ ದಯವಿಟ್ಟು ಕ್ಷಮಿಸಿ. ಆದರೆ ಆ ಹರಿಣಿಯನ್ನು ಕೊಲ್ಲಲು ಹೊರಟದ್ದ ನಿಮ್ಮೊಡನೆ ನಿರ್ವಾಹವಿಲ್ಲದೆ ಮಾತನಾಡಬೇಕಾಯಿತು. '

—ಇದುವರೆಗೆ ಕ್ಷತ್ರಿಯ ಲಲನೆಯಂತೆ ಮಾತನಾಡಿದ್ದ ಆ ಸುಂದರಿ, ಈಗ ಸಾಮಾನ್ಯ ಮುಗ್ಧ ಬಾಲೆಯಂತೆ ಕ್ಷಮೆ ಯಾಚಿಸುವಂತೆ ಹೇಳಿದಳು.

ರಾಯನಿಗೆ ಅವಳು ಯಾರು ? ಎಲ್ಲಿಂದ ಬಂದಳು ? ಎಂದು ತಿಳಿಯುವ ಕುತೂಹಲವಾಯಿತು. ಅವಳನ್ನೇ ನೆಟ್ಟನೋಟದಲ್ಲಿ ನೋಡುತ್ತಾ ನಿಂತ, ಸಭ್ಯತೆಯನ್ನೂ ಮೀರಿ.

ಅವನ ನೆಟ್ಟ ನೋಟವನ್ನು ಎದುರಿಸಲಾರದೆ ಆ ಬಾಲೆ ನಾಚಿದಳು. ಮುಖ ಕೆಂದಾವರೆಯಂತೆ ಕೆಂಪಾಯಿತು. ಲಜ್ಜೆಯಿಂದ ರಂಗಾದ ಆ ಮುಖ ವನ್ನು ನೋಡಿ ರಾಯನಿಗೆ ಮಾತು ಮೂಕಾಯಿತು. ಸ್ತ್ರೀ ಸೌಂದರ್ಯದ ಅಭಿಮಾನ ದೇವತೆಯೇ ತನ್ನೆದುರು ನಿಂತಿರುವಂತೆ ಅವನಿಗೆ ಅನ್ನಿಸಿತು. ಅವಳ ಸರಳ ಸೌಂದರ್ಯವನ್ನು ನೋಡಿ, ಮೋಹಿತನಾದನು. ಆ ವೇಳೆಗೆ ಅಲ್ಲಿಗೆ ಹುಡುಕುತ್ತಾ ಬಂದ ವಿಜಯಭದ್ರ. ವಿಜಯಭದ್ರ ಅಲ್ಲಿಗೆ ಬರು ತ್ತಲೂ ಚಿನ್ನಾದೇವಿಗೆ ಕೊಂಚ ಧೈರ್ಯ ಬಂದಿತು. ಅವರು ಸಂಕೋಚ ವನ್ನು ತೊರೆದು ಪರಸ್ಪರ ಪರಿಚಯ ಮಾಡಿಕೊಂಡರು. ಕೃಷ್ಣದೇವ ರಾಯನು ತಾನು ಒಬ್ಬ ಜಮೀನುದಾರರ ಪುತ್ರನೆಂದೂ, ಸದ್ಯದ ಪರಿಸ್ಥಿತಿ ಯಲ್ಲಿ ಯಾವ ಕೆಲಸವೂ ಇಲ್ಲದೆ ಇರುವವನೆಂದೂ ತನ್ನ ಚರಿತ್ರೆಯನ್ನು ಹೇಳಿಕೊಂಡ. ಅವನ ಮಾತನ್ನು ಅವರಿಬ್ಬರೂ ನಂಬಿದರೊ ಇಲ್ಲವೊ ತಿಳಿ ಯದು. ಅವರೂ ಯಾವ ಮುಚ್ಚು ಮರೆಯಿಲ್ಲದೆ ತಮ್ಮ ಸಂಗತಿಯನ್ನೆಲ್ಲ ತಿಳಿಸಿದರು.

ಕೃಷ್ಣದೇವರಾಯನು ಅಜ್ಞಾತವಾಸದಲ್ಲಿದ್ದ ಸ್ಥಳಕ್ಕೆ ಆ ಗುರುಕುಲವು ಹತ್ತಿರದಲ್ಲೇ ಇರುವ ಸಂಗತಿಯನ್ನರಿತು ರಾಯನು ಮನದಲ್ಲೇ ಹರ್ಷಿಸಿ ದನು. ಅಂದು ಅವರನ್ನು ಅಲಗಲು ರಾಯನಿಗೆ ಮನಸ್ಸಿಗೆ ಬರಲಿಲ್ಲ.

ತನ್ನ ಹೃದಯವನ್ನು ಆ ಸುರಸುಂದರಿಯು ಕದ್ದು ಒಯ್ಯುತ್ತಿರುವಂತೆ ರಾಯನಿಗೆ ಭಾಸವಾಯಿತು.

ಹೀಗೆ ಆರಂಭವಾದ ಅವರ ಪರಿಚಯ ಕಾಲಕ್ರಮದಲ್ಲಿ ಅನುರಾಗವಾಗಿ ಮಾರ್ಪಟ್ಟಿತು. ರಾಯನು ತನ್ನ ನಿಜಸ್ಥಿತಿಯನ್ನು ಚಿನ್ನಾದೇವಿಯ ಮುಂದೆ ಮರೆಮಾಚಲಾರದಾದನು. ರಾಯನು ಬೇರಾರೂ ಆಗಿರದೆ ಭಾವೀಸಾಮ್ರಾಟನೆಂದು ತಿಳಿದಾಗ ಅವಳಿಗೆ ವಿಸ್ಮಯ, ಆಶ್ಚರ್ಯಗಳು ಏಕಕಾಲದಲ್ಲುಂಟಾದುವು ಅವಳಿಗೆ ಇಂತಹ ಸಾಮ್ರಾಟನಿಗೆ ತಾನು ತಕ್ಕ ವಧುವೇ ? ಸಾಮ್ರಾಟನನ್ನು ಪ್ರೀತಿಸಿ ತಾನು ಕೃತಕೃತ್ಯಳಾಗುವೆನೇ ಎಂಬ ಅಂಜಿಕೆ ಅವಳಿಗೆ ಬಾರದಿರಲಿಲ್ಲ. ತನ್ನ ಮನದಳಲನ್ನು ಒಮ್ಮೆ ಅವಳು ಹೊರಗೆ ಹಾಕಿದಾಗ ರಾಯನು ಅವಳನ್ನು ತಾನು ತ್ರಿಕರಣ ಪೂರ್ವಕವಾಗಿ ಪ್ರೀತಿಸುತ್ತಿರುವುದಾಗಿಯೂ, ತಾನು ಸಿಂಹಾಸನವನ್ನು ಏರಿದೊಡನೆಯೇ ಅವಳನ್ನು ವಿಧಿಪೂರ್ವಕವಾಗಿ, ಶಾಸ್ತ್ರೋಕ್ತವಾಗಿ ಪಾಣಿಗ್ರಹಣ ಮಾಡಿಕೊಳ್ಳುವುದಾಗಿಯೂ ಆಶ್ವಾಸನವಿತ್ತನು.

ಅಂದೇ ಅವರು ಗಾಂಧರ್ವರೀತಿಯಲ್ಲಿ, ಸೂರ್ಯ ಚಂದ್ರರ ಸಾಕ್ಷಿಯಾಗಿ ಮದುವೆಯಾದರು.

ಇದಾದ ಕೆಲವು ತಿಂಗಳಲ್ಲೇ ಕೃಷ್ಣದೇವರಾಯನ ಅಜ್ಞಾತವಾಸಕ್ಕೆ ಕೊನೆ ಬಂತು. ಅವನು ವಿಜಯ ನಗರದ ಸಾಮ್ರಾಟನಾದನು.

ಕೃಷ್ಣದೇವರಾಯನು ಸಿಂಹಾಸನವನ್ನೇರಿದೊಡನೆಯೇ ಅವನ ವಿವಾಹದ ಸಮಸ್ಯೆ ಉದ್ಭವಿಸಿತು. ಇದನ್ನು ಯಾರ ಮನಸ್ಸಿಗೂ ಬೇಸರವಾಗದಂತೆ ಹೇಗೆ ಬಿಡಿಸಬೇಕೆಂದು ತಿಮ್ಮರಸನು ಯೋಚಿಸುತ್ತಿರುವಾಗ ಅವನಿಗೆ ಒಂದು ಆಲೋಚನೆ ಹೊಳೆಯಿತು.

ಕೃಷ್ಣದೇವರಾಯನು ಬೇರೆ ರಾಜಪುತ್ರಿಯನ್ನು ಮದುವೆಯಾಗಿ ಪಟ್ಟದ ಮಹಿಷಿಯಾಗಿ ಮಾಡಿಕೊಂಡ ನಂತರ ಚಿನ್ನಾದೇವಿಯನ್ನು ವಿಧಿಪೂರ್ವಕವಾಗಿ ಕೈ ಹಿಡಿದು, ರಾಣಿಯನ್ನಾಗಿ ಮಾಡಿಕೊಳ್ಳಲು ತನ್ನ ಅಭ್ಯಂತರವಿಲ್ಲವೆಂದು ತಿಮ್ಮರಸನು ತಿಳಿಸಿದನು.

ಈ ಸಲಹೆ ಅಪ್ರಿಯವಾದರೂ, ನಿರ್ವಾಹವಿಲ್ಲದೆ ಆದಕ್ಕೆ ರಾಯನು ಒಪ್ಪಿದನು.

ತಿಮ್ಮರಸನೇ ನಿಂತು ಅನೇಕ ದೇಶದ ರಾಜಪುತ್ರಿಯರ ಭಾವಚಿತ್ರ

ಗಳನ್ನು ತರಿಸಿಕೊಂಡು, ಪರಿಶೀಲಿಸಿ ಕೊನೆಗೆ ಶ್ರೀರಂಗಪಟ್ಟಣದ ಕುಮಾರ ವೀರಯ್ಯನ ಮಗಳು ತಿರುಮಲಾದೇವಿಯೇ ರಾಯನಿಗೆ ಅನುರೂಪಳಾದ ವಧುವೆಂದು ನಿರ್ಧರಿಸಿ, ಅವಳೊಂದಿಗೆ ರಾಯನ ವಿವಾಹವನ್ನು ವಿಜೃಂಭಣೆ ಯಿಂದ ನೆರವೇರಿಸಿದನು.

ಈ ವಿವಾಹದ ನಂತರ ರಾಯನು ಶಾಸ್ತ್ರೋಕ್ತವಾಗಿ ಚಿನ್ನಾದೇವಿ ಯನ್ನು ಮದುವೆಯಾಗಿ, ಅವಳಿಗೂ ನಾಗಲಾಪುರದಲ್ಲಿ ಒಂದು ಅರಮನೆ ಯನ್ನೂ ಕಟ್ಟಿಸಿದನು.

ಉತ್ಕಲದ ವಿಜಯವಾದ ಮೇಲೆ ಗಜಪತಿ ನಂದಿನಿ ಜಗನ್ಮೋಹಿನಿ ಯನ್ನು ವಿವಾಹವಾದನು. ಇಷ್ಟಾದರೂ ಅವನ ಮೋಹದ ರಾಣಿ ಚಿನ್ನಾ ದೇವಿಯೇ ಆಗಿದ್ದಳು.

ರಾಯನು ತಿರುಮಲಾದೇವಿಯನ್ನು ಮದುವೆಯಾದ ಅಲ್ಪ ಕಾಲ ದಲ್ಲೇ ಅವಳಲ್ಲಿ ತಿರುಮಲಾಂಬೆ ಎನ್ನುವ ಪುತ್ರಿ ಜನಿಸಿದ್ದಳು. ಅವಳು ಬೆಳೆದು ಪ್ರಾಪ್ತ ವಯಸ್ಸಿಗೆ ಬಂದಕೂಡಲೇ ರಾಯನು ಆರವೀಡು ವಂಶದ ರಾಮಭೂಪಾಲರಿಗೆ ಅವಳನ್ನು ವಿವಾಹ ಮಾಡಿಕೊಟ್ಟಿದ್ದನು.

ತಿರುಮಲಾದೇವಿಗೆ ತಿರುಮಲಾಂಬೆಯ ಅನಂತರ ಒಂದೆರಡು ಮಕ್ಕ ಳಾಗಿದ್ದರೂ ಅವು ಹುಟ್ಟುತ್ತಲೇ ತೀರಿಕೊಂಡಿದ್ದವು. ತಿರುಮಲಾಂಬೆ ಹುಟ್ಟಿದ ಎಷ್ಟೋ ವರ್ಷಗಳ ಮೇಲೆ ಈಗ ಮಹಾರಾಣಿಗೆ ಪುತ್ರೋತ್ಸವ ವಾಗಿತ್ತು. ಇದು ರಾಯನಿಗೆ ಸಂತಸದ ವಾರ್ತೆಯಾಗಿತ್ತು. ಈ ಮೊದಲೇ ರಾಯನಿಗೆ ಚಿನ್ನಾದೇವಿಯಲ್ಲಿ ಪುತ್ರೋತ್ಸವವಾಗಿದ್ದರೂ, ಪಟ್ಟ ಮಹಿಷಿಯಲ್ಲಿ ಇದೇ ಪ್ರಥಮ ಪುತ್ರ ಸಂತಾನವಾಗಿದ್ದುದರಿಂದ ಅದನ್ನು ವೈಭವವಾಗಿ ನಡೆ ಸಲು ರಾಯನೇ ರಾಜಧಾನಿಗೆ ಹೊರಟು ಬಂದನು. ಅತ್ತ ರಾಯಚೂರಿನ ದಿಗ್ವಿಜಯದ ಸಂತೋಷ ವಾರ್ತೆ! ಇತ್ತ ಪುತ್ರೋತ್ಸವದ ವಾರ್ತೆಯಿಂದ ರಾಯನ ಹೃದಯ ಹಿಗ್ಗಿತ್ತು.

೯

ಕೃಷ್ಣದೇವರಾಯನು ರಾಜಧಾನಿಯಲ್ಲಿ ಪುತ್ರೋತ್ಸವದ ನಿಮಿತ್ತ ವಾಗಿ ನಡೆದ ಉತ್ಸವಗಳಲ್ಲಿ ಭಾಗವಹಿಸಿ ಕೆಲವು ಕಾಲ ರಾಜಕೀಯ ಜಂಜ

ಡವಿಲ್ಲದೆ ಇರುವಾಗಲೇ ರಾಯನ ಮನಸ್ಸನ್ನು ಕದಡುವಂತಹ ಪ್ರಸಂಗ ಬಂದು ಒದಗಿತ್ತು. ರಾಯಚೂರಿದ ದಿಗ್ವಿಜಯದಿಂದ ರಾಯನ ಖ್ಯಾತಿ ಭಾರತಾದ್ಯಂತ ವ್ಯಾಪಿಸಿತ್ತು. ಅವನ ಕೀರ್ತಿಯನ್ನು ಕಂಡು ಕರುಬುವ ವ್ಯಕ್ತಿಗಳು ಹೆಚ್ಚಾಗಿದ್ದರು. ಇದುವರೆಗೆ ರಾಯನ ವಿಷಯದಲ್ಲಿ ಅಂತಹ ಸ್ನೇಹವಿಲ್ಲದೆ ಇದ್ದರೂ ಬಿಜಾಪುರದ ಸುಲ್ತಾನನ ಏಳಿಗೆಯನ್ನು ನೋಡಿ ಸಹಿಸದ ಇತರ ಬಹಮನೀ ಸುಲ್ತಾನರು, ರಾಯಚೂರಿನ ಯುದ್ಧದಲ್ಲಿ ಬಿಜಾಪುರದ ಸುಲ್ತಾನನಿಗಾದ ಪರಾಜಯವನ್ನು ಕಂಡು ಹರ್ಷಿಸಿದ್ದರು.

ಬಹಮನೀ ಸುಲ್ತಾನರ ಪರಸ್ಪರ ಹಗೆತನ, ದ್ವೇಷಾಸೂಯೆಗಳಿಂದ ರಾಯನಿಗೆ ಅನುಕೂಲ ಪರಿಸ್ಥಿತಿಯುಂಟಾಗಿತ್ತು. ರಾಯನು ತನಗೆ ಪ್ರಬಲವಿರೋಧಿಯಾಗಿದ್ದ ಬಿಜಾಪುರದ ಸುಲ್ತಾನನ್ನು ಸದೆಬಡಿದು ದಕ್ಷಿಣ ಪಥದಲ್ಲೆಲ್ಲಾ ಏಕೈಕ ಸಾಮ್ರಾಟನಾಗಿ ಮೆರೆದಿದ್ದನು. ಅವನ ಏಳಿಗೆಯನ್ನು ಕಂಡು ಸ್ವತಂತ್ರ ರಾಜ್ಯಗಳಾದ ಬಿದರೆ ಮತ್ತು ಬೀರಾರ್ ಸುಲ್ತಾನರಿಗೆ ಸಹನವಾಗಲಿಲ್ಲ. ಅವರು, ರಾಯನನ್ನು ಹೀಗೆಯೇ ಬೆಳೆಯಗೊಟ್ಟರೆ ಮುಂದೆ ತಮ್ಮ ಸ್ವಾತಂತ್ರ್ಯಕ್ಕೂ ಭಂಗಬರುವುದೆಂದು ಹೆದರಿ ರಾಯನ ಬಲ ವನ್ನು ಮುರಿಯಲು ಸರ್ವಸನ್ನಾಹ ಮಾಡಿದರು. ಅವರುಗಳೆಲ್ಲಾ ಪರ ಸ್ಪರ ಅನುಸಂಧಾನ ಮಾಡಿಕೊಂಡು ರಾಯನಿಗೆ ಓಲೆಗಳನ್ನು ಬರೆದು, ರಾಯಭಾರಿಗಳನ್ನು ಅಟ್ಟಿದರು.

ಈ ಎಲ್ಲ ಓಲೆಗಳ ಸಾರಾಂಶ ಏಕ ರೀತಿಯಾಗಿತ್ತು. ಕೃಷ್ಣದೇವ ರಾಯನು ಆದಿಲ್‌ಷಹನ ಮೇಲೆ ಗಳಿಸಿದ ಅಖಂಡ ದಿಗ್ವಿಜಯಕ್ಕಾಗಿ ಅವ ನನ್ನು ಅಭಿವಂದಿಸಿದ್ದರು. ರಾಯನು ಬಿಜಾಪುರದ ಸುಲ್ತಾನನ ಸೊಕ್ಕನ್ನು ಅಡಗಿಸಿ ಅವನ ಮೇಲೆ ಸೇಡು ತೀರಿಸಿಕೊಂಡುದಕ್ಕಾಗಿ ಅಭಿನಂದಿಸಿದ್ದರು. ಆದರೆ ರಾಯನ ಕೃತ್ಯದಲ್ಲಿ ಅವರಿಗೆ ಮನಸ್ಸಮಾಧಾನವಾಗದ ಅಂಶವೇದರೆ ರಾಯನು ಸುಲ್ತಾನನಿಗೆ ಸೇರಿದ್ದ ಪ್ರದೇಶಗಳನ್ನು ವಶಪಡಿಸಿಕೊಂಡುದು. ಅವರು ಆದಿಲ್‌ಷಹನಿಂದ ರಾಯನು ಪಡೆದ ಪ್ರದೇಶಗಳನ್ನು ಹಿಂದಿರುಗಿಸ ಬೇಕೆಂದೂ ಅವನೊಡನೆ ಗೌರವಪೂರ್ವಕವಾದ ಸಂಧಿಮಾಡಿಕೊಂಡು ಸ್ನೇಹದಿಂದ ವರ್ತಿಸಬೇಕೆಂದೂ ವಿನಂತಿಮಾಡಿದ್ದರು. ಈ ವಿನಂತಿಯನ್ನು ರಾಯನು ತಿರಸ್ಕರಿಸಿದರೆ, ತಾವೆಲ್ಲ ಒಂದಾಗಿ ರಾಯನ ಮೇಲೆ ಬಿದ್ದು,

ಬಲಾತ್ಕಾರದಿಂದಲಾದರೂ, ತಮ್ಮ ಕೋರಿಕೆಯನ್ನು ಈಡೇರಿಸಿಕೊಳ್ಳುವು ದಾಗಿ ತಿಳಿಸಿದ್ದರು. ಅದು ಒಂದು ರೀತಿಯಾಗಿ ರಾಯನಿಗೆ ಹಾಕಿದ್ದ ಬೆದ ರಿಕೆಯೇ ಆಗಿತ್ತು.

ಈ ಪತ್ರಗಳ ಬೆದರಿಕೆಗೆ ರಾಯನು ಅಳುಕಲಿಲ್ಲ. ಅವನು ಬಹ ಮನೀ ಸುಲ್ತಾನರಿಗೆ ವೀರೋಚಿತವಾದ ಉತ್ತರವನ್ನೇ ಕಳುಹಿಸಿ ಕೊಟ್ಟನು. ಅವರ ಸಲಹೆಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿದುದಲ್ಲದೆ, ಅವರು ತನ್ನ ಮೇಲೆ ದಂಡೆತ್ತಿ ಬರಬೇಕಾದ ಪ್ರಮೇಯವೇ ಇಲ್ಲವೆಂದೂ, ತಾನೇ ಅವರಿದ್ದಲ್ಲಿಗೆ ಹೋಗಿ ಯುದ್ಧ ಕೊಡುವುದಾಗಿ ಮಾರೋಲೆ ಕಳುಹಿ ದನು.

ಈ ಉತ್ತರದಿಂದ ಬಹಮನೀ ಸುಲ್ತಾನರಿಗೆ ರಾಯನ ಹಲ್ಲು ಹಿರಿದು ನೋಡುವ ಪ್ರಸಂಗ ಬಂದಿತ್ತು. ರಾಯನು ತಮ್ಮ ಬೆದರಿಕೆಗಳಿಗೆ ಬಗ್ಗುವ ವ್ಯಕ್ತಿಯಲ್ಲವೆಂದು ಅವರಿಗೆ ತಿಳಿದಿತ್ತು. ತಾವು ದುಡುಕಿ ರಾಯನ ಮೇಲೆ ಕೈಮಾಡಿದರೆ ತಮಗೂ ಬಿಜಾಪುರದ ಸುಲ್ತಾನನಿಗಾದ ದುರ್ಗತಿಯೇ ಎಂದು ಖಂಡಿತವಾಗಿ ತಿಳಿದಿತ್ತು. ರಾಯನೆಂದರೆ ಅವರಿಗೆ ಸಿಂಹಸ್ವಪ್ನ ವಾಗಿತ್ತು. ಅಂತಲೇ ಅವರು ಸಕಾಲದಲ್ಲಿ ಎಚ್ಚೆತ್ತುಕೊಂಡರು. ಅದ ರಲ್ಲೂ ರಾಯಚೂರು ಯುದ್ಧದಲ್ಲಿ ತನ್ನ ಅಪಾರ ಸೈನ್ಯ ಕಳೆದುಕೊಂಡು ಪರದೇಶಿಯಂತೆ, ಯುದ್ಧರಂಗದಿಂದ ಓಡಿಹೋಗಿದ್ದ ಅದಿಲ್‌ಷಹನಿಗೆ ರಾಯನ ಸುದ್ದಿ ಎತ್ತಲೂ ಅಂಜಿಕೆಯಾಗಿತ್ತು. ಅವನು ಅವರಿವರ ಮೂಲಕ ಸಂಧಾನಕ್ಕೆ ಪ್ರಯತ್ನಿಸಿ ವಿಫಲನಾಗಿ ಕೊನೆಗೆ, ತನ್ನ ಮಿತ್ರ ಅಸದ್‌ಖಾನನನ್ನು ರಾಯನ ಆಸ್ಥಾನಕ್ಕೆ ರಾಯಭಾರಿಯನ್ನಾಗಿ ಕಳುಹಿ ದನು.

ಬಿಜಾಪುರದ ಸುಲ್ತಾನನ ರಾಯಭಾರದ ರಾಯಸದೊಂದಿಗೆ ಅಸದ್ ಖಾನನು ವಿಜಯನಗರಕ್ಕೆ ಬಂದಿಳಿದನು. ತಿಮ್ಮರಸನು ಅವನನ್ನು ಉಚಿತ ರೀತಿಯಲ್ಲಿ ಬರಮಾಡಿಕೊಂಡು, ಅವನನ್ನು ರಾಜೋಚಿತವಾದ ಬಿಡಾರ ದಲ್ಲಿಳಿಸಿ ರಾಯನಿಗೆ ಸುದ್ದಿಯನ್ನು ವರದಿ ಮಾಡಿದನು. ರಾಯನು ಈ ಸುದ್ದಿಯನ್ನು ಕೇಳಿ ಯಾವ ಬಗೆಯ ಆಸಕ್ತಿಯನ್ನೂ ತೋರ್ಪಡಿಸಿಕೊಳ್ಳ ಲಿಲ್ಲ. ಇದರಿಂದ ತಿಮ್ಮರಸನಿಗೆ ಬಹಳ ವಿಷಾದವುಂಟಾಯಿತು.

ಸುಮಾರು ಒಂದು ತಿಂಗಳು ಕಾದಿದ್ದರೂ ಬಿಜಾಪುರದ ಸುಲ್ತಾನನಿಂದ ಬಂದಿದ್ದ ರಾಯಭಾರಿಯನ್ನು ರಾಯನು ವಿಚಾರಿಸಲು ಹೋಗಲಿಲ್ಲ. ಬೇಕೆಂದೇ ರಾಯಭಾರಿಯನ್ನು ನಿರ್ಲಕ್ಷ್ಯದಿಂದ ಕಾಣಲು ತೊಡಗಿದನು. ರಾಯಚೂರು ಯುದ್ಧದಲ್ಲಿ ಸೋತು ಓಡಿಹೋಗಿದ್ದ ಸುಲ್ತಾನನ ವಿಷಯದಲ್ಲಿ ರಾಯನಿಗೆ ಒಂದು ಬಗೆಯ ತಿರಸ್ಕಾರವಿತ್ತು. ಅವನು ಉದ್ದೇಶಪೂರ್ವಕವಾಗಿ ರಾಯಭಾರಿಯ ಬಗ್ಗೆ ತಿರಸ್ಕಾರವನ್ನು ತೋರಿಸಿದ್ದನು.

ತಿಮ್ಮರಸನಿಗೆ ರಾಯನ ಈ ವರ್ತನೆಯಿಂದ ಬೇಸರವಾಯಿತು. ರಾಯಭಾರಿಯ ಬಗ್ಗೆ ವಿಚಾರಿಸುವಂತೆ ಅನೇಕ ಬಾರಿ ಸೂಚಿಸಿ ವಿಫಲನಾದನು. ರಾಯನು ರಾಯಭಾರಿಯ ಬಗ್ಗೆ ತೋರಿಸುತ್ತಿರುವ ಔದಾಸೀನ್ಯವನ್ನು ಕಂಡು ಅವನಿಗೆ ಖೇದವೇ ಆಯಿತು. ಶತ್ರುವಿನ ಮೇಲೆ ಎಷ್ಟೇ ಕೋಪವಿದ್ದರೂ, ಅದನ್ನು ರಾಯಭಾರಿಯ ಮೇಲೆ ಪ್ರದರ್ಶಿಸುವುದು ಶ್ರೇಷ್ಠ ರಾಜಧರ್ಮವಲ್ಲ. ಈ ವಿಷಯದಲ್ಲಿ ರಾಯನು ತನ್ನ ಘನತೆಗೆ ಉಚಿತವಲ್ಲದ ರೀತಿಯಲ್ಲಿ ವರ್ತಿಸುತ್ತಿರುವನೆಂದೇ ತಿಮ್ಮರಸನ ಭಾವನೆ.

ಇಂತಿರುವಲ್ಲಿ ಒಂದು ದಿನ ಅಸದ್‌ಖಾನನೇ ತಿಮ್ಮರಸನ ಭೇಟಿಗೆಂದು ಅವನ ನಿವಾಸಕ್ಕೆ ಬಂದನು. ತಿಮ್ಮರಸನ ಮೂಲಕವಾದರೂ ಪ್ರಭುಗಳು ತನ್ನ ರಾಯಭಾರಕ್ಕೆ ಗಮನ ಕೊಡುವಂತೆ ಮಾಡಲು ಬಂದಿದ್ದನು. ಒಂದು ತಿಂಗಳು ಕಾಲ ಅವನು ರಾಯನ ಕರೆಗಾಗಿ ಕಾದು ಬೇಸತ್ತಿದ್ದನು. ತನ್ನ ರಾಯಭಾರವೇನೆಂದು ವಿಚಾರಿಸಲು ಅವಕಾಶಕೊಡದ ರಾಯನು ಅದಕ್ಕೆ ಮನ್ನಣೆಕೊಡುವನೇ ಎಂದು ಆಲೋಚನೆಯಲ್ಲಿ ತೊಡಗಿದ್ದನು. ಅತ್ತ ಸುಲ್ತಾನನು ಕಾರ್ಯಭಾರವೇನಾಯಿತೋ ಎಂದು ತಿಳಿಯಲು ಕಾತರನಾಗಿದ್ದನು. ಇತ್ತ ರಾಯನು ಭೇಟಿಗೆ ಅವಕಾಶವನ್ನು ಕಲ್ಪಿಸಿ ಕೊಟ್ಟಿರಲಿಲ್ಲ. ಹೀಗೆಯೇ ಕಾಲವು ವ್ಯರ್ಥವಾದರೆ ತಾನು ಸುಲ್ತಾನನ ಕೋಪಕ್ಕೆ ಪಾತ್ರನಾಗುವೆನೆಂದು ಯೋಚಿಸಿ, ತಿಮ್ಮರಸನ ಮೂಲಕ ಪ್ರಭುಗಳ ಭೇಟಿಯನ್ನು ದೊರಕಿಸಿಕೊಳ್ಳಲು ಬಂದಿದ್ದನು.

ತಿಮ್ಮರಸನು ರಾಯಭಾರಿ ಅಸದ್‌ಖಾನನನ್ನು ಆದರದಿಂದ ಬರಮಾಡಿಕೊಂಡು, ಅವನ ಕ್ಷೇಮಸಮಾಚಾರಗಳನ್ನು ವಿಚಾರಿಸಿಕೊಂಡನು.

' ನಮಗೆ ಇಲ್ಲಿ ಯಾವುದಕ್ಕೂ ಕೊರತೆಯಿಲ್ಲ....ಆದರೆ ನಾವು ಬಂದ

ಕೆಲಸ ಮಾತ್ರ ಹಾಗೇ ಉಳಿದಿದೆ....ಇದೇ ನಮ್ಮ ಚಿಂತೆಯಾಗಿದೆ. ಎಂದು ಸಂಕೋಚಪಡುತ್ತಾ ಖಾನನು ಹೇಳಿದನು.

ಅದೇನು ಚಿಂತೆ ಎಂದು ತಿಮ್ಮರಸನು ವಿಚಾರಿಸಲಿಲ್ಲ. ಅದು ನಿಗೆ ತಿಳಿದಿದ್ದಿತೆಂದು ಅವನ ನೊಂದ ಮುಖವೇ ಹೇಳಿತು.

'ನಾವು ಇಲ್ಲಿಗೆ ಬಂದುದು ನಿಮ್ಮ ವಿಶ್ವಾಸದ ಹೊರೆ ಹೊತ್ತುಕೊ ಬೇಕೆಂದಲ್ಲ....ನಿಮಗೆ ತಿಳಿದಿರುವಂತೆಯೇ ನಾವು ಗುರುತರವಾದ ರ ಕಾರ್ಯಕ್ಕಾಗಿ ಬಂದಿದ್ದೇವೆ. ನಾವು ಬಂದು ತಿಂಗಳಾದರೂ ಖಾವಂದ ನಮ್ಮ ಮೇಲೆ ದಯೆ ಬರಲಿಲ್ಲ. ಬಹುಶಃ ಅವರು ನಮ್ಮನ್ನು ಮ ಬಿಟ್ಟಿರುವಂತೆ ತೋರುತ್ತಿದೆ. ಈ ಬಗ್ಗೆ ಎಚ್ಚರಿಸಲು ನಾವು ಬರಬೇ ಯಿತು. ನಮ್ಮ ಸ್ಥಿತಿ—ಸೇವಕರ ಸ್ಥಿತಿ ಎಷ್ಟು ಸೂಕ್ಷ್ಮವೆಂದು ತಾ ಬಲ್ಲಿರಿ. ಬಿಜಾಪುರದ ಸುಲ್ತಾನರಿಂದ ದಿನವೂ ರಾಯಭಾರಪೇ ನಾ ತೆಂದು ಆದೇಶಗಳು ಬರುತ್ತಿವೆ. ನಾವು ಅವರಿಗೆ ಏನೊಂದು ಹೇಳ ರದ ಸ್ಥಿತಿಯಲ್ಲಿದ್ದೇವೆ. ಇದರಿಂದ ಸುಲ್ತಾನರಿಗೆ, ನಮ್ಮ ಕಾರ್ಯದಲ್ಲಿ ಹೇ ದಕ್ಷತೆ ವಹಿಸುತ್ತಿಲ್ಲವೆಂದು, ಅಸಮಾಧಾನವಾಗುವ ಪರಿಸ್ಥಿತಿ ಒದಗಿದೆ ತಾವು ನಮಗೆ ಖಾವಂದರ ಭೇಟಿ ಮಾಡಿಸಿದರೆ ತಮಗೆ ನಾವು ಬ ಕೃತಜ್ಞನಾಗಿರುತ್ತೇವೆ.' ಎಂದು ವಿನಯದಿಂದ ಹೇಳಿದ ಅಸದ್‌ಖಾನ್.

ರಾಯನು ಯಾವ ರಾಯಭಾರಿಯನ್ನೂ ಆ ರೀತಿ ನಡೆಸಿಕೊಂ ಲಿಲ್ಲ. ರಾಯನೇಕೆ ಸುಲ್ತಾನನ ರಾಯಭಾರಿಯನ್ನು ಈ ರೀತಿ ನ ಕೊಳ್ಳುತ್ತಿದ್ದಾನೆಂಬುದು ತಿಮ್ಮನಿಗೆ ಬಗೆಹರಿಯದ ಸಮಸ್ಯೆಯಾಯಿ ರಾಯನ ಈ ವರ್ತನೆಯಿಂದ ತಿಮ್ಮರಸನು ತಲೆತಗ್ಗಿಸುವಂತೆ ಆಯಿತು.

'ರಾಯಭಾರಿಗಳೇ, ತಾವು ಬೇಸರಪಡಬಾರದು. ಪ್ರಭುಗ ಪುತ್ರೋತ್ಸವದ ಗಡಿಬಿಡಿಯಲ್ಲಿ-ತಮ್ಮ ರಾಯಭಾರದಂತಹ ಮಹತ್ವದ ರ ಕಾರಣವನ್ನು ಅಷ್ಟಾಗಿ ಮನಸ್ಸಿಗೆ ತಂದುಕೊಂಡಿಲ್ಲ. ಆಗಲಿ, ಆದ ಬೇಗ ತಮ್ಮನ್ನು ವಿಚಾರಿಸಲು ಪ್ರಭುಗಳಲ್ಲಿ ಅರಿಕೆಮಾಡಿಕೊಳ್ಳುತ್ತೇ ಎಂದು ಸಮಾಧಾನಪಡಿಸಿ ರಾಯಭಾರಿಯನ್ನು ಕಳುಹಿಸಿಕೊಟ್ಟನು.

ರಾಯಭಾರಿ ಹೊರಟುಹೋದ ಮೇಲೆ ತಿಮ್ಮರಸನಿಗೆ ಮನೆಯಲ್ಲಿರ ಮನಸ್ಸಾಗದೆ ರಾಯನನ್ನು ಕಂಡು ಎಲ್ಲ ಸಂಗತಿಯನ್ನು ತಿಳಿಸಲು ಭು

ವಿಜಯದೆಡೆಗೆ ತಾನೇ ಹೊರಟನು.

ಭುವನವಿಜಯವು ಎತ್ತರ ಪ್ರದೇಶದಲ್ಲಿದ್ದು ಅನೇಕ ಉಪ್ಪರಿಗೆಗಳಿಂದಲೂ, ಹೊನ್ನಿನ ಕಳಶಗಳಿಂದಲೂ ಶೋಭಿಸುತ್ತಿತ್ತು. ಅದರ ಸುತ್ತಲೂ ಬಲವಾದ ಕೋಟೆಯಿತ್ತು. ಈ ಕೋಟೆಯ ಒಳಗಡೆ ಅರಮನೆಯ ಕಟ್ಟಡಗಳು ಹರಡಿದ್ದವು.

ಕೋಟೆಯ ನಾಲ್ಕು ದಿಕ್ಕಿಗೂ ನಾಲ್ಕು ಮಹಾದ್ವಾರಗಳು. ಒಂದೊಂದು ದ್ವಾರದ ಮೇಲೂ ಕಂಗೊಳಿಸುತ್ತಿದ್ದ ಹೊನ್ನಿನ ಕಳಶಗೋಪುರ. ಈ ದ್ವಾರದ ಬಳಿ ಸರ್ಪ ಕಾವಲು ಕಾಯುವ ಪಹರೆಯವರು. ಅರಮನೆಗೆ ಬರುವವರು ಮಹಾದ್ವಾರವನ್ನು ಹಾದೇ ಬರಬೇಕು.

ಈ ಮಹಾದ್ವಾರದ ಬಳಿಯಲ್ಲೇ ಮದ್ದುಗುಂಡುಗಳ ಉಗ್ರಾಣಗಳೂ, ಕಾರಕೂನರ, ಕೊತ್ತವಾಲರ, ನಗಾರಿ ನೌಪತ್ತುಗಳ ಕಛೇರಿಗಳೂ ಇದ್ದವು. ಅವುಗಳ ಬಳಿಯಲ್ಲೇ ರಾಜಬಂದಿಗಳನ್ನಿಡುವ ತಾತ್ಕಾಲಿಕ ಸೆರೆಮನೆಯೂ ಇತ್ತು.

ಮಹಾದ್ವಾರದ ಮತ್ತೊಂದು ಪಾರ್ಶ್ವಕ್ಕೆ ರಾಜರ ಅತಿಥಿಗಳಿಗೆಂದೇ ನಿರ್ಮಿತವಾದ ಭವ್ಯವಾದ ಬಿಡದಿ ಮನೆಗಳು. ಅಲ್ಲದೆ ಮಹಾಪ್ರಭುಗಳು ನಡೆಸುವ ದಾನಧರ್ಮಗಳ ಸಲುವಾಗಿ ಇರುವ ಧರ್ಮಶಾಲೆಗಳು.

ಮಹಾದ್ವಾರದಿಂದ ಅರಮನೆಯ ಮುಖಮಂಟಪದವರೆಗೂ ನೆಲಕ್ಕೆ ಅಮೃತಶಿಲೆ, ಚಂದ್ರಕಾಂತ ಶಿಲೆಗಳನ್ನು ಹಾಸಿದ್ದ ಪ್ರಶಸ್ತ ರಾಜಮಾರ್ಗ. ವಿಶಾಲ ಆವರಣಗಳ ಮಧ್ಯೆ ಅನೇಕ ಅಪೂರ್ವವಾದ ಹೂಗಿಡಗಳೂ ಮಲ್ಲಿಕಾಮಂಟಪಗಳೂ, ನೀರು ಚಿಮ್ಮುವ ಕಾರಂಜಿಗಳೂ ಶೋಭಿಸುತ್ತಿದ್ದವು.

ಮುಖಮಂಟಪವನ್ನು ಪ್ರವೇಶಿಸುತ್ತಲೂ, ಎಚ್ಚರವನ್ನು ತಪ್ಪಿಸುವಂತಹ ಕಲಾಕೌಶಲ್ಯದಿಂದ ಮೆರೆಯುವ ಮಹಾದ್ವಾರ. ಎಲ್ಲೆಲ್ಲೂ ಗೋಡೆಗಳಿಗೆ ನವುರಾದ ಬಟ್ಟೆಗಳು, ನೆಲಕ್ಕೆ ಪರ್ಶಿಯಾ ದೇಶದ ಉತ್ಕೃಷ್ಟ ರತ್ನಗಂಬಳಿಗಳು. ದಂತದ ಕಂಬಗಳ ಮೇಲೆ, ಅನೇಕ ಕಲಾಮಯವಾದ ಚಿತ್ರಗಳು. ಭಿತ್ತಿಯಲ್ಲಿ ತೂಗಿ ಬಿಟ್ಟಿದ್ದ ಗಾಜಿನ ಬಣ್ಣ ಬಣ್ಣದ ದೀಪಗಳೂ, ಕಂದೀಲು ಗುಚ್ಛಗಳೂ ಗೋಡೆಯ ಮೇಲ್ಗಡೆ ವಾತಾಯನಗಳೂ ಇದ್ದುವು.

ಅರಮನೆಯ ದ್ವಾರವನ್ನು ದಾಟಿ ಒಳ ಹೊಕ್ಕರೆ ಒಂದು ಬದಿಗೆ ರಾಜ

ಸಭಾಮಂದಿರ ಮತ್ತೊಂದು ಬದಿಗೆ ರಾಜಾಂತಃಪುರ.

ಸಭಾಮಂದಿರವು ವಿಶಾಲವಾಗಿದ್ದು ಎರಡು ಮೂರು ಸಾವಿರ ಸಭಾ ಸದಸ್ಯರು ಕೂಡಲು ಅನುಕೂಲವಾಗಿತ್ತು. ಸಭಾಮಂದಿರದ ಮಧ್ಯೆ ಸಿಂಹಾಸನ. ಅದರ ಎಡಬಲಗಳಲ್ಲಿ ಪ್ರತಿಷ್ಠಿತ ವ್ಯಕ್ತಿಗಳ ಆಸನಗಳು. ಅಲ್ಲಲ್ಲಿ ಬಗೆಬಗೆಯ ಹೂಗೊಂಚಲುಗಳಿದ್ದ ಸುವರ್ಣ ಕರಂಡಗಳು. ಸಿಂಹಾಸನದ ಹಿಂದೆ ಗೋಡೆಯ ಮೇಲೆ ಭುವನೇಶ್ವರಿಯ ತೈಲ ಚಿತ್ರ ರಂಜಿಸುತ್ತಿತ್ತು. ಅಲ್ಲಿಂದ ರಾಜಾಂತಃಪುರಕ್ಕೆ ಬರಲು ಬೇರೆ ಮಾರ್ಗವಿತ್ತು.

ರಾಜಾಂತಃಪುರದಲ್ಲಿ ಸುಸಜ್ಜಿತವಾದ, ದಿವ್ಯವಾಗಿ ಅಲಂಕೃತವಾದ ಅನೇಕ ಸಂಖ್ಯೆಯ ಕೋಣೆಗಳು. ಅಲ್ಲಿ ಕೆಲಸ ಮಾಡುವ ಅಂತಃಪುರದ ಸ್ತ್ರೀಯರ ಸಂಖ್ಯೆಯೇ ಹತ್ತು ಹನ್ನೆರಡು ಸಾವಿರಕ್ಕೆ ಮಿಗಿಲಾಗಿತ್ತು. ಅವರೆಲ್ಲರಿಗೂ ಅಲ್ಲಿ ವಸತಿ ಸೌಕರ್ಯವನ್ನು ಏರ್ಪಡಿಸಲಾಗಿತ್ತು. ದೇಶ ವಿದೇಶಗಳಿಂದ ಆರಿಸಿ ತಂದ ಅನರ್ಘ್ಯವಾದ ವಸ್ತುಗಳು ಅಲ್ಲಿದ್ದವು. ಎಲ್ಲೆಡೆಯಲ್ಲೂ ಚಿನ್ನದ ಪುತ್ಥಳಿಗಳು, ಸುವರ್ಣಪೀಠಗಳು. ಎಲ್ಲೆಲ್ಲೂ ಕಸ್ತೂರಿ ಊದುಬತ್ತಿಗಳ ಸುಗಂಧವಾಸನೆ.

ನೃತ್ಯಮಂದಿರವು ವಿಶೇಷ ರೀತಿಯಲ್ಲಿ ಸುಸಜ್ಜಿತವಾಗಿತ್ತು. ಆ ಪ್ರಶಸ್ತವಾದ ಭವನಕ್ಕೆಲ್ಲಾ, ಅಮೃತಶಿಲೆಗಳನ್ನು ಹಾಸಿದ್ದರು. ಉತ್ತಮವಾದ ರತ್ನಗಂಬಳಿಗಳು ಅವುಗಳನ್ನು ಮುಚ್ಚಿದ್ದವು. ಸೂಕ್ಷ್ಮವಾದ ಜಾಲರಿಗಳನ್ನು ಮುಚ್ಚಿದ್ದ ವಾತಾಯನಗಳ ಮೂಲಕ ಗಾಳಿ ಬೆಳಕು ಬರುತ್ತಿತ್ತು. ಗೋಡೆಗೆ ತಾಗಿಕೊಂಡಿರುವಂತೆಯೇ ಬೆಳ್ಳಿಯ ಸ್ತಂಭರಾಜಿ. ನೃತ್ಯದ ವಿವಿಧ ಭಂಗಿಗಳಲ್ಲಿ ಕಲಾತ್ಮಕವಾಗಿ ನಿರೂಪಿಸಿರುವ ಮದನಿಕಾವಿಗ್ರಹಗಳು. ನೃತ್ಯವನ್ನು ಈಕ್ಷಿಸುವವರ ಸಲುವಾಗಿ ಅನೇಕ ಸುಖಾಸನಗಳಿದ್ದವು. ರಾಯನು ಒಂದು ಸುಖಾಸನದಲ್ಲಿ ಮಂಡಿಸಿದ್ದನು. ನೃತ್ಯದಲ್ಲಿ ತನ್ಮಯನಾಗಿದ್ದ ರಾಯನನ್ನು ಒಬ್ಬ ಕಂಚುಕಿಯು ಬಂದು ಎಚ್ಚರಗೊಳಿಸಿ ತಿಮ್ಮರಸನು ರಾಯನನ್ನು ಕಾಣಲು ಬಂದಿರುವ ಸುದ್ದಿಯನ್ನು ಅರುಹಿದನು. ತಿಮ್ಮರಸನಿಗೆ ಅರಮನೆಯ ಎಲ್ಲೆಡೆಯಲ್ಲೂ ಪ್ರವೇಶವಿತ್ತು. ಕೃಷ್ಣದೇವರಾಯನಿಗೆ ಮಾತ್ರವಲ್ಲದೆ ಇಡೀ ಅರಮನೆಗೆ ಅವನು ಅಪ್ಪಾಜಿಯಾಗಿದ್ದನು. ತಿಮ್ಮರಸನನ್ನು ಅಲ್ಲಿಗೇ ಕರೆತರಲು ಅಪ್ಪಣೆಯಾಯಿತು.

ತಿಮ್ಮರಸನು ನೃತ್ಯಮಂದಿರವನ್ನು ಪ್ರವೇಶಿಸಿ ಪ್ರಭುಗಳಿಗೆ ಅಭಿವಾದನ ಮಾಡಿ,

'ಪ್ರಭುಗಳು ನಾಟ್ಯಮಗ್ನರಾಗಿರುವಾಗ, ಬಂದು ತೊಂದರೆ ಕೊಡಬೇಕಾಯಿತು.' ಎಂದು ನಗುತ್ತಾ ಹೇಳಿ, ರಾಯನು ತೋರಿದ ಆಸನದಲ್ಲಿ ಕುಳಿತುಕೊಂಡನು.

'ಅಪ್ಪಾಜಿಯವರು ನನ್ನನ್ನು ಕಾಣಲು ಬರಬೇಕಾದರೆ ಯಾವುದೋ ಮಹತ್ವದ ರಾಜಕಾರಣವಿರಬೇಕಲ್ಲವೇ ?'

'ಹೌದು ಪ್ರಭು. ಸರಿಯಾಗಿ ಊಹಿಸಿದಿರಿ. ಒಂದು ಮಹತ್ವದ ರಾಜಕಾರಣವನ್ನು ತಮ್ಮೊಂದಿಗೆ ಅರಿಕೆ ಮಾಡಿಕೊಳ್ಳಲೆಂದೇ ಬಂದಿದ್ದೇನೆ'

'ಅದು ಅದಿಲ್‌ಷಹರ ರಾಯಭಾರದ ವಿಷಯವಲ್ಲವೇ ?'

ಈ ಮಾತಿನಿಂದ ತಿಮ್ಮರಸನು ಚಕಿತನಾದನು.

'ಹೌದು, ಪ್ರಭು !'

'ಅದಕ್ಕೇನು ಆತುರ. ನಿಧಾನವಾಗಿ ಪರಿಶೀಲಿಸೋಣ !'

'ರಾಯಭಾರಿಯನ್ನು ಹೀಗೆ ಕಾಯಿಸುವುದು ತಮ್ಮ ಘನತೆಗೆ ತಕ್ಕುದಲ್ಲ ಪ್ರಭು ! ಅವರು ಯಾವುದೋ ಮಹತ್ವದ ರಾಯಸ ತಂದಿರುವಂತಿದೆ.'

'ನಾವು ತಿಳಿಯದ ಮಹತ್ವದ ಸಂಗತಿಯೇನಿದ್ದೀತು ? ಬಹುಶಃ ಸುಲ್ತಾನನು ಸಂಧಾನಕ್ಕಾಗಿ, ಶಾಂತಿಭಿಕ್ಷೆಗಾಗಿ ಈ ರಾಯಭಾರಿಯನ್ನು ಕಳುಹಿಸಿದ್ದಾನೆ. ಅಷ್ಟೆ.'

'ಪ್ರಭುಗಳಿಗೆ ಇವುಗಳು ತಿಳಿಯದ ವಿಷಯಗಳೇನೂ ಅಲ್ಲ. ಆದರೂ ರಾಯಭಾರಿಗೆ ತಮ್ಮನ್ನು ಬಂದು ಕಾಣುವ ಅವಕಾಶಕೊಟ್ಟರೆ ರಾಯಭಾರವೇನೆಂದು ನಿರ್ಣಯವಾಗುತ್ತದೆ.'

'ಆಗಲಿ. ನಮ್ಮ ವಿರಾಮದಲ್ಲಿ ರಾಯಭಾರಿಯನ್ನು ಬರಮಾಡಿಕೊಳ್ಳೋಣ.'

'ವಿರಾಮವೆಂದು ಕುಳಿತುಕೊಳ್ಳುವ ವೇಳೆ ಇದಲ್ಲ ಪ್ರಭು. ಎರಡು ರಾಷ್ಟ್ರಗಳ ಸಂಧಿ, ವಿಗ್ರಹಗಳ ಭವಿಷ್ಯ ಆದರಿಂದ ಸಾಧಿಸುವಂತೆಯಿದೆ.'

'ನೀವು ಹೇಳುವಷ್ಟು ಈ ರಾಯಭಾರ ಮಹತ್ಪೂರಿತವಾಗಿದ್ದರೆ— ನಾಳಿನ ರಾಜಸಭೆಯಲ್ಲಿ ಅದನ್ನು ಪರಿಶೀಲಿಸೋಣ. ಈ ಸುದ್ದಿಯನ್ನು

ರಾಯಭಾರಿಗೆ ತಿಳಿಸಿ' ಎಂದು ಹೇಳಿದನು.

ಇದರಿಂದ ಅಪ್ಪಾಜಿಯವರ ಮುಖದಲ್ಲಿ ಗೆಲುವುಂಟಾಯಿತು. ಇದನ್ನು ನೋಡಿ 'ಇಷ್ಟೊಂದು ಸಣ್ಣ ವಿಚಾರಕ್ಕಾಗಿ ಅಪ್ಪಾಜಿಯವರು ಇಷ್ಟು ದೂರ ದಯಮಾಡಿಸಬೇಕೆ?' ಎಂದು ನಕ್ಕ.

'ಇದು ಸಣ್ಣ ವಿಷಯವಲ್ಲ, ಪ್ರಭು!'

'ಇದು ಸಣ್ಣ ವಿಷಯವಲ್ಲದೆ ಮತ್ತೇನು? ಬಿಜಾಪುರದ ಸುಲ್ತಾನನ ರಾಯಭಾರದಲ್ಲಿ ಯಾವ ಮಹತ್ವವಿದೆ? ಸುಲ್ತಾನನು ರಾಯಚೂರಿನ ಯುದ್ಧದಿಂದ ಇನ್ನೂ ಚೇತರಿಸಿಕೊಳ್ಳುವಂತೆಯೇ ಇಲ್ಲ. ನಮ್ಮ ಶಕ್ತಿಯನ್ನು ಅರಿತ ಯಾರೂ ಆತನಿಗೆ ಆಶ್ರಯವನ್ನೀಯಲಾರರು. ಇದು ಖಂಡಿತ. ಇಂದು ಸುಲ್ತಾನನು ರಾಜ್ಯಕೋಶಗಳಿದ್ದರೂ, ದಿಕ್ಕಿಲ್ಲದ ಪರದೇಶಿಯಂತೆ ಅಲೆಯುತ್ತಿದ್ದಾನೆ. ಅವನಿಗೆ ಈಗ ಬೇಕಾಗಿರುವುದು ಸಂಧಿ. ತನ್ನ ಗೊಡವೆಗೆ ನಾವು ಬರದಿರಲು ಬೇಕಾಗುವ ಒಪ್ಪಂದ ಮಾಡಿಕೊಳ್ಳಲೆಂದೇ ಈ ರಾಯಭಾರ! ಇದರಲ್ಲಿ ಯಾವ ಮಹತ್ವ ಅಡಗಿದೆ, ಅಪ್ಪಾಜೀ?

'ಹಾಗಲ್ಲ ಪ್ರಭು! ಇಂದು ಸುಲ್ತಾನ್ ಆದಿಲ್‌ಷಹನು ಸೋತು ಸೊರಗಿದ್ದಾನೆ. ನಮ್ಮ ದಯಾಭಿಕ್ಷೆ ಯಾಚಿಸುತ್ತಿದ್ದಾನೆ. ಆದರೆ ಪರಿಸ್ಥಿತಿಯ ಒತ್ತಡದಿಂದ ಹೀಗೆ ಮಾಡುತ್ತಿದ್ದಾನೆಯೇ ಹೊರತು ಸ್ವಯಿಚ್ಛೆಯಿಂದಲ್ಲ. ಬಿಜಾಪುರದ ಹಿಂದಿನ ಸುಲ್ತಾನರು ಎಷ್ಟು ಪ್ರಬಲರಾಗಿದ್ದರೆಂದು ಇತಿಹಾಸವೇ ಬಲ್ಲದು. - ಅವರು ವಿಜಯನಗರ ಸಾಮ್ರಾಟರನ್ನು ಎಷ್ಟು ಬಾರಿ ಕಪ್ಪಕಾಣಿಕೆ ಕೊಡುವಂತೆ ಮಾಡಿದ್ದಾರೆ, ಎಂಬುದನ್ನು ಮರೆಯಬಾರದು. ಶತ್ರುವು ಇಂದು ದುರ್ದೈವದಿಂದ ಕೆಳಗೆ ಬಿದ್ದಿರುವಾಗ ಅವನ ಶಕ್ತಿಯನ್ನು ನಿರ್ಲಕ್ಷಿಸಿ, ಮತ್ತೆ ಕೆರಳಿಸುವುದು ಅವಿವೇಕವೇ ಸರಿ. ಸಿಂಹವು ಮುದಿಯಾದರೇನಂತೆ, ಹಳ್ಳಕ್ಕೆ ಬಿದ್ದಿದ್ದರೇನಂತೆ. ಒಮ್ಮೆ ಕೆರಳಿ ನಿಂತರೆ, ಪ್ರಾಣದ ಮೇಲಿನ ಆಸೆಯನ್ನು ತೊರೆದು ಹೋರಾಡುತ್ತದೆ....ಎಂತಹ ಸಲಗನನ್ನೂ ಹಿಂದೆ ಮುಂದೆ ನೋಡದೆ ಮೇಲೆ ಬಿದ್ದು ಘಾಸಿಗೊಳಿಸುತ್ತದೆ ಎನ್ನುವ ಸತ್ಯವನ್ನು ನಾವು ಮರೆಯಬಾರದು, ಪ್ರಭು.'

'ಹಾಗಾದರೆ ಸುಲ್ತಾನನಿಗೆ ಇನ್ನೂ ನಮ್ಮ ಮೇಲೆ ಬೀಳುವ ಚೈತನ್ಯವಿದೆ–ಧೈರ್ಯವಿದೆ ಎಂದು ನಿಮ್ಮ ಹೇಳಿಕೆಯೇ?'

ನನ್ನ ಮಾತಿನ ಅರ್ಥ ಹಾಗಲ್ಲ, ಪ್ರಭು. ಸುಲ್ತಾನನು ರಾಯ ಚೂರಿನ ಪರಾಭವದಿಂದ ಹಣ್ಣಾಗಿದ್ದಾನೆ. ಬಹುಶಃ ತಾನಾಗಿಯೇ ಯುದ್ಧಕ್ಕೆ ಬರಲಾರ. ಆದರೆ ಸಂಧಿಗೆ–ಗೌರವವಾದ ಒಪ್ಪಂದಕ್ಕೆ ಬಂದರೂ ಬರ ಬಹುದು. ಈ ಸುವರ್ಣ ಸಂಧಿಯನ್ನು ಕಳೆದುಕೊಳ್ಳಬಾರದು. ನಾಲ್ಕು ಯುದ್ಧಗಳಿಂದ ಸಾಧಿಸಲಾಗದ ಮೈತ್ರಿ-ನೆಮ್ಮದಿ-ಈ ಒಂದು ಸಂಧಿಯಿಂದ ಸಾಧಿಸುತ್ತದೆ. ಎರಡು ರಾಷ್ಟ್ರಗಳಿಗೆ ಆಗುವ ವೃಥಾಹಾನಿ ತಪ್ಪುತ್ತದೆ. ಇದೇ ಬದುಕುವ ದಾರಿ. ಸೇಡಿನ ಬೀಜ ಒಮ್ಮೆ ಬಿತ್ತಿದ್ದರೆ ಅದರಿಂದ ಸೇಡಿನ ವೃಕ್ಷ ಬೆಳೆಯುತ್ತದೆಯೇ ಹೊರತು ಶಾಂತಿ ವೃಕ್ಷವಲ್ಲ. ನನ್ನ ನಮ್ರ ಸಲಹೆ ಏನೆಂದರೆ, ಸೋತು ಸ್ನೇಹ ಭಿಕ್ಷೆಗೆ–ಶಾಂತಿ ಭಿಕ್ಷೆಗೆ ಬಂದಿ ರುವ ಸುಲ್ತಾನನನ್ನು ಗೌರವದಿಂದ ಕಂಡು ಅವನೊಡನೆ ಶಾಶ್ವತ ಒಪ್ಪಂದ ಮಾಡಿಕೊಳ್ಳೋಣ. ಇದರಿಂದ ಎರಡು ರಾಷ್ಟ್ರಗಳಿಗೂ ಕಲ್ಯಾಣವಾಗು ವುದು.'

' ಹಾಗಾದರೆ ನಿಮ್ಮ ಅಭಿಪ್ರಾಯದಲ್ಲಿ ನಾವು ಕೈಗೊಂಡಿರುವ ಯುದ್ಧ ಬದುಕುವ ದಾರಿಯಲ್ಲವೇ? ಇದರಿಂದ ಶಾಂತಿಯುಂಟಾಗದೆ ?'

' ಪ್ರಭುಗಳಿಗೆ ತಿಳಿಯದ ವಿಷಯಗಳು ಯಾವುದೂ ಇಲ್ಲ.'

' ಅಪ್ಪಾಜಿ, ನನಗೆ ಈಚೆಗೆ ಸಂಶಯ ಬರುತ್ತಿತ್ತು. ಈ ದಿನ ನಿಮ್ಮ ಮಾತು ಅದನ್ನು ದೃಢಪಡಿಸಿತು.'

' ಯಾವ ಸಂಶಯ ಪ್ರಭು' ಅಚ್ಚರಿಯಿಂದ ಕೇಳಿದ.

' ತಾವು ಪೂಜ್ಯರಾದ ವ್ಯಾಸರಾಯ ಸ್ವಾಮಿಗಳ ಶಿಷ್ಯರಾಗಲು ಬಯ ಸಿದ್ದೀರೆಂದು ಕೇಳಿದೆ, ನಿಜವೇ ?'

' ಆ ಭಾಗ್ಯ ಈ ಪಾಮರನಿಗಿದ್ದರೆ, ಇವನಂತಹ ಪುಣ್ಯಶಾಲಿ ಬೇರೊ ಬ್ಬರಿಲ್ಲ. ಮಹಾಮುನಿಗಳೂ ಸಾಕ್ಷಾತ್ ಪ್ರಣವಸ್ವರೂಪರೂ, ಅವತಾರ ಪುರುಷರೂ ಆದ ಅವರ ಪಾದ ಸನ್ನಿಧಿಯಲ್ಲಿ ಶಿಷ್ಯನಾಗುವ ಭಾಗ್ಯ ನನಗೆ ವೇಳೆಯೆಲ್ಲಿದೆ ಪ್ರಭು ! ಆದರೂ ಎಂದಾದರೊಮ್ಮೆ ಶ್ರೀಮಠದಲ್ಲಿ ನಡೆಯುವ ಪೂಜೆ ಪುರಸ್ಕಾರಗಳಿಗೆ ಹೋಗಿ ಪ್ರಸಾದ ಸ್ವೀಕರಿಸಿ ಬರುತ್ತೇನೆ, ಅಷ್ಟೆ. ಅದ ಕ್ಕಿಂತಲೂ ಹೆಚ್ಚಿನ ಪುಣ್ಯ ನನಗೆ ಇಲ್ಲ—'

' ಹೌದು ಅಪ್ಪಾಜಿ, ಅವರು ಮಹಾಮುನಿಗಳು. ಅವರ ತಪಃ

ಪ್ರಭಾವದಿಂದ ನನ್ನ ಕುಹುಯೋಗ ನಿವಾರಣೆಯಾಯಿತು. ಪವಿತ್ರವಾದ ರತ್ನಸಿಂಹಾಸನವನ್ನು ಏರಲು ನನಗಿದ್ದ ಅನರ್ಹತೆ ಅವರ ಕೃಪೆಯಿಂದ ಕಳೆದು ಹೋಯಿತು. ಇಂತಹ ದೈವಾಂಶ ಪುರುಷರು ರಾಜಧಾನಿಯಲ್ಲಿರು ವುದು ನಮ್ಮ ಪುಣ್ಯವೇ ಸರಿ.'

'ನಾನು ಶ್ರೀಮಠಕ್ಕೆ ಹೋಗುತ್ತಿರುಹ ವಿಷಯ ತಮಗೆ ತಿಳಿದ ಬಗೆ ಹೇಗೆ ಪ್ರಭು ?'

'ನಮಗೆ ಹೇಗೋ ತಿಳಿಯಿತು, ಅಪ್ಪಾಜಿ. ನೀವು ಶಸ್ತ್ರಸಂನ್ಯಾಸ ಮಾಡಿ ವೇದಾಂತ ಪುರಾಣಗಳಲ್ಲಿ ನಿಮ್ಮ ವೇಳೆಯನ್ನು ಕಳೆಯುತ್ತಿರುವಿ ರೆಂದೂ ಕೇಳಿದೆ. ಆ ಮಾತು ಸತ್ಯವಾದರೆ, ಅಪ್ಪಾಜಿಯುವರೂ ಸಂನ್ಯಾಸಿ ಗಳೇ ಆಗುವರೆಂದು ಹೆದರಿದೆ. ಅಂತಲೇ ನಿಮ್ಮನ್ನು ಈ ಬಗ್ಗೆ ಕೇಳಿದೆ' ಎಂದು ರಾಯನು ನಗೆಯಾಡಿದನು.

'ಸಮರದಲ್ಲಿ ಪ್ರಾಪಂಚಿಕ ವ್ಯವಹಾರದಲ್ಲಿ ದಂಡಿಸಿದ ಈ ದೇಹಕ್ಕೆ ಸಂನ್ಯಾಸ ಸರಿಯಾದ ಮದ್ದಾದೀತೆ ? ಇದುವರೆಗೆ ಕೊರಡಿನಂತೆ ಬೆಳೆದ ದೇಹಕ್ಕೆ ಇಂದು ಪ್ರಾಪಂಚಿಕ ಸುಖನಶ್ವರತೆಯ ಅರಿವಾಗುತ್ತಿದೆ. ಇನ್ನಾ ದರೂ ಪುಣ್ಯ ಸಂಚಯನ ಮಾಡಿಕೊಳ್ಳಲು ದೈವದ ಕಡೆ ಮನಸ್ಸು ಕೊಟ್ಟಿ ದ್ದೇನೆ; ಅಷ್ಟೆ.'

'ಹಾಗಾದರೆ ನನ್ನ ಊಹೆ ಸುಳ್ಳಾಗಲಿಲ್ಲ !'

'ಯಾವ ಊಹೆ, ಪ್ರಭೂ ?'

'ನೀವು ರಾಜಕೀಯದಲ್ಲಿ ಯುದ್ಧದ ವಿಷಯದಲ್ಲಿ ತೋರಿಸುತ್ತಾ ಬಂದಿ ರುವ ತಾಟಸ್ಥ್ಯ ನೀತಿಗೆ—ನಿರಾಸಕ್ತಿಗೆ ನಿಮ್ಮಲ್ಲಾಗಿರುವ ಮಾರ್ಪಡೇನೆಂದು ಆಲೋಚಿಸುತ್ತಿದ್ದೆ. ಅಪ್ಪಾಜಿಯುವರು ವೇದಾಂತಿಯಾದ ಮೇಲೆ ನಾನು ನಿಮ್ಮಂತೆ ಸಂನ್ಯಾಸ ಸ್ವೀಕರಿಸಿ ಕಾಡಿಗೆ ಹೋಗುತ್ತೇನೆ.' ಎಂದನು. ನಗುತ್ತ

ತಿಮ್ಮರಸನ ಸಂಧಾನ ಯಶಸ್ವಿಯಾಯಿತು. ಮಾರನೆಯ ದಿನ ನಡೆದ ವಿಶೇಷ ದರಬಾರಿನಲ್ಲಿ ರಾಯಭಾರಿ ಅಸದ್‌ಖಾನನ್ನು ಪ್ರಭುಗಳ ಭೇಟಿಗೆ ಆಮಂತ್ರಿಸಿದನು.

ದರ್ಬಾರಿನಲ್ಲಿ ವಿಚಾರ ಮಾಡುವ ಆದಿಲ್‌ಷಹನ ರಾಯಭಾರ

ವೇನೆಂದು ತಿಳಿಯಲು ಸಭಾಸದರೆಲ್ಲರೂ, ಕಾಲಕ್ಕೆ ಮುಂಚಿತವಾಗಿಯೇ ಬಂದು ತಮ್ಮ ಪೀಠಗಳಲ್ಲಿ ಮಂಡಿಸಿದ್ದರು. ರಾಯನು ನಿಶ್ಚಿತ ವೇಳೆಗೆ ರಾಜಸಭೆಗೆ ಬಂದು ರತ್ನಖಚಿತವಾದ ಪೀಠದಲ್ಲಿ ಮಂಡಿಸಿದನು.

ಅಸದ್‌ಖಾನನು ಪ್ರಭುಗಳಿಗೆ ಮುಜುರೆ ಮಾಡಿ, ತಲೆಬಾಗಿ ನಿಂತು ಕೊಂಡನು. ಅನಂತರ ರಾಯನ ಆಜ್ಞೆಯಂತೆ, ತಂದಿದ್ದ ರಾಯಸವನ್ನು ಪ್ರಧಾನ ಅಮಾತ್ಯ ತಿಮ್ಮರಸನ ಕೈಗಿತ್ತನು. ಅನಂತರ ತನಗೆಂದೇ ಏರ್ಪ ಡಿಸಿದ್ದ ಪೀಠದಲ್ಲಿ ಕುಳಿತನು.

ಪ್ರಭುಗಳ ಅಣತಿಯಂತೆ, ತಿಮ್ಮರಸನು ಅದಿಲ್‌ಷಹನ ಪತ್ರವನ್ನು ಗಂಭೀರವಾಗಿ ಓದಿದನು.

'ಸ್ವಸ್ತಿ ಶ್ರೀಮನ್ ಮಹಾರಾಜಾಧಿರಾಜ, ರಾಜಪರಮೇಶ್ವರ, ಇತ್ಯಾದಿ ಬಿರುದಾಂಕಿತ ವಿದ್ಯಾನಗರ ರತ್ನಸಿಂಹಾಸನಾಧೀಶ್ವರ ಸಾಮ್ರಾಟ್ ಕೃಷ್ಣದೇವರಾಯ ಭೂಪಾಲರ ಸಮುಕ್ಷಮಕ್ಕೆ—

ಬಿಜಾಪುರದ ಸುಲ್ತಾನನಾದ ಇಸ್ಮೈಲ್ ಅದಿಲ್‌ಷಹನು ವಿಶ್ವಾಸ ಪೂರ್ವಕ ಬರೆಸಿರುವ ರಾಯಸವೇನೆಂದರೆ :—

ತಾವು ಸತ್ಯಸಂಧ, ನ್ಯಾಯಶೀಲ ಪ್ರಭುಗಳೆಂದು ಭರತಖಂಡದಲ್ಲೆಲ್ಲಾ ಖ್ಯಾತನಾಮರಾಗಿದ್ದೀರಿ. ಲೋಕವೇ ತಲೆದೂಗುವ ತಮ್ಮ ನ್ಯಾಯ ನಿಷ್ಠೆಯನ್ನು ನಮ್ಮ ಮೇಲೂ ಕೃಪೆ ಮಾಡಬೇಕೆಂದು ಕೋರಿಕೆ.

ನಾವುಗಳು ಪರಸ್ಪರ ಮಾಡಿಕೊಂಡಿದ್ದ, ಶಾಂತಿ ಒಪ್ಪಂದವನ್ನು ಇದುವರೆಗೂ ಪಾಲಿಸುತ್ತ ಬಂದಿದ್ದೆವು. ಯಾವುದೋ ಕ್ಷುಲ್ಲಕ ಕಾರಣ ಕ್ಕಾಗಿ ಸಾಮ್ರಾಟರು ನಮ್ಮ ಮೇಲೆ ಆಕ್ರೋಶಗೊಂಡು, ನಮ್ಮ ಒಪ್ಪಂದ ವನ್ನು ಮುರಿದು ಯುದ್ಧವನ್ನು ಘೋಷಿಸಿ, ರಾಯಚೂರು ಮತ್ತಿತರ ಗಡಿ ಪ್ರದೇಶಗಳನ್ನು ಆಕ್ರಮಿಸಿಕೊಂಡಿದ್ದೀರಿ. ನಾವು ಮಾಡಿರಬಹುದಾದ ಅಪರಾಧಕ್ಕೆ ಹೆಚ್ಚಿಗೆ ಶಿಕ್ಷೆಯನ್ನೇ ವಿಧಿಸಿದ್ದೀರಿ. ಮಹಾ ಉದಾರಿಗಳೂ, ಸಮರ್ಥರೂ ಆದ ತಮ್ಮಲ್ಲಿ ಮಾಡುವ ವಿನಂತಿ ಏನೆಂದರೆ ಎರಡು ರಾಷ್ಟ್ರ ಗಳ ಏಳಿಗೆ ನಮ್ಮಿಬ್ಬರ ಸ್ನೇಹ ಸೌಹಾರ್ದಗಳ ಮೇಲೆ ನಿಂತಿದೆ. ಆದುದ ರಿಂದ ಸಾಮ್ರಾಟರು ಇದುವರೆಗೆ ನಡೆದುದನ್ನು ಮರೆತು ಸ್ನೇಹಭಿಕ್ಷೆಯನ್ನು ನೀಡಬೇಕು. ಅಂತೆಯೇ ಸಾಮ್ರಾಟರು ನಮ್ಮಿಂದ ವಶಪಡಿಸಿಕೊಂಡಿರುವ

ಗಡಿ ಪ್ರದೇಶಗಳನ್ನೂ, ಆನೆ ಕುದುರೆಗಳನ್ನೂ, ಸೆರೆಯಾಳುಗಳನ್ನೂ ಒಪ್ಪಿಸಿ ಕೊಟ್ಟು ನಮ್ಮೊಡನೆ ಗೌರವವಾದ ಒಪ್ಪಂದ ಮಾಡಿಕೊಂಡು ಸ್ನೇಹಿತರಂತೆ ನಡೆಸಿಕೊಳ್ಳಬೇಕೆಂದು ಕೋರುತ್ತೇನೆ.

ಇಂತೀ ವಿಶ್ವಾಸಿಗಳು—
ಇಸ್ಮೈಲ್ ಅದಿಲ್‌ಷಹ

ಈ ಓಲೆಯನ್ನು ಆಲಿಸಿ ಸಭಿಕರೆಲ್ಲರೂ, ಕ್ಷಣಕಾಲ ಸ್ತಬ್ಧರಾದರು. ಎಲ್ಲರಿಗೂ ರಾಯನಿಂದ ಯಾವ ಉತ್ತರ ಬರುವುದೋ ಎಂದು ಕುತೂಹಲ ದಿಂದ ರಾಯನನ್ನೇ ನೋಡುತ್ತಾ ಕುಳಿತರು.

ಕೃಷ್ಣದೇವರಾಯನು ಸ್ವಲ್ಪ ಹೊತ್ತು ಯೋಚಿಸುತ್ತಾ ಕುಳಿತು ಅನಂತರ 'ಮಾನ್ಯ ಆಸ್ಥಾನಿಕರೇ ಸಭಾಸದರೇ, ಈಗ ತಮಗೆಲ್ಲ ಬಿಜಾ ಪುರದ ಸುಲ್ತಾನ್ ಇಸ್ಮೈಲ್ ಅದಿಲ್‌ಷಹರು ಕಳುಹಿಸಿರುವ ರಾಯಸದ ವಿಷಯ ತಿಳಿದಿದೆ. ವೀರರೂ, ಸಾಹಸಿಗಳೂ ಆದ ಅದಿಲ್‌ಷಹರು ನಮ್ಮೊಂ ದಿಗೆ ಸ್ನೇಹಾಕಾಂಕ್ಷಿಗಳಾಗಿ ಸಂಧಾನಕ್ಕೆ ಬಂದಿದ್ದಾರೆ. ನಾವೂ ಸುಲ್ತಾನ ರಷ್ಟೇ ಸ್ನೇಹ ಸೌಹಾರ್ದಗಳಿಗಾಗಿ ಕಾತರರಾಗಿದೇವೆ. ಅವರು ತಮ್ಮ ಓಲೆಯಲ್ಲಿ ತಿಳಿಸಿರುವಂತೆ ಹಿಂದಾದುದನ್ನು ಮರೆತು, ಅವರ ಕೋರಿಕೆಯಂತೆ ಅವರಿಂದ ವಶಪಡಿಸಿಕೊಂಡಿರುವ ಪ್ರದೇಶಗಳನ್ನೂ ಯುದ್ಧೋಪಕರಣ ಗಳನ್ನು ಹಿಂದಕ್ಕೆ ಕೊಡಲು ನಮ್ಮ ಆಕ್ಷೇಪವಿಲ್ಲ. ಆದರೆ ಒಂದೇ ಒಂದು ಷರತ್ತಿದೆ. ಅದೇನೆಂದರೆ ಸುಲ್ತಾನರು ನಿಜವಾದ ಸ್ನೇಹ ಸೌಹಾರ್ದಗಳನ್ನು ಬಯಸುವುದಾದರೆ, ಅದರ ಕುರುಹಾಗಿ ನಮ್ಮ ರಾಜಧಾನಿಗೆ ಬಂದು ನಮ್ಮಿಂದ ಸ್ನೇಹವೀಳಯವನ್ನು ತೆಗೆದುಕೊಂಡು ನಮ್ಮ ಪಾದಚುಂಬನ ಮಾಡಬೇಕೆಂಬುದೇ ನಮ್ಮ ಆಶಯ. ಇದರಲ್ಲಿ ಯಾವ ದುರಾಲೋಚನೆ ಯೂ ಇಲ್ಲ. ಇದು ನಮ್ಮ ಸ್ನೇಹ ಸೌಹಾರ್ದದ ಸಂಕೇತ, ಅಷ್ಟೆ. ಸುಲ್ತಾ ನರು ನಮ್ಮ ಈ ಆಶಯವನ್ನು ಕಾರ್ಯಗತ ಮಾಡುವುದಾದರೆ ಅವರು ಬಯಸುವ ಗೌರವಪೂರ್ಣವಾದ ಒಪ್ಪಂದಕ್ಕೆ ನಾವು ಸಿದ್ಧರಿದ್ದೇವೆ ' ಎಂದು ಹೇಳಿ ಬಿಜಾಪುರದ ಸುಲ್ತಾನನಿಗೆ ಇದೇ ನಿರೂಪವನ್ನು ಕಳುಹಿಸು ವಂತೆ ಪ್ರಧಾನ ಅಮಾತ್ಯ ತಿಮ್ಮರಸನಿಗೆ ಸೂಚಿಸಿ ಅಲ್ಲಿಂದ ಕಾಲ್ತೆಗೆದನು.

ತಿಮ್ಮರಸ-ಅಸದ್‌ಖಾನ್‌ರು ಆದಿಯಾಗಿ ಎಲ್ಲರೂ ರಾಯನು ಅಪ್ಪಣೆ ಕೊಡಿಸಿದ್ದ ವಿಚಿತ್ರ ನಿರೂಪಕ್ಕಾಗಿ, ಬೆರಗಾಗಿ ಅವಾಕ್ಕಾಗಿ ನಿಂತರು.

## ೧೦

ಪ್ರಧಾನ ಮಂತ್ರಿ ಸಾಳ್ವ ತಿಮ್ಮರಸನಿಗೆ ಸಾಮ್ರಾಟ್ ಕೃಷ್ಣದೇವರಾಯನು ವ್ಯಕ್ತಪಡಿಸಿದ್ದ ಅಭಿಪ್ರಾಯದಿಂದ ತುಂಬಾ ವಿಷಾದವಾಯಿತು. ಶತ್ರುಗಳ ವಿಷಯದಲ್ಲಿ ಮಾತ್ರ ಆತನು ಅಗೌರವದಿಂದ ವರ್ತಿಸಿದ್ದನು. ರಾಯನು ಸೋತು ಶರಣೆಂದು ಸಂಧಿಗೆ ಬಂದಿದ್ದ ಅದಿಲ್‌ಷಹನನ್ನು ಇನ್ನಷ್ಟು ಭಂಗಿಸಿ, ಅಪಮಾನ ಮಾಡುವುದರ ಮೂಲಕ ತನ್ನ ಹಳೆಯ ದ್ವೇಷವನ್ನು ಸಾಧಿಸಲು ತೊಡಗಿದ್ದಾನೆ. ತುಂಬಿದ ಸಭೆಯಲ್ಲಿ ರಾಯನ ಚುಂಬನ ಮಾಡುವುದರ ಮೂಲಕ ಸುಲ್ತಾನನನ್ನು ಅಪಮಾನಗೊಳಿಸಿ ಅವನನ್ನು ಪದಾಕ್ರಾಂತನನ್ನಾಗಿ ಮಾಡಿಕೊಳ್ಳುವುದೇ ರಾಯನ ಆಶಯವೇ ? ಈ ಬಗೆಯ ವರ್ತನೆಯಿಂದ ಸ್ನೇಹವೆಂದಿಗೂವೃದ್ಧಿಸದು. ಹಗೆತನದ ಬೆಂಕಿಗೆ ಇನ್ನಷ್ಟು ಆಜ್ಯವನ್ನು ಸುರಿದಂತೆಯೇ ಸರಿ. ಇಂತಹ ಅಪಮಾನವನ್ನು ಸುಲ್ತಾನ್ ಅದಿಲ್‌ಷಹನು ಎಂದಿಗೂ ಸಹಿಸಲಾರ. ರಾಯನ ದುಡುಕು ವರ್ತನೆಯಿಂದ ಎರಡು ರಾಷ್ಟ್ರಗಳಿಗೆ ಒದಗಿದ್ದ ಸ್ನೇಹ, ಶಾಂತಿ, ನೆಮ್ಮದಿಗಳ ಸದವಕಾಶ ತಪ್ಪಿಹೋಗುತ್ತದೆ, ಎಂದು ತಿಮ್ಮರಸನು ಪರಿತಪಿಸಿದ. ಪುನಃ ರಾಯನನ್ನು ಕಂಡು ಅವನ ನಿಜವಾದ ಅಭಿಪ್ರಾಯವನ್ನು ಮತ್ತೆ ತಿಳಿದು ಅನಂತರವೇ ರಾಯಭಾರಿಗಳಿಗೆ ರಾಯಸವನ್ನು ಕೊಡಬೇಕೆಂದು ಯೋಚಿಸಿ ರಾಯನನ್ನು ಅರಮನೆಯಲ್ಲಿ ಭೇಟಿಮಾಡಿದನು.

‘ ಈ ಬಗ್ಗೆ ನೀವೇಕೆ ಕಳವಳಗೊಳ್ಳಬೇಕು ಅಪ್ಪಾಜಿ ? ನಾನು ವ್ಯಕ್ತಗೊಳಿಸಿದ್ದ ಅಭಿಪ್ರಾಯಗಳಲ್ಲಿ ಅಪಮಾನವಾಗುವಂತಹ ಯಾವ ಸಂಗತಿ ಇದೆ ? ’ ಎಂದು ಕೇಳಿದನು. ತಿಮ್ಮರಸನ ಹೇಳಿಕೆ ಮುಗಿದ ಮೇಲೆ.

‘ ಪ್ರಭುಗಳು ಅನ್ಯಥಾ ಭಾವಿಸಬಾರದು. ಶತ್ರುವು ನೆಲಕ್ಕೆ ಬಿದ್ದಿರುವಾಗ ದ್ವೇಷವನ್ನು ಮರೆತು ಅಭಯದ ಸ್ನೇಹ ಹಸ್ತ ನೀಡಿ, ಉದ್ಧರಿಸ

ಬೇಕಾದುದು ತಮ್ಮ ಕರ್ತವ್ಯ. ತಾವೂ ಸ್ನೇಹ ಸೌಹಾರ್ದಗಳ ಬಗ್ಗೆ ಆತುರರಾಗಿರುವಿರೆಂದು ಅಪ್ಪಣೆ ಕೊಡಿಸಿದ್ದೀರಿ. ಇದು ಸಂತೋಷ ಸಂಗತಿಯೇ ಸರಿ. ಆದರೆ ಸ್ನೇಹ ಎರಡು ಸಮಾನ ವ್ಯಕ್ತಿಗಳ ನಡುವೆ ಅರಳುವ ಕುಸುಮ. ಮೇಲು ಕೀಳೆಂದು ಹೊರಟರೆ ಅದರ ಕುಡಿ ಬಾಡೀತು ! ಆದುದರಿಂದ ಪ್ರಭುಗಳು ಸೋತು ಶರಣಾಗಿರುವ ಆದಿಲ್‌ಷಹರಿಗೆ ಸ್ನೇಹ ಭಿಕ್ಷೆನೀಡುವುದಾದರೆ, ಅವರನ್ನು ಸಮಾನ ವ್ಯಕ್ತಿಯೆಂದು ಪರಿಗಣಿಸಬೇಕು.'

'ನಾವು ಯಾರನ್ನೂ ಮೇಲು ಕೀಳೆಂದು ಪರಿಗಣಿಸಿಯೇ ಇಲ್ಲ. ನಾವು ಬಿಜಾಪುರದ ಸುಲ್ತಾನರು ತಿಳಿಸಿರುವ ಎಲ್ಲ ಷರತ್ತುಗಳನ್ನು ಉದಾರವಾಗಿ ಒಪ್ಪಿ, ಅವರ ಆಶಯದಂತೆ ಶಾಂತಿ ಒಪ್ಪಂದಕ್ಕೆ ಸಮ್ಮತಿಸಿದ್ದೇನೆ.'

'ಮಹಾ ಪ್ರಭುಗಳು ಶಾಂತಿ ಒಪ್ಪಂದಕ್ಕೆ ಸಮ್ಮತಿಸಿದ್ದೀರಿ, ದಿಟ. ಆದರೆ ಮಾಡಿಕೊಳ್ಳುವ ಒಪ್ಪಂದಗಳು ಪರಸ್ಪರ ಗೌರವಯುತವಾಗಿದ್ದರೆ ತಾನೆ ವ್ಯಕ್ತಿಗಳ ಘನತೆ ಉಳಿಯುವುದು ?'

'ಅಂದರೆ....'

'ಮಹಾಪ್ರಭುಗಳು ಸ್ನೇಹ ಭಿಕ್ಷೆ ನೀಡಲು ನಿರ್ಧರಿಸಿದ್ದೀರಿ. ಆದರೆ ಸ್ನೇಹ ಪ್ರೀತಿ ವಿಶ್ವಾಸಗಳು, ಸಹಜವಾದ ಭಾವಗಳು. ಬಲಾತ್ಕಾರಕ್ಕೆ ಉಕ್ಕಿಬರುವ ಭಾವನೆಗಳಲ್ಲ.'

'ಹಾಗಾದರೆ ನಮ್ಮ ಸ್ನೇಹ ಸಂದೇಶ ಕೃತಕವೇ ?'

'ನಾನು ಹೇಗೆ ಹೇಳಲಿ ಪ್ರಭು ?'

'ಹಾಗಾದರೆ ನೀವೆನ್ನುವುದಾದರೂ ಏನು ?'

'ಪ್ರಭುಗಳು ಸುಲ್ತಾನರೊಂದಿಗೆ ಸ್ನೇಹಿತರಾಗಲು ಬಯಸುವುದಾದರೆ, ಅವರನ್ನು ಸಮಾನಸ್ಕಂಧರಂತೆ ಗೌರವವಾಗಿ ನಡೆದುಕೊಳ್ಳಬೇಕು. ಪ್ರಭುಗಳ ಪ್ರೀತಿ ವಿಶ್ವಾಸಗಳು ಅಯಾಚಿತವಾಗಿರಬೇಕು. ನಿರ್ವ್ಯಾಜವಾಗಿರಬೇಕು'

'ಹಾಗೆಂದರೆ ?'

'ಪ್ರಭುಗಳು ಯಾವ ಷರತ್ತನ್ನೂ ಹಾಕದೆ ಒಪ್ಪಂದ ಮಾಡಿಕೊಳ್ಳಬೇಕು.'

'ನಾನು ಪಾದ ಚುಂಬನ ಕೋರಿದ್ದು ನಮ್ಮ ಹಾಗೂ ಅವರ ಸ್ನೇಹ

ವಿಶ್ವಾಸಗಳ ಸಂಕೇತಕ್ಕಾಗಿಯೇ ಹೊರತು ಬೇರೆ ದೃಷ್ಟಿಯಿಂದಲ್ಲ.'

'ಮಹಾ ಪ್ರಭುಗಳು ಸುಲ್ತಾನರನ್ನು ಸ್ನೇಹಿತರಂತೆ ನಡೆಸಿಕೊಳ್ಳಲು ಒಪ್ಪಿದರೆ ಪಾದ ಚುಂಬನದ ಮಾತೇಕೆ ಪ್ರಭು? ಇದರಿಂದ ಸ್ವಯಂ ಸುಲ್ತಾನರಾದ ಅದಿಲ್‌ಷಹನ ಆತ್ಮಗೌರವಕ್ಕೆ ಧಕ್ಕೆ ಬರುವುದಿಲ್ಲವೇ? ಇಂತಹ ಅಪಮಾನವನ್ನು ಅವರು ಸಹಿಸಲು ಸಿದ್ಧರಾಗಿದ್ದಾರೆಯೇ? ಈಗ ತಾವು ಸೇಡು ತೀರಿಸಿಕೊಳ್ಳುತ್ತಿರುವಿರೊ ಸಂಧಿಮಾಡಿಕೊಳ್ಳುತ್ತಿರುವಿರೊ ತಿಳಿಯದಾಗಿದೆ.'

'ನೀವು ಹೇಗೆ ತಿಳಿಯುತ್ತೀರಿ ಅಪ್ಪಾಜಿ?'

'ನನ್ನ ಮನಸ್ಸಿನಲ್ಲಿರುವುದನ್ನು ಮುಚ್ಚುಮರೆಯಿಲ್ಲದೆ, ಸ್ಪಷ್ಟವಾಗಿ ಹೇಳುತ್ತೇನೆಂದು ತಾವು ಅನ್ಯಥಾ ಭಾವಿಸಬಾರದು. ಕರ್ತವ್ಯಪರನಾಗಿ ತಮಗೆ ಅಹಿತವಾಗುವ ಮಾತನ್ನು ಹೇಳಬೇಕಾಗಿದೆ ಪ್ರಭುಗಳು ಸುಲ್ತಾನರೊಂದಿಗೆ ತೋರಿಕೆಯ ಸ್ನೇಹದ ಮಾತು ಹೇಳುತ್ತಿದ್ದರೂ, ವಾಸ್ತವವಾಗಿ ಅಂತರಂಗದಲ್ಲಿ ಇನ್ನೂ ಸೇಡಿನ ಬೆಂಕಿ ಆರಿಲ್ಲ. ಉರಿಯುತ್ತಲೇ ಇದೆ.'

'ಹೌದು, ಅಪ್ಪಾಜಿ. ನೀವು ಸತ್ಯವನ್ನೇ ನುಡಿಯುತ್ತಿರುವಿರಿ. ನನ್ನ ಹೃದಯಾಂತರಾಳದಲ್ಲಿ ಅಡಗಿರುವ ಭಾವನೆಗಳನ್ನೇ ಹೇಳುತ್ತಿರುವಿರಿ. ನಿಮ್ಮೊಂದಿಗೆ ಮುಚ್ಚುಮರೆ ಏಕೆ? ಅದಿಲ್‌ಷಹರೊಂದಿಗೆ ನಾನು ಸ್ನೇಹ ಎಂದೂ ಬಯಸಲಿಲ್ಲ. ಇಂದೂ ಬಯಸುತ್ತಿಲ್ಲ. ಸಿದ್ಧಿಮರ್ಕಾರನನ್ನು ಸ್ನೇಹಿತನೆಂದು ಕರೆದು ಗೌರವಿಸಿದೆ. ಕಡೆಗೆ ಆದುದೇನು? ವಿದ್ರೋಹ! ಎಷ್ಟೇ ನಿರ್ಮಲ ಹೃದಯನಾಗಿದ್ದರೂ ವಿಧರ್ಮೀಯರು ವಿಧರ್ಮೀಯರೇ.... ಅದರಲ್ಲಿಯೂ ಮಹಮದೀಯರನ್ನು ನಂಬಲು ಸಾಧ್ಯವೇ ಇಲ್ಲ. ಇದು ನನ್ನ ಸ್ವಾನುಭವ. ಅಲ್ಲದೆ ಹಿಂದಿನ ಸುಲ್ತಾನರು ನಮ್ಮ ಹಿಂದಿನ ಸಾಮ್ರಾಟರಿಗೆ ಮಾಡಿರುವ ಅಪಮಾನ, ಅನ್ಯಾಯ ಅಪಚಾರಗಳನ್ನು ಮರೆಯಬಲ್ಲೆನೆ? ಸಂಗ ವಂಶದ ದೇವರಾಯ ಭೂಪತಿಗಳನ್ನು ಬಿಜಾಪುರದ ಅಹಮದ್‌ಷಹ ಬಹಮನಿ ನಡೆಸಿಕೊಂಡ ರೀತಿಯನ್ನು ಈ ರತ್ನ ಸಿಂಹಾಸನದ ಮೇಲೆ ಕುಳಿತ ಯಾವ ದೇಶಾಭಿಮಾನಿ ಮರೆಯಬಲ್ಲನು? ದುರದೃಷ್ಟದಿಂದ ಸಂಗ್ರಾಮದಲ್ಲಿ ಸೋತು ಕೈಸೆರೆ ಸಿಕ್ಕಿದ ಯುವರಾಜನನ್ನು ಕತ್ತಿಯ ಮೇಲೆ ಕೂಡಿಸಿ ತನ್ನ ಕಾಲು ಹಿಡಿಯುವಂತೆ ಮಾಡಿದ ಅಪಮಾನವನ್ನು ದೇಶಪ್ರೇಮಿಯಾದ

ಯಾವ ಮನುಷ್ಯನು ತಾನೆ ಮರೆಯಬಲ್ಲನು! ಅಂದಿನಿಂದಲೂ ಈ ಅಪಮಾನದ ಬೆಂಕಿ ಪ್ರಜ್ವಲಿಸುತ್ತಲೇ ಇದೆ. ಅಂದು ರಕ್ತದಲ್ಲಿ ಬರೆದಿರುವ ಆ ಸೇಡಿನ ಕಥೆಯನ್ನು ಇಂದು ರಕ್ತದಲ್ಲಿಯೇ ಅಳಿಸಿಬಿಡಬೇಕೆಂದು ನಿಶ್ಚಯಿಸಿದೆನು. ಇಂದು ದೈವಾನುಗ್ರಹದಿಂದ ಸದವಕಾಶ ದೊರೆತಿರುವಾಗ ಅದನ್ನು ವ್ಯರ್ಥಗೊಳಿಸಬೇಕೇ ಅಪ್ಪಾಜಿ ?' ಎಂದು ಉದ್ವೇಗದಲ್ಲಿ ಹೇಳಿದನು.

'ಮಹಾ ಪ್ರಭು ! ಸೇಡಿನ ಕೈಗೆ ಬುದ್ಧಿಕೊಟ್ಟರೆ ವಿವೇಕ ಮರೆಯಾಗುತ್ತದೆ. ಒಮ್ಮೆ ಸಾವಧಾನ ಚಿತ್ತದಿಂದ ಆಲೋಚಿಸಿ ನೋಡಿ. ಸೇಡು ತೀರಿಸಿಕೊಳ್ಳಬೇಕು, ನಿಜ. ಆದರೆ ಸೇಡು ಯಾರ ಮೇಲೆ ತೀರಿಸಿಕೊಳ್ಳಬೇಕು ? ಹಿಂದೆ ಯಾರೋ ಸುಲ್ತಾನನು ಎಸಗಿದ ದುಷ್ಕೃತ್ಯವನ್ನು ಇಂದು ನೀವು ಎಸಗಿದರೆ ಇದರಿಂದ ಸೇಡು ತೀರಿದಂತೆ ಆಯಿತೆ ? ಆದಿಲ್‌ಷಹನ ಪೂರ್ವಜರು ಮಾಡಿದ ತಪ್ಪಿಗೆ ಆದಿಲ್‌ಷಹನನ್ನು ದಂಡಿಸುವುದು ನ್ಯಾಯವೇ? ರಾಜ್ಯ ಕಲ್ಯಾಣದ ದೃಷ್ಟಿಯಿಂದ ಧರ್ಮಾವತಾರರಾದ ತಾವು ಸಾವಧಾನದಿಂದ ಪರ್ಯಾಲೋಚಿಸಬೇಕು. ಪರಾಜಿತನಾದ ಶತ್ರುವಿನ ಮೇಲೆ ಸೇಡು ತೀರಿಸಿಕೊಳ್ಳುವುದರಿಂದ ಸಾಮ್ರಾಜ್ಯಕ್ಕೆ ಹಾನಿಯುಂಟಾಗುವುದಿಲ್ಲವೇ ? ಇಂದು ಪ್ರಭುಗಳು ಸೇಡಿಗಾಗಿ ಬಿಜಾಪುರದ ಸುಲ್ತಾನರೊಬ್ಬರನ್ನು ಪಾದ ಚುಂಬನದಿಂದ ಅಪಮಾನಗೊಳಿಸಿದರೆ ಮುಂದೆ ತಮಗೂ ಇದೇ ದುಸ್ಥಿತಿ ಬರಬಹುದೆಂದು ಉಳಿದ ಬಹಮನೀ ಸುಲ್ತಾನರೆಲ್ಲಾ ತಮ್ಮ ವೈಯಕ್ತಿಕ ಮನಸ್ತಾಪಗಳನ್ನು ಬದಿಗಿಟ್ಟು ಬಿಜಾಪುರದ ಸುಲ್ತಾನರ ಪರ ದಂಡೆತ್ತಿ ಬಂದರೆ ನಮ್ಮ ಸ್ಥಿತಿ ಏನಾಗಬಹುದು ? ಇದು ದುಡುಕುವ ವಿಷಯವಲ್ಲ ಪ್ರಭು ! ನಾವು ಇಂದು ದುಡುಕಿನಲ್ಲಿ ಕೈಗೊಂಡ ನಿರ್ಣಯಕ್ಕೆ ಮುಂದಿನ ಪೀಳಿಗೆ ದಂಡತೆರಬೇಕಾದ ಸಂದರ್ಭ ಒದಗಬಹುದು. ಆದುದರಿಂದ ಪ್ರಭುಗಳು ಸಾವಧಾನದಿಂದ ಆಲಿಸಬೇಕು.'

'ಅಪ್ಪಾಜಿ, ನಾವು ಇವೆಲ್ಲವನ್ನೂ ಪರ್ಯಾಲೋಚಿಸಿಯೇ ನನ್ನ ಈ ವರ್ತನೆ ಸರಿ ಎಂದು ನಿರ್ಧರಿಸಿದ್ದೇನೆ. ರಾಜ್ಯ ಹಿತಕ್ಕೆ ಇದರಿಂದ ಎಷ್ಟರ ಮಟ್ಟಿನ ಸಾಧಕ ಬಾಧಕಗಳೆಂಬುದನ್ನು ಪರಿಶೀಲಿಸಲು ನಿಮ್ಮಂತಹ ರಾಜಕಾರಣಿಗಳಿಗೆ ಬಿಟ್ಟಿದ್ದೇನೆ. ಈಗ ನಮಗೆ ಬೇಕಾಗಿರುವುದು ಸೇಡು— ನಮ್ಮ ಪೂರ್ವಿಕರಿಗಾದ ಅವಮಾನಕ್ಕೆ ತಕ್ಕ ಸೇಡು. ಈ ಮೂಲಕ ಅವರ

ಆತ್ಮಕ್ಕೆ ತೃಪ್ತಿಗೊಳಿಸುವುದು ! ಈ ವಿಷಯದಲ್ಲಿ ಯಾರೆಷ್ಟು ಹೇಳಿದರೂ ನಾನು ನನ್ನ ನಿಶ್ಚಯವನ್ನು ಬದಲಿಸರಲಾರೆ. ಇದು ಖಂಡಿತ' ಎಂದು ರಾಯನು ನಿಷ್ಠುರವಾಣಿಯಲ್ಲಿ ನುಡಿದನು.

ರಾಯನು ವೀರಪ್ರತಿಜ್ಞೆಯನ್ನು ಮಾಡುವ ಗತ್ತಿನಲ್ಲೇ ಈ ನಿರ್ಧಾರವನ್ನು ಹೇಳಿದ್ದುದು. ರಾಯನನ್ನು ವಿಚಲಿತಗೊಳಿಸಲು ಯಾರಿಂದಲೂ ಸಾಧ್ಯವಿಲ್ಲವೆಂದು ಸ್ವಾನುಭವದಿಂದ ತಿಮ್ಮರಸನು ಬಲ್ಲನು. ತಾನೊಂದು ಬಗೆದರೆ ದೈವವೊಂದು ಬಗೆಯಿತು. ಇದರಲ್ಲಿ ಪುರುಷ ಯತ್ನಕ್ಕೆ ಮೀರಿದ ಯಾವುದೋ ದೈವ ಶಾಸನವಿದೆ. ಅಂತಲೇ ಸಾಧಿಸಲು ಸಾಧ್ಯವಾಗಿದ್ದ ಶಾಂತಿ, ಸ್ನೇಹ, ಸೌಹಾರ್ದಗಳು, ಹಗೆತನದ ಸೇಡಿಗೆ ಎಡೆಗೊಟ್ಟಿತು. ಹಾಲು ಹಾಲಾಹಲವಾಯಿತು. ಪಂಪಾಪತಿಯ ಅಭೀಷ್ಟವೇನಿದೆಯೊ ಅದರಂತೆ ನಡೆಯಲಿ—' ಎಂದು ತಿಮ್ಮರಸನು ಭಾರವಾದ ಹೃದಯವನ್ನು ಹೊತ್ತು ಮನೆಗೆ ತೆರಳಿದನು.

ಅಂದೇ ಈ ಬಗ್ಗೆ ರಾಯಸವನ್ನು ಸಿದ್ಧಗೊಳಿಸಿ ರಾಯನ ಅಂಕಿತದೊಡನೆ ರಾಯಭಾರಿಯಾದ ಅಸದ್‌ಖಾನನಿಗೆ ತಲುಪಿಸಿದನು.

ಈ ಓಲೆಯನ್ನು ಅಸದ್‌ಖಾನನು ಸಕಾಲದಲ್ಲಿ ಆದಿಲ್‌ಷಹನಿಗೆ ತಲುಪಿಸಿದನು. ಈ ಪತ್ರವನ್ನು ಓದಿಕೊಂಡು ಆದಿಲ್‌ಷಹನ ಮೇಲೆ ಉಂಟಾದ ಪರಿಣಾಮವೇನೆಂಬುದು ತಿಳಿಯದೆ ಹೋದರೂ, ಆದಿಲ್‌ಷಹನಿಂದ ರಾಯನಿಗೆ ಬಂದ ಮಾರೋಲೆಯನ್ನು ಕಂಡು ರಾಯನೂ ತಿಮ್ಮರಸನೂ ಚಕಿತರಾದರು.

ಈ ಓಲೆಯಲ್ಲಿ ಆದಿಲ್‌ಷಹನು ರಾಯನ ಔದಾರ್ಯವನ್ನು ಶ್ಲಾಘಿಸಿ, ಕೃಷ್ಣದೇವರಾಯನಂತಹ ಸಾಮ್ರಾಟನೊಂದಿಗೆ ಸ್ನೇಹಿತನಾಗಿರುವ ಗೌರವ ತನಗೆ ದೊರೆತುದಕ್ಕಾಗಿ ಸಂತೋಷವನ್ನು ವ್ಯಕ್ತಪಡಿಸಿದ್ದನು. ಇದಕ್ಕಾಗಿ ತಾನು ಯಾವ ಕೆಲಸ ಮಾಡಲೂ ಸಿದ್ಧನಿರುವುದಾಗಿಯೂ, ತಾನು ರಾಯನ ಪಾದಚುಂಬನವನ್ನು ಅಗೌರವವೆಂದು ಭಾವಿಸುವುದಿಲ್ಲವಾಗಿಯೂ ತಿಳಿಸಿದನು. ಆದರೆ ತಾನು ರಾಯನ ಇಷ್ಟದಂತೆ ರಾಜಧಾನಿಗೆ ಬರಲು ಅನಾನುಕೂಲಗಳಿರುವುವೆಂದೂ, ರಾಯನನ್ನು ಯಾವ ಸ್ಥಳದಲ್ಲಿ ಭೇಟಿ ಮಾಡಬೇಕೆಂದು ತಿಳಿಸಲು ಕೋರಿದ್ದನು.

ಈ ಪತ್ರವನ್ನು ಓದಿಕೊಂಡ ರಾಯನು ಆದಿಲ್‌ಷಹನ ಸವಿ ಮಾತು ಗಳಿಗೆ ಬೆರಗಾದನೆಂದೇ ಹೇಳಬೇಕು. ಎಲ್ಲವೂ ತನ್ನ ಆಶಯದಂತೆ ನಡೆ ಯುತ್ತಿರುವುದೆಂದು ತಿಳಿದು ರಾಯನು ಹಿಗ್ಗಿದನು. ಆದರೆ ಪತ್ರವನ್ನು ನೋಡಿದ ತಿಮ್ಮರಸನಿಗೆ ಅದರಿಂದ ಅಂತಹ ಸಂತೋಷ ಉಂಟಾಗಲಿಲ್ಲ. ಅವನಿಗೆಆ ಪತ್ರದಲ್ಲಿ ಯಾವುದೋ ಮೋಸ ಅಡಗಿರುವಂತೆ ಭಾಸವಾಯಿತು. ಆತ್ಮಾಭಿಮಾನವುಳ್ಳ ಯಾವ ವ್ಯಕ್ತಿಯೂ ರಾಯನ ಕೋರಿಕೆಯನ್ನು ಸಂತೋಷವಾಗಿ ಈಡೇರಿಸಲಾರನೆಂಬ ವಾಸ್ತವ ಸತ್ಯವನ್ನು ಅರಿತಿದ್ದ ತಿಮ್ಮ ರಸನಿಗೆ ಅದಿಲ್‌ಷಹನ ಪತ್ರದ ಸಂಗತಿಗಳು—ಅಚ್ಚರಿಯನ್ನುಂಟು ಮಾಡಿ ದವು. ಪತ್ರವನ್ನು ತ್ವರಿತದಲ್ಲಿ ಒಂಟೆಯ ಸರದಾರನೊಂದಿಗೆ ಕಳುಹಿಸಲಾ ಗಿತ್ತು. ಅಲ್ಲದೆ ಪತ್ರದಲ್ಲಿ ಆದಿಲ್‌ಷಹನು ವಿಜಯನಗರಕ್ಕೆ ಬರಲು ಸಮ್ಮ ತಿಸದೆ ಬೇರೆಡೆಯಲ್ಲಿ ಕಾಣಲು ಆಶಿಸಿದ್ದನು. ಇದರ ಅರ್ಥವೇನು ? ಆ ಪತ್ರದಂತೆ ರಾಯನು ನಡೆದುಕೊಂಡರೆ ಅವನು ಯಾವುದೊ ಅಪಾಯಕ್ಕೆ ಒಳಗಾಗಬಹುದೆಂದು ಹೆದರಿಕೆಯುಂಟಾಯಿತು. ಆ ಪತ್ರದ ಹಿನ್ನೆಲೆಯ ನ್ನರಿತು ಬರಲು ಕೂಡಲೇ ಗೂಢಚಾರರಟ್ಟಿದನು.

ಗೂಢಚಾರರು ಸಂಗ್ರಹಿಸಿಕೊಂಡು ಬಂದಿದ್ದ ವರ್ತಮಾನ ತಿಮ್ಮರಸನ ಊಹೆಯನ್ನು ನಿಜಗೊಳಿಸಿತ್ತು. ಸುಲ್ತಾನನು ರಾಯನನ್ನು ಉಪಾಯವಾಗಿ ಯಾವುದೋ ತಂತ್ರದಲ್ಲಿ ಸಿಕ್ಕಿಸಲು ಪ್ರಯತ್ನಿಸಿರುವನೆಂದೂ, ಅಂತಲೇ ರಾಯಭಾರದ ಕಪಟ ನಾಟಕವಾಡುತ್ತಿರುವನೆಂದೂ ತಿಳಿಯಿತು. ಸುಲ್ತಾ ನನ ತಂತ್ರಗಳ ಬಗ್ಗೆ ವಿವರಗಳು ದೊರೆಯದೇ ಹೋದರೂ, ಅವನಲ್ಲಿ ದುರದ್ದೇಶವಿದೆ ಎಂದು ಸಿದ್ಧಾಂತವಾಗಿತ್ತು. ಅವರ ತಂತ್ರಕ್ಕೆ ಪ್ರತಿ ತಂತ್ರ ವನ್ನು ನಡೆಸಿ ಅವರ ದುರುದ್ದೇಶವನ್ನು ಬಯಲಿಗೆಳೆದು ತಕ್ಕ ರೀತಿಯಲ್ಲಿ ಶಾಸ್ತಿ ಮಾಡಬೇಕೆಂದು ತಿಮ್ಮರಸನು ನಿಶ್ಚಯಿಸಿಕೊಂಡನು. ಈ ಸಂಗತಿ ಯನ್ನು ರಾಯನ ಕಿವಿಗೂ ಹಾಕಿ ಮುನ್ನೆಚ್ಚರಿಕೆ ಕೊಟ್ಟು ಅನಂತರ ತಾನು ಹೇಗೆ ನಡೆದುಕೊಂಡರೆ ಅವರ ವಿದ್ರೋಹವನ್ನು ಬಯಲು ಮಾಡಬಹು ದೆಂದು ಪರ್ಯಾಲೋಚಿಸಿ ಒಂದು ನಿರ್ಧಾರಕ್ಕೆ ಬಂದು ಮುಟ್ಟಿದನು.

ಅದರಂತೆ ಕೃಷ್ಣದೇವರಾಯನು ಬಿಜಾಪುರದ ಸುಲ್ತಾನನನು ತನ್ನ ಸಾಮ್ರಾಜ್ಯದ ಗಡಿ ಪ್ರದೇಶದಲ್ಲಿ ಬಂದು ಭೇಟಿ ಮಾಡಬೇಕೆಂದೂ, ಅಲ್ಲಿಗೆ

ತನ್ನ ಪರಿವಾರದೊಂದಿಗೆ ಬಂದಿರಬೇಕೆಂದೂ ತಿಳಿಸಿ ಭೇಟಿ ಕೊಡುವ ದಿನವನ್ನೂ ಬರೆಸಿ ಕಳುಹಿಸಿದನು.

ನಿಶ್ಚಿತ ವೇಳೆಯಲ್ಲಿ ಬಿಜಾಪುರದ ಸುಲ್ತಾನನನ್ನು ಭೇಟಿ ಮಾಡಲು ರಾಯನು ಸೈನ್ಯ ಸಮೇತ ಹೊರಟನು. ಸೈನ್ಯವನ್ನು ಬೇಕೆಂದೇ ಎರಡು ಭಾಗ ಮಾಡಿ ಒಂದು ಭಾಗವನ್ನು ತನ್ನೊಡನೆ ತೆಗೆದುಕೊಂಡು ಹೊರಟನು. ಇನ್ನೊಂದು ಭಾಗವು ತಿಮ್ಮರಸನನ್ನು ಹಿಂಬಾಲಿಸಿಕೊಂಡು ಶತ್ರು ಆಕಸ್ಮಿಕವಾಗಿ ಮೇಲೆ ಬಿದ್ದರೆ ಕೂಡಿಕೊಳ್ಳಲು ಸ್ವಲ್ಪ ದೂರದಲ್ಲಿ ಬರುತ್ತಿತ್ತು.

ಹೀಗೆ ಹೊರಟ ರಾಯನ ಸೈನ್ಯವು ನಿಶ್ಚಿತವೇಳೆಗೆ ಗಡಿಪ್ರದೇಶದ ಪ್ರಮುಖದುರ್ಗವಾಗಿದ್ದ ಮುದ್ಗಲ್ಲಿಗೆ ಸಮೀಪವಾಗಿ ಬಂದು ಬೀಡು ಬಿಟ್ಟಿತು. ರಾಯನು ತಾನು ಬಂದಿರುವ ಸುದ್ದಿಯನ್ನು ಗಡಿಯ ಇನ್ನೊಂದು ಭಾಗದಲ್ಲಿದ್ದ ಅದಿಲ್‌ಷಹನಿಗೆ ತಿಳಿಸಲು ದೂತರನ್ನಟ್ಟಿದನು. ದೂತರು ತರಲಿರುವ ಪ್ರತ್ಯುತ್ತರಕ್ಕಾಗಿ ಕಾದು ಕುಳಿತನು.

ಇತ್ತ ರಾಯನ ಮೈಗಾವಲಿನ ಪಡೆಯೊಂದಿಗೆ ಬಂದಿದ್ದ ಗೋವಿಂದ ರಾಜನು ಸುಮ್ಮನೆ ಕುಳಿತುಕೊಳ್ಳದೆ, ವಿಶ್ರಾಂತಿಯಲ್ಲಿ ಮೈಮರೆಯದೆ, ಶತ್ರುಗಳ ಚಲನವಲನಗಳನ್ನರಿಯಲು ತನ್ನ ಆಪ್ತರಾದ ಕೆಲವರೊಂದಿಗೆ ಹೊರಟನು.

ಗೋವಿಂದರಾಜನು ಗಡಿಯಾಚೆ ರಾಯನನ್ನು ಸ್ವಾಗತಿಸಲು ಸಿದ್ಧವಾಗಿ ಕುಳಿತಿದ್ದ ಬಿಜಾಪುರದ ಸುಲ್ತಾನನ ಕಾರ್ಯಭಾರವನ್ನು ತಿಳಿಯಲು ದೊಂಬರಂತೆ ವೇಷಕಟ್ಟಿ, ಸಂಗಡಿಗರನ್ನು ವೃತ್ತಿಬಾಂಧವರನ್ನಾಗಿ ಮಾಡಿಕೊಂಡು, ವೃತ್ತಿಗೆ ತಕ್ಕ ಸಲಕರಣೆಯೊಂದಿಗೆ ಹೊರಟು ಸುಲ್ತಾನನ್ನು ಹಾಕಿದ್ದ ಪಾಳೆಯದ ಬಳಿ ಬಂದಿಳಿದನು.

ಗೋವಿಂದರಾಜನ ಸಂಗಡಿಗರು, ಗೆಣೆಗಂಬದ ಮೇಲೆ ಸಾಹಸ ಪ್ರದರ್ಶನ ಮಾಡಲು ವೃತ್ತಿಯಲ್ಲಿ ಪ್ರವೀಣರಾದ ದೊಂಬರನ್ನು ಸಂಗಡಲೇ ಕರೆತಂದಿದ್ದರು. ಅವನು ಸುಲ್ತಾನನ ಶಿಬಿರದ ಸಮೀಪದಲ್ಲಿ ಗೆಣೆಗಂಬವನ್ನು ನೆಟ್ಟು ತನ್ನ ಡೋಲಿನ ಮೇಲೆ ಕೈಯಾಡಿಸಿ ಆಟದ ಆಹ್ವಾನವನ್ನು ಕೊಟ್ಟೊಡನೆಯೇ ಬಳಿಯಲ್ಲೇ ಶಿಬಿರದ ಕೆಲಸದಲ್ಲಿದ್ದ ಅನೇಕ ಕೆಲಸಗಾರರೂ, ಸೈನಿಕರೂಗುಂಪು ಕಟ್ಟಿಕೊಂಡು ದೊಂಬರಾಟ ನೋಡಲು ನೆರೆದರು.

ಆ ಪ್ರದೇಶದಲ್ಲಿ ಒಂದು ಭವ್ಯವಾದ ಅರಮನೆಯ ಕೆಲಸ ನಡೆದಿತ್ತು. ಅದನ್ನು ಸಾಮ್ರಾಟರ ವೈಭವಕ್ಕೆ ತಕ್ಕ ರೀತಿಯಲ್ಲಿ ಸಿಂಗರಿಸಲಾಗಿತ್ತು. ರಾಜಸೌಧದ ಎಲ್ಲ ಅಲಂಕಾರವೂ ಮುಗಿಯುತ್ತಾ ಬಂದಿದ್ದವು. ಮರುದಿನ ಅಲ್ಲಿ ಸಾಮ್ರಾಟ್ ಕೃಷ್ಣದೇವರಾಯನಿಗೆ ಆತಿಥ್ಯ ಕೊಡಬೇಕೆಂದು ಆದಿಲ್ ಷಹನು ನಿರ್ಧರಿಸಿದ್ದನು. ಅಂತಲೇ ಆದಿಲ್‌ಷಹನು ಕಟ್ಟಡದ ವ್ಯವಸ್ಥೆ ಸೌಕರ್ಯಗಳನ್ನು ಪರಿಶೀಲಿಸಲು ಬರುವವನಿದ್ದನು. ಅದಕ್ಕಾಗಿ ಕೆಲಸಗಾರರು ಬಹಳ ಗಡಿಬಿಡಿಯಲ್ಲಿದ್ದರು.

ಇಷ್ಟಾದರೂ ದೊಂಬರಾಟವನ್ನು ನೋಡಲು ಕೆಲಸಗಾರರು ಮೇಸ್ತ್ರಿಗಳ ಕಣ್ಣು ತಪ್ಪಿಸಿಕೊಂಡು ಬಂದಿದ್ದರು. ಬೇರೆ ಕೆಲಸವಿಲ್ಲದ ಸೈನಿಕರು ಗುಂಪುಗುಂಪಾಗಿ ನಿಂತು ಆಕಸ್ಮಿಕವಾಗಿ ದೊರೆತ ಈ ಮನರಂಜನೆಯನ್ನು ಆಸ್ವಾದಿಸುತ್ತಿದ್ದರು.

ದೊಂಬರಾಟ ತುಂಬ ಸೊಗಸಾಗಿ ನಡೆಯಿತು. ಇದು ಎಲ್ಲರ ಮನಸ್ಸಿಗೂ ರಂಜಿಸಿತು. ಅವರಾರೂ ದೊಂಬರ ವೇಷದಲ್ಲಿದ್ದ ಗೋವಿಂದರಾಜನನ್ನಾಗಲೀ ಅವರ ಕಡೆಯವರನ್ನಾಗಲೀ ಗುರುತಿಸಲು ಸಮರ್ಥರಾಗಲಿಲ್ಲ. ಗೋವಿಂದರಾಜನು ಹಣೆಗೆ ಒಂದು ಹಿತ್ತಾಳೆಯ ಪಟ್ಟಿಯನ್ನು ಹಾಕಿ, ತಲೆಗೂದಲನ್ನು ಶಿಸ್ತುಪಡಿಸಿ ಮೈಗೆಲ್ಲಾ ಬೂದಿಯನ್ನು ಬಳಿದುಕೊಂಡಿದ್ದನು. ಕೈಕಾಲುಗಳಿಗೆ ದೊಂಬರು ಹಾಕಿಕೊಳ್ಳುವಂತೆ ಬೆಳ್ಳಿಯ ಗೊಲಸುಗಳನ್ನು ಧರಿಸಿದ್ದನು. ನೋಟಕ್ಕೆ ಅವನು ಹುಟ್ಟು ದೊಂಬರಂತೆಯೇ ಕಾಣುತ್ತಿದ್ದನು. ಹುಡುಗಿಯ ತಂದೆ ಡೋಲು ಬಡಿದರೆ ಗೋವಿಂದರಾಜ ಶಿಳ್ಳು ಹಾಕುತ್ತಿದ್ದನು. ದೊಂಬರ ಹುಡುಗಿ ಗೆಣೆಗಂಬದ ಮೇಲೆ ಸಾಹಸ ಪ್ರದರ್ಶನ ಮಾಡುತ್ತಿದ್ದಳು. ಗೋವಿಂದರಾಜನ ಗೆಳೆಯರು ಅನೇಕ ವ್ಯಾಯಾಮಗಳನ್ನೂ ಕೈಚಳಕಗಳನ್ನೂ ಪ್ರದರ್ಶಿಸಿ ಎಲ್ಲರ ಮೆಚ್ಚಿಗೆಯನ್ನು ಪಡೆದರು.

ದೊಂಬರ ಆಟ ಮುಗಿದ ಮೇಲೆ ಕೆಲಸಗಾರರು ತಮ್ಮ ಕೆಲಸ ಕಾರ್ಯಗಳಿಗೆ ಹೊರಟು ಹೋದರು. ಸೈನಿಕರು ತಮ್ಮ ಶಿಬಿರಗಳಿಗೆ ಚದುರಿದರು. ಆದರೂ ಕೆಲವು ಸೈನಿಕರು ಆ ಹುಡುಗಿಯ ಚೆಲುವಿಗೆ ಮನಸೋತು ಅಲ್ಲಲ್ಲೇ ತಿರುಗುತ್ತಿದ್ದರು. ಅವರು ಹುಡುಗಿಯ ತಂದೆಯ ಸ್ನೇಹಮಾಡಿಕೊಳ್ಳಲು ಪ್ರಯತ್ನಿಸುತ್ತಿದ್ದರು. ಅಂತಹ ಸೈನಿಕರಿಂದ ಗೋವಿಂದರಾಜನು ಅನೇಕ

ಉಪಯುಕ್ತ ಸಂಗತಿಗಳನ್ನು ಸಂಗ್ರಹಿಸಿಕೊಂಡನು.

ಮಧ್ಯಾಹ್ನ ಹೊತ್ತು ನೆತ್ತಿಗೇರುತ್ತಾ ಬಂತು. ದೊಂಬರ ಸಂಸಾರ ಅಡಿಗೆಯ ಪ್ರಯತ್ನದಲ್ಲಿ ತೊಡಗಿತು. ದೊಂಬರ ಹುಡುಗಿಯೇ ಅಡಿಗೆ ಮಾಡಲು ಕುಳಿತಳು. ಅವಳಿಗೆ ಬೇಕಾಗುವ ಪದಾರ್ಥಗಳನ್ನು ಒದಗಿಸುವ ಕೆಲಸದಲ್ಲಿ ಗೋವಿಂದರಾಜ ಮತ್ತು ಅವನ ಸೈನಿಕರು ತೊಡಗಿದರು. ಅದೇ ನೆವದಲ್ಲಿ ಅವರು ಸೈನಿಕ ಶಿಬಿರದಲ್ಲೆಲ್ಲಾ ಸಂಚರಿಸಿ ತಮಗೆ ಬೇಕಾದ ಸಂಗತಿಗಳನ್ನು ಉಪಾಯಾಂತರದಲ್ಲಿ ಸಂಗ್ರಹಿಸಿಕೊಂಡರು. ಇತ್ತ ದೊಂಬರ ಹುಡುಗಿ ಅಡಿಗೆ ಕೆಲಸದಲ್ಲಿ ತೊಡಗಿರುವಂತೆಯೇ ಅತ್ತ ಗೋವಿಂದರಾಜನು ತನ್ನದೇ ಆದ ಕೆಲಸದಲ್ಲಿ ತೊಡಗಿದ್ದನು.

ಸೈನಿಕರ ಮಾತುಗಳಿಂದ ಸುಲ್ತಾನನು ಸಾಮ್ರಾಟ್ ಕೃಷ್ಣದೇವರಾಯನನ್ನು ಹೊಸದಾಗಿ ಕಟ್ಟಲಾಗಿದ್ದ ಈ ಹೊಸ ಬಿಡದಿ ಮನೆಯಲ್ಲಿ ಆತಿಥ್ಯ ಕೊಡುವುದರಲ್ಲಿ ಯಾವುದೊ ಮೋಸವಿರುವಂತೆ ತಿಳಿಯಿತು. ಅದರ ಮೂಲವನ್ನು ಶೋಧಿಸುವ ಕಾರ್ಯದಲ್ಲಿ ಅವನು ತೊಡಗಿದ್ದನು.

ಗೋವಿಂದರಾಜನು ಅಲ್ಲಿ ಇಲ್ಲಿ ಸುತ್ತುತ್ತಾ ಹೊಸದಾಗಿ ಕಟ್ಟಲಾಗಿದ್ದ ಅರಮನೆಯ ಒಳಗೆ ಬಂದು ಅಲ್ಲಿನ ಕೆಲಸ ಕಾರ್ಯಗಳನ್ನು, ಕಲಾಕೃತಿಯ ವೈಭವಗಳನ್ನೂ ನೋಡುವವನಂತೆ ನಟಿಸಿ ಅಲ್ಲೆಲ್ಲಾ ಸುತ್ತಾಡಿದನು. ಅವನನ್ನು ಕೆಲಸಗಾರರು ದೊಂಬರವನೆಂದು ತಿಳಿದು ಅವನ ಬಗ್ಗೆ ಹೆಚ್ಚು ಆಸಕ್ತಿ ವಹಿಸಲಿಲ್ಲ. ಆದರೂ ಅಲ್ಲಿನ ಕೆಲಸಗಾರರ ಮುಖಂಡನು ಸುಲ್ತಾನನು ಅಲ್ಲಿಗೆ ಬರಲಿರುವನೆಂದೂ, ಬೇಗ ಆ ಪ್ರದೇಶದಿಂದ ಹೊರಟು ಹೋಗಬೇಕೆಂದು ಹೇಳಿ ಅವನನ್ನು ಅಲ್ಲಿಂದ ಕಳುಹಿಸಲು ನೋಡಿದರು. ಅವರಿಗೆ ಯಾವುದೊ ಭೀತಿ ಇರುವಂತೆ ಕಂಡಿತು. ಅದು ಏನೆಂದು ತಿಳಿಯಲು ಗೋವಿಂದರಾಜನಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ಬೇಗ ಹೊರಟು ಹೋಗುವುದಾಗಿ ತಿಳಿಸಿ ಕೂಲಿಕಾರರ ಕಣ್ಣು ತಪ್ಪಿಸಿಕೊಂಡು ಅಲ್ಲಿ ಇಲ್ಲಿ ಅಲೆದು ಕಡೆಗೆ ಸಾಮ್ರಾಟರ ಶಯನಗಾರಕ್ಕೆಂದು ಸಿದ್ಧಪಡಿಸಿದ್ದ ಭಾಗಕ್ಕೆ ಬಂದು ಸೇರಿದನು. ಅಲ್ಲಿ ಹೆಚ್ಚು ಜನ ಕೆಲಸಗಾರರಿರಲಿಲ್ಲ. ಇದ್ದ ಒಬ್ಬಿಬ್ಬರು ತಮ್ಮ ಕೆಲಸಗಳಲ್ಲಿ ಮಗ್ನರಾಗಿದ್ದರು. ಗೋವಿಂದರಾಜನು ಅವರಿಗೆ ಸುಳಿವು ಕೊಡದಂತೆ ನೆಲವನ್ನು ಸೂಕ್ಷ್ಮವಾಗಿ ಪರಿಶೀಲಿಸಿಕೊಂಡು

ಬಂದಾಗ ನೆಲದ ಒಂದು ಭಾಗದಲ್ಲಿ ಹುಸಿ ಪ್ರದೇಶವಿರುವುದು ಗೋಚರಿಸಿತು. ಅದಕ್ಕೆ ಒಂದು ಪ್ರವೇಶವಿರುವುದು ಕಂಡಿತು. ಅವನು ಹಿಂದು ಮುಂದು ನೋಡದೆ ಧೈರ್ಯಮಾಡಿ ಸಣ್ಣ ಬಾಗಿಲಿನಂತಿದ್ದ ಆ ಸುರಂಗ ದ್ವಾರವನ್ನು ಪ್ರವೇಶಮಾಡಿದನು. ಅದು ಅವನನ್ನು ಒಂದು ನೆಲಮನೆಗೆ ತಂದು ಬಿಟ್ಟಿತು. ಆ ನೆಲಮನೆಯು ತುಂಬ ಮದ್ದು ಗುಂಡುಗಳನ್ನೂ ಅಸ್ಫೋಟಕ ಸಾಮಗ್ರಿಗಳನ್ನೂ ತುಂಬಿಡಲಾಗಿತ್ತು. ಅದನ್ನು ನೋಡುತ್ತಲೇ ಸುಲ್ತಾನನ ಆತಿಥ್ಯದ ಗುಟ್ಟು ಏನೆಂದು ಗೋವಿಂದರಾಜನಿಗೆ ತಿಳಿದು ಹೋಯಿತು. ಆ ನೆಲಮನೆಯನ್ನು ಶೋಧಿಸುತ್ತಾ ಹೊರಟಾಗ ಒಂದು ಸಣ್ಣ ಬಾಗಿಲು ಕಂಡಿತು. ಅದರ ಮೂಲಕ ಹಾದು ಮತ್ತೊಂದು ಸುರಂಗ ಮಾರ್ಗಕ್ಕೆ ಬಂದನು. ಅದನ್ನು ಹೊಸದಾಗಿ ಮಾಡಿದ್ದರಿಂದ ನೆಲವಿನ್ನೂ ಹಸಿಯಾಗಿಯೇ ಉಳಿದಿತ್ತು ಸುರಂಗದ ಉದ್ದಕ್ಕೂ ಮದ್ದು ಗುಂಡುಗಳನ್ನು ಇಟ್ಟಿರುವುದು ಗೋಚರಿಸಿತು. ಅಲ್ಲಿ ಸಾಕಷ್ಟು ಗಾಳಿ ಬೆಳಕುಗಳಿಲ್ಲದೆ ಇದ್ದುದರಿಂದ ಮುಂದುವರೆಯಲು ಬಹಳ ಕಷ್ಟವಾಯಿತು. ಹೀಗೆ ಅವನು ಬಹುದೂರ ಬಂದ ಮೇಲೆ ಹೊರಬಾಗಿಲೊಂದು ಕಾಣಿಸಿತು. ಆ ಬಾಗಿಲನ್ನು ಒಬ್ಬ ಸೈನಿಕನು ಕಾಯುತ್ತಿರುವಂತೆ ಕಂಡಿತು. ಕಲ್ಲು ಬಂಡೆಗಳ ನಡುವೆ ಗವಿಯಂತೆ ಕಾಣುವ ಆ ಸುರಂಗದಿಂದ ಹೇಗೆ ತಪ್ಪಿಸಿಕೊಂಡು ಹೋಗುವುದು ಎಂದು ಯೋಚಿಸುತ್ತಿರುವಾಗಲೇ ಸುರಂಗದಲ್ಲಿ ಶಬ್ದವಾಯಿತು. ಅದೇನೆಂದು ನೋಡಲು ಆ ಕಾವಲುಗಾರನು ಒಳಗೆ ಬಂದ ಕೂಡಲೇ ಅದೇ ಸಮಯಕ್ಕಾಗಿ ಕಾದಿದ್ದ ಗೋವಿಂದರಾಜನು ಅವನಮೇಲೆ ಬಿದ್ದು ನಿಶ್ಶಸ್ತ್ರಗೊಳಿಸಿ, ಬಾಯಿಗೆ ಬಟ್ಟೆ ತುರುಕಿ, ಕೈಕಾಲುಗಳನ್ನು ಕಟ್ಟಿ ಅವನನ್ನು ಸುರಂಗದ ಒಂದೆಡೆ ಹಾಕಿ, ಯಾರಿಗೂ ಕಾಣದಂತೆ ಸುರಂಗದಿಂದ ತಪ್ಪಿಸಿಕೊಂಡನು.

ಈ ಎಲ್ಲ ಸಂಗತಿ ಕೂಡಲೇ ತಿಮ್ಮರಸನ ಮೂಲಕ ರಾಯನಿಗೆ ವರದಿಯಾಯಿತು.

ಪರಸ್ಪರ ಭೇಟಿಗೆಂದು ಗೊತ್ತಾಗಿದ್ದ ದಿನ ನಿರೀಕ್ಷಿಸಿದಂತೆ, ಬಿಜಾಪುರದ ಸುಲ್ತಾನನು ಸ್ವತಃ ರಾಯನನ್ನು ಆಹ್ವಾನಿಸಲು ಬಾರದೆ ರಾಯಭಾರಿ ಅಸದ್‌ಖಾನನನ್ನು ಕಳುಹಿಸಿದನು. ಅಸದ್‌ಖಾನನು ರಾಯನಿಗೆ

ಕುರ್ನಿಸಾತ್ ಮಾಡಿ ಸುಲ್ತಾನನು ರಾಯನ ಆಗಮನಕ್ಕಾಗಿ ತನ್ನ ಡೇರೆಯಲ್ಲಿ ಕಾದಿರುವುದಾಗಿಯೂ, ಅವನ ಆತಿಥ್ಯವನ್ನು ಸ್ವೀಕರಿಸಿದ ನಂತರ ರಾಯನ ಒಡ್ಡೋಲಗಕ್ಕೆ ಸುಲ್ತಾನನು ಬರುವುದಾಗಿಯೂ ತಿಳಿಸಿದನು. ಸುಲ್ತಾನನ ವಿಶ್ವಾಸದ ಕಾಣಿಕೆಯಾಗಿ, ಅನೇಕ ಜಾತ್ಯಶ್ವಗಳನ್ನೂ, ಆನೆಗಳನ್ನೂ, ಗೋಲ್ಕೊಂಡದ ವಜ್ರದ ಗಣಿಗಳಿಂದ ತೆಗೆದ ಅತ್ಯಮೂಲ್ಯವಾದ ವಜ್ರಗಳಿಂದ ಅಲಂಕರಿಸಿದ ಕಠಾರಿಯೊಂದನ್ನೂ, ಪರ್ಶಿಯಾದ ಸುಗಂಧ ದ್ರವ್ಯಗಳನ್ನೂ ರಾಯನಿಗೆ ಅರ್ಪಿಸಿದನು. ರಾಯನು ಈ ಸ್ನೇಹದ ಕಾಣಿಕೆಯನ್ನು ಸಂತೋಷದಿಂದ ಸ್ವೀಕರಿಸಿ ಅದಿಲ್‌ಷಹನ ಪ್ರೀತಿ ವಿಶ್ವಾಸಗಳಿಗೆ ತಾನು ಋಣಿಯಾಗಿರುವುದಾಗಿ ತಿಳಿಸಿದನು. ಸುಲ್ತಾನನ ಆತಿಥ್ಯವನ್ನು ಸ್ವೀಕರಿಸಲು ತಾನು ಆತುರನಾಗಿರವುದಾಗಿಯೂ, ಮೊದಲು ಸುಲ್ತಾನರೇ ಬಂದು ತಮ್ಮ ಆತಿಥ್ಯವನ್ನು ಸ್ವೀಕರಿಸಬೇಕೆಂದು ತಮ್ಮ ಅಪೇಕ್ಷೆ ಇರುವುದಾಗಿಯೂ, ತಮ್ಮ ಆಮಂತ್ರಣವನ್ನು ಸುಲ್ತಾನನು ತಿರಸ್ಕರಿಸಬಾರದೆಂದೂ ವಿನಯವಾಗಿ ಬಿನ್ನವಿಸಿದನು.

ಈ ಎಲ್ಲ ಸಂಗತಿಯನ್ನು ಕೇಳಿ ಅದಿಲ್‌ಷಹನಿಗೆ ಯೋಚನೆಗಿಟ್ಟುಕೊಂಡಿತು. ತನ್ನ ಸಂಚು ರಾಯನಿಗೆ ತಿಳಿದು ಹೋಗಿದೆಯೇ? ಎಂದು ಅವನು ಹೆದರಿದನು. ರಾಯನು ತನ್ನಲ್ಲಿಗೆ ಮೊದಲುಬಾರದೆ ತನ್ನನ್ನೇ ತನ್ನ ಶಿಬಿರಕ್ಕೆ ಆಹ್ವಾನಿಸುತ್ತಿರುವುದನ್ನು ನೋಡಿದರೆ ತನ್ನಂತೆಯೇ ರಾಯನೂ ತನ್ನನ್ನು ಕೈಸೆರೆಹಿಡಿಯಲು ಆಟ ಹೂಡಿರಬಹುದೆ? ಎಂದುಕೊಂಡನು. ಸುಲ್ತಾನನಿಗೆ ರಾಯನ ಆಮಂತ್ರಣದಂತೆ ಅವನ ಶಿಬಿರಕ್ಕೆ ಹೋಗಲು ಧೈರ್ಯವಾಗಲಿಲ್ಲ. ಮೊದಲು ರಾಯನ ಸಂಚು ಏನೆಂದು ತಿಳಿದುಬರಲು ಅಸದ್‌ಖಾನನನ್ನು ಕಳುಹಿಸಿಕೊಟ್ಟನು

ಅಸದ್‌ಖಾನನು ರಾಯನ ಸಮ್ಮುಖದಲ್ಲಿ ಬಂದು ರಾಯನ ಕೋರಿಕೆಯಂತೆ, ಆತಿಥ್ಯವನ್ನು ಸ್ವೀಕರಿಸಲು ಸುಲ್ತಾನನು ಬರುತ್ತಿರುವುದಾಗಿ ತಿಳಿಸಿದನು. ಈ ಅವಧಿಯಲ್ಲಿ ಅಲ್ಲಿ ಇಲ್ಲಿ ವಿಚಾರಿಸಿ ರಾಯನಿಗೆ ಸುಲ್ತಾನನ ವಿದ್ರೋಹ ತಿಳಿದಿದೆ ಎಂಬ ವಿಷಯವನ್ನು ಹೇಗೊ ಪತ್ತೆಮಾಡಿದನು. ಕೊಂಚಕಾಲದ ಮೇಲೆ ಅವನು ಸುಲ್ತಾನನೇಕೊ, ಬರಲು ತಡ ಮಾಡುತ್ತಿರುವನೆಂದೂ, ತಾನೇ ಹೋಗಿ ಅವನನ್ನು ಕರೆತರುವುದಾಗಿ ರಾಯನು

ಸಮ್ಮುಖದಿಂದ ತಪ್ಪಿಸಿಕೊಂಡು ಹೊರಟುಹೋದನು.

ವಿಜಯನಗರದ ಗಡಿಯನ್ನು ದಾಟುತ್ತಲೇ, ಸುಲ್ತಾನನ ಬಳಿಗೆ ಓಡಿ ಹೋಗಿ ರಾಯನು ಸುಲ್ತಾನನನ್ನು ಹಿಡಿಯಲು ಸಂಚುಮಾಡಿರುವನೆಂದೂ, ಅಲ್ಲೇ ಇದ್ದರೆ ಪ್ರಾಣಾಪಾಯವೆಂದೂ, ಕೂಡಲೇ ಸೈನ್ಯಸಮೇತ ಬಿಜಾಪುರಕ್ಕೆ ಹೊರಡಬೇಕೆಂದೂ ಸಲಹೆಮಾಡಿದನು. ಈ ಮಾತನ್ನು ನಂಬಿ ಸುಲ್ತಾನನು ಸೈನ್ಯ ಸಮೇತ ಬಿಜಾಪುರದ ಕಡಗೆ ಹೊರಟನು. ಹೊರಡುವಾಗ ತನ್ನ ಸಂಚು ಬಯಲಾಗಬಾರದೆಂದು, ರಾಯನಿಗೆಂದು ನಿರ್ಮಿಸಿದ್ದ ಅರಮನೆಗೆ ಬೆಂಕಿಯಿಟ್ಟು ಆಸ್ಫೋಟನೆ ಮಾಡಿ ಹೊರಟು ಹೋದನು.

ಒಮ್ಮೆಲೆ ಕೇಳಿಸಿದ ಆಸ್ಫೋಟನೆಯ ಶಬ್ದದಿಂದ ನಡೆದಿರಬಹುದಾದ ಸಂಗತಿಯನ್ನು ಊಹಿಸಿ ತಿಳಿದು ರಾಯನು ಸೈನ್ಯ ಸಮೇತ ಸುಲ್ತಾನನ ಶಿಬಿರದ ಮೇಲೆ ಬೀಳಲು ಬರುವ ವೇಳೆಗೆ ಸುಲ್ತಾನನು ತಪ್ಪಿಸಿಕೊಂಡು ಹೊರಟು ಹೋಗಿದ್ದನು. ರಾಯನಿಗೆ ಆ ಶಿಬಿರದಲ್ಲಿ ಬೆಲೆ ಬಾಳುವ ಅನೇಕ ವಸ್ತುಗಳು ದೊರಕಿದವು. ಶಿಬಿರದ ಎಲ್ಲ ಸೈನಿಕರು ತಮ್ಮ ಸುಲ್ತಾನನನ್ನು ಅನುಸರಿಸಿ ಓಡಿಹೋಗಿದ್ದರು !

ರಾಯನಿಗೆ ಮತ್ತೆ ನಿರಾಶೆಯೇ ಆಯಿತು. ಬಿಜಾಪುರದ ಸುಲ್ತಾನನು ರಾಯನ ಕೈಗೆ ಸಿಕ್ಕದೆ ತಪ್ಪಿಸಿಕೊಂಡು ಹೋದುದು ರಾಯನಿಗೆ ಬಹಳ ವ್ಯಥೆಯಾಯಿತು. ಆದರೆ ತಿಮ್ಮರಸ ಗೋವಿಂದರಾಜರಿಗೆ ರಾಯನು ಆದಿಲ್‌ಷಹನ ಸಂಚಿನಿಂದ ಪಾರದನಲ್ಲ ಎಂದು ಸಂತೋಷವೇ ಆಗಿತ್ತು. ರಾಯನೂ ಸಹ ತನ್ನ ಪ್ರಾಣವನ್ನುಳಿಸಿದ ಗೋವಿಂದರಾಜನನ್ನು ವಿರೋಚಿತನಾಗಿ ಸತ್ಕರಿಸಿದನು.

ರಾಯನು ಸುಲ್ತಾನನ ವಿದ್ರೋಹಕ್ಕೆ ತಕ್ಕ ಶಿಕ್ಷೆಯನ್ನು ವಿಧಿಸಲು ನಿರ್ಧರಿಸಿ ಬಿಜಾಪುರದ ಮೇಲೆ ಧಾಳಿಯಿಡಲು ನಿಶ್ಚಯಿಸಿದನು.

ರಾಯನ ಪ್ರಚಂಡ ಸೇನೆ ಬಿಜಾಪುರದ ಕಡೆಗೆ ಹೊರಟು, ಒಂದೆರಡು ತಿಂಗಳು ಸಂತತವಾಗಿ ಪ್ರಯಾಣಮಾಡಿದ ಮೇಲೆ ಬಿಜಾಪುರದ ಬಳಿಗೆ ಬಂದು ಬೀಡುಬಿಟ್ಟಿತು. ಇಷ್ಟಾದರೂ ಸುಲ್ತಾನನ ಸೈನ್ಯ ಎದುರಿಸಲು ಬಂದಿರಲಿಲ್ಲ. ರಾಜಧಾನಿಯ ಬಳಿಗೆ ಬಂದು ಬೀಡು ಬಿಟ್ಟರೂ ರಾಜಧಾನಿಯಿಂದ ಯಾವ ಪ್ರತಿಭಟನೆಯೂ ಬಾರದಿರುವುದನ್ನು ನೋಡಿ ರಾಯನಿಗೆ ಅಚ್ಚರಿ

ಯಾಯಿತು. ಸುದ್ದಿಯನ್ನು ಸಂಗ್ರಹಿಸಿಕೊಂಡು ಬರಲು ಹೊರಟ ಗೂಢ ಚಾರರು ಎಲ್ಲ ವಿಷಯಗಳನ್ನೂ ಸಂಗ್ರಹಿಸಿಕೊಂಡು ಬಂದು ರಾಯನಿಗೆ ವರದಿ ಮಾಡಿದರು. ಗೂಢಚಾರರು ಸಂಗ್ರಹಿಸಿಕೊಂಡು ಬಂದ ಸುದ್ದಿ ಯನ್ನು ನೋಡಿ ರಾಯನಿಗೆ ವಿಸ್ಮಯವಾಯಿತು.

ಬಿಜಾಪುರದ ಸುಲ್ತಾನ್ ಅದಿಲ್‌ಷಹನು ರಾಯನು ಬಿಜಾಪುರದ ಮೇಲೆ ದಂಡೆತ್ತಿ ಬರುತ್ತಿರುವ ಸಂಗತಿಯನ್ನು ತಿಳಿಯುತ್ತಲೇ ರಾಯನ ಸೈನ್ಯಕ್ಕೆ ಹೆದರಿ, ರಾಜಧಾನಿಯನ್ನು ತ್ಯಜಿಸಿ, ಹೇಡಿಯಂತೆ ತಲೆ ತಪ್ಪಿಸಿ ಕೊಂಡು ಓಡಿಹೋಗಿದ್ದನು. ರಾಜಧಾನಿ ದಿಕ್ಕಿಲ್ಲದೆ ಅನಾಥ ಶಿಶುವಿನಂತೆ ಕಂಗಲಾಗಿತ್ತು. ಈ ಸುದ್ದಿಯನ್ನು ಕೇಳಿ ರಾಯನು ಹಿಗ್ಗಿದನು.

ರಾಯನು ಮೊದಲು ಬಿಜಾಪುರವನ್ನು ಪ್ರವೇಶಿಸಿ ಅದನ್ನು ಸ್ವಾಧೀ ನಕ್ಕೆ ತೆಗೆದುಕೊಳ್ಳಲು ಬೀಡು ಕದಲಿಸಿ ಸೈನ್ಯ ಸಮೇತ ಹೊರಟನು.

ಬಿಜಾಪುರದ ಪುರಜನರು ಯುದ್ಧಮಾಡದೆ ಯಾವ ಪ್ರತಿಭಟನೆ ಯನ್ನೂ ವ್ಯಕ್ತಪಡಿಸದೆ ರಾಯನನ್ನು ಸ್ವಾಗತಿಸಿದರು. ಅವರಿಗೆ ಹೇಡಿ ಯಂತೆ ತಮ್ಮನ್ನು ತೊರೆದು ಓಡಿಹೋದ ಸುಲ್ತಾನನಿಗಿಂತಲೂ ಶತ್ರುಗಳೇ ಪ್ರಿಯವಾಗಿ ಕಂಡಿರಬೇಕು.

ಬಿಜಾಪುರವು ಜನಭರಿತವಾದ ಸುಂದರ ನಗರ. ಅದು ವಿಸ್ತಾರವಾದ ರಾಜಮಾರ್ಗಗಳಿಂದಲೂ ಶ್ರೀಮಂತರ ಸೌಧಗಳಿಂದಲೂ ಅನೇಕ ಉದ್ಯಾನ ಗಳಿಂದಲೂ ಶೋಭಿಸುತ್ತಿತ್ತು. ಅಲ್ಲಿನ ಜನರ ಶ್ರೀಮಂತಿಕೆ, ವಿಲಾಸ, ವೈಭವಗಳು ಜಗತ್ ಪ್ರಖ್ಯಾತವಾಗಿದ್ದವು. ಇದು ಬಹು ಪುರಾತನನಗರ. ಅಲ್ಲಿ ದೇಶ ವಿದೇಶಗಳಿಂದ ಬಂದಿದ್ದ ಪ್ರವಾಸಿಗಳೂ ವರ್ತಕರೂ ನೆಲಸಿದ್ದರು. ಊರು ವಿಲಾಸಗಳ ತೌರೆಂದೇ ಹೆಸರು ಪಡೆದಿತ್ತು. ಇಂತಹ ಸುಂದರ ನಗರವನ್ನು ಶತ್ರುವಿಗೊಪ್ಪಿಸಿ ಓಡಿಹೋದ ಸುಲ್ತಾನನನ್ನು ನೆನೆದು ರಾಯನಿಗೆ ಮರುಕ ಉಂಟಾಯಿತು. ಇದಕ್ಕೂ ಹೆಚ್ಚಾಗಿ ಇದು ತಿಮ್ಮರಸನಿಗೆ ಹೆಚ್ಚು ವ್ಯಥೆಯನ್ನುಂಟುಮಾಡಿತು. ರಾಯನ ಪ್ರತಿಜ್ಞೆಯನ್ನು ಕೇಳಿ ಬಿಜಾಪುರದ ಸುಲ್ತಾನನು ತನ್ನ ಸಕಲ ಸಂಪತ್ತನ್ನೂ ಶತ್ರುವಿನ ವಶಮಾಡಿ ದೇಸಿಗ ನಂತೆ ಅಲೆಯುವ ಪ್ರಸಂಗ ಬಂದುದಕ್ಕಾಗಿ ಶತ್ರುವಿನ ಬಗೆಗೂ ತಿಮ್ಮರಸನು ಸಹಾನುಭೂತಿಯನ್ನು ವ್ಯಕ್ತಪಡಿಸಿದನು. ರಾಯನು ತನ್ನ ಸೈನ್ಯಕ್ಕೆ ನಗರ

ದಲ್ಲಿ ತಮ್ಮ ಅನುಕೂಲಕ್ಕೆ ತಕ್ಕಂತೆ ಬಿಡಾರ ಮಾಡಲು ಸೂಚಿಸಿ ತಾನು ಅದಿಲ್‌ಷಹನ ಅರಮನೆಯಲ್ಲಿಯೇ ಉಳಿದುಕೊಂಡನು.

ಸುಲ್ತಾನನ ಅರಮನೆ ನಿರ್ಜನವಾಗಿತ್ತು. ಅದಿಲ್‌ಷಹನು ಆತುರ ದಲ್ಲಿ ತನಗೆ ಸಿಕ್ಕಿದ ಸಂಪತ್ತುಗಳನ್ನೆಲ್ಲಾ ತನ್ನೊಡನೆ ಕೊಂಡೊಯ್ದಿದ್ದರೂ ಅಲ್ಲಿನ ಅನುಕೂಲತೆಗಳಿಗೆ ಯಾವ ಧಕ್ಕೆಯೂ ಬಂದಿರಲಿಲ್ಲ. ರಾಯನು ದೀರ್ಘಕಾಲದ ಆಯಾಸವನ್ನು ಪರಿಹರಿಸಿಕೊಳ್ಳಲೆಂಬಂತೆ ಸುಲ್ತಾನನ ಅರ ಮನೆಯಲ್ಲಿ ವಿಶ್ರಾಂತಿಗೆ ತಂಗಿದನು. ಯುದ್ಧವಿಲ್ಲದೆ ದೊರೆತ ಈ ವಿಜಯ ದಿಂದ ರಾಯನಿಗೆ ಸಂತೋಷವಾಗಿತ್ತು. ರಾಯನು ನಿಶ್ಚಿಂತೆಯಿಂದ ನೃತ್ಯ ಸಂಗೀತ ಮೊದಲಾದ ಮನರಂಜನೆಗಳ ಕಡೆಗೆ ಗಮನವಿತ್ತು, ತಾನು ಯುದ್ಧಕ್ಕೆ ಬಂದಿರುವ ವಿಷಯವನ್ನೇ ಮರೆತುಬಿಟ್ಟನು.

ಆದರೆ ರಾಯನು ಬಿಜಾಪುರದಲ್ಲಿ ಹೆಚ್ಚು ಕಾಲ ನಿಲ್ಲಲಾಗಲಿಲ್ಲ. ತನಗೆ ಇಷ್ಟವಿಲ್ಲದಿದ್ದರೂ ಬಿಜಾಪುರವನ್ನು ಬಿಟ್ಟು ಹೊರಡಬೇಕಾದ ಪ್ರಸಂಗ ಬಂದಿತ್ತು.

ಬಿಜಾಪುರ ಬಯಲು ಸೀಮೆಯ ನಗರ. ಇದು ಜನಭರಿತವಾಗಿದ್ದರೂ ಜನಜೀವನಕ್ಕೆ ಬೇಕಾಗುವ ಎಲ್ಲ ವಸ್ತುಗಳೂ ಹೊರಗಿನಿಂದಲೇ ಬರಬೇಕಾ ಗಿತ್ತು. ದಿನ ನಿತ್ಯದ ಬಳಕೆಗೆ ಬೇಕಾಗಿದ್ದ ಸೌದೆಯ ಅಭಾವ ವಿಪರೀತ ವಾಗಿತ್ತು. ಜನರಿಗೆ ನೀರನ್ನು ಒದಗಿಸುತ್ತಿದ್ದುದು—ನಗರದ ಬಳಿಯಲ್ಲಿದ್ದ ದೊಡ್ಡ ಜಲಾಶಯ. ಇದು ವರ್ಷದ ಎಲ್ಲ ಕಾಲದಲ್ಲಿಯೂ ನೀರಿನಿಂದ ತುಂಬಿರುತ್ತಿತ್ತು. ಸುಲ್ತಾನನು ನಗರವನ್ನು ತ್ಯಜಿಸಿ ಓಡಿ ಹೋಗುವಾಗ, ಶತ್ರುಗಳಿಗೆ ತೊಂದರೆ ಕೊಡಲು ಜಲಾಶಯದ ತೂಬುಗಳಿಂದ ನೀರನ್ನು ಹೊರಗೆ ಬಿಟ್ಟು ಜಲಾಶಯವನ್ನು ಒಣಗಿಸಿ ಹೋಗಿದ್ದನು. ಅವನ ಉದ್ದೇಶ ಸಫಲವಾಗಿತ್ತು. ಊರಿನ ಜನಕ್ಕೆ ಮೊದಲೇ ಸಾಕಾಗುವಷ್ಟು ನೀರಿರ ಲಿಲ್ಲ. ಸಹಸ್ರ ಸಹಸ್ರ ಸಂಖ್ಯೆಯಲ್ಲಿದ್ದ ರಾಯನ ಸೈನ್ಯಕ್ಕೆ ನೀರನ್ನು ಒದ ಗಿಸುವ ಬಗೆ ಎಂತು ? ಇದಕ್ಕೆ ತಕ್ಕಂತೆ ಆ ದಿನಗಳಲ್ಲಿ ಮಳೆ ಬರುವ ಸೂಚನೆಯೂ ಇರಲಿಲ್ಲ. ಊರಿನ ಭಾವಿಗಳೂ ಕೊಳ, ಕುಂಟೆಗಳೂ ಬಹು ಬೇಗ ಬರಿದಾದವು. ಒಂದು ಕೊಡ ನೀರಿಗೆ ಹೊನ್ನಿನ ಬೆಲೆಯಾಯಿತು. ಊರಿನಲ್ಲಿ ಶೇಖರಿಸಿದ್ದ ಸೌದೆಗೆ ಸುಲ್ತಾನನು ಬೆಂಕಿಯನ್ನಿಟ್ಟು ಬೂದಿ

ಮಾಡಿದ್ದ. ಅದು ಬಯಲು ಸೀಮೆಯಾದ್ದರಿಂದ ಸೌದೆಯನ್ನು ದೂರದ ಪ್ರದೇಶಗಳಿಂದ ತರಬೇಕಾಗಿತ್ತು. ಬಿಜಾಪುರದ ಸುತ್ತಲು ಕಾಡು ಪ್ರದೇಶವಿಲ್ಲದುದರಿಂದ ಸೌದೆಗೂ ತೊಂದರೆಯಾಯಿತು. ನೀರಿಲ್ಲದೆ ಗಂಜಿಯಿಲ್ಲ! ಗಂಜಿ ಕಾಯಿಸಲು ಸೌದೆಯಿಲ್ಲ. ಜನ ಹಾಹಾಕಾರ ಮಾಡ ತೊಡಗಿದರು. ಈ ತೊಂದರೆಯನ್ನು ಅನುಭವಿಸಲಾರದೆ ಎಷ್ಟೋ ಮಂದಿ ಹೆಂಡಿರು ಮಕ್ಕಳನ್ನು ಕಟ್ಟಿಕೊಂಡು, ಮನೆ ಮಠಗಳನ್ನು ತೊರೆದು ಸಾಧ್ಯವಾದಷ್ಟು ಸಂಪತ್ತನ್ನು ತೆಗೆದುಕೊಂಡು ನಗರವನ್ನು ತೊರೆದು ಹೊರಟು ಹೋದರು. ಇದರಿಂದ ಅರ್ಧ ಊರು ಬರಿದಾಯಿತು. ಇದಕ್ಕೆ ತಕ್ಕಂತೆ ಸೈನಿಕರ ಉಪಟಳ ಬೇರೆ. ಹಿಂದೆಂದೂ ಇಲ್ಲದ ರೀತಿಯಲ್ಲಿ ಅವರ ವರ್ತನೆ ಮೇರೆ ಮೀರಿತ್ತು. ರಾಯನು ಈ ಬಾರಿ ಸೈನಿಕರ ಸ್ವೇಚ್ಛಾವರ್ತನೆಯನ್ನು ತಡೆಗಟ್ಟಲು ಏಕೋ ಪ್ರಯತ್ನಿಸಲಿಲ್ಲ. ಮನೆ ಮಠಗಳ ಲೂಟಿ, ಹೆಂಗಸರ ಮೇಲೆ ಅತ್ಯಾಚಾರ, ಕೊಲೆ ಸುಲಿಗೆಗಳು ನಗರದಲ್ಲಿ ಸಾಮಾನ್ಯವಾದವು. ಜನ ಭೀತರಾದರು, ಕಂಗಾಲಾದರು. ಶತ್ರುಗಳ ಉಪಟಳವನ್ನು ಸಹಿಸಲಾರದೆ, ಅವರುನಗರವನ್ನು ತ್ಯಜಿಸಿ ಓಡಲಾರಂಭಿಸಿದರು. ತುಂಬಿದ ಸುಖ, ಸಮೃದ್ಧಿಯ ತವುರಾದ ಬಿಜಾಪುರ, ಸ್ಮಶಾನಸದೃಶವಾಯಿತು.

ಇದನ್ನೆಲ್ಲಾ ಕಣ್ಣಾರೆ ಕಂಡು ಬೇಸತ್ತಿದ್ದ ತಿಮ್ಮರಸನು ಈ ಸಂಗತಿಯನ್ನು ತಿಳಿಸಲು ರಾಯನ ಬಳಿಗೆ ಬಂದನು.

ಆ ಸಮಯದಲ್ಲಿ ರಾಯನ ಬಿಜಾಪುರದ ಸುಪ್ರಸಿದ್ಧ ನರ್ತಕಿಯ ನಾಟ್ಯವೊಂದನ್ನು ನೋಡುವುದರಲ್ಲಿ ತನ್ಮಯನಾಗಿದ್ದನು.

ರಾಯನು ತಿಮ್ಮರಸನನ್ನು ಆದರದಿಂದ ಬರಮಾಡಿಕೊಂಡು ಸತ್ಕರಿಸಿದನು.

'ಓ! ಅಪ್ಪಾಜಿಯವರು ದಾರಿತಪ್ಪಿ ಇಲ್ಲಿಗೆ ಬಂದಿರುವಂತೆ ಕಾಣುತ್ತಿದೆ.'

'ಏಕೆ ಪ್ರಭು?

'ನಾವು ಇಲ್ಲಿ ಬಂದಲಾಗಾಯಿತು ನಮಗೆ ತಮ್ಮ ದರ್ಶನಲಾಭವೇ ಇಲ್ಲವಾಗಿದೆ. ಹೋಗಲಿ, ತಾವು ಬಂದ ಕಾರಣ?'

ತಿಮ್ಮರಸನು ಮೌನವನ್ನು ಒಡೆದು ನುಡಿದನು.

'ಪ್ರಭುಗಳಲ್ಲಿ ಒಂದು ಅರಿಕೆಯಿದೆ. ಇಲ್ಲಿನ ಜನರ ಗೋಳು, ಕಷ್ಟ ನೋಡಲು ಸಾಧ್ಯವಿಲ್ಲವಾಗಿದೆ. ಅಷ್ಟೇ ತೊಂದರೆ ನಮ್ಮ ಸೈನ್ಯದವರಿಗೂ ಉಂಟಾಗಿದೆ. ಕುಡಿಯಲು ನೀರಿಲ್ಲದೆ, ತಿನ್ನಲು ಅನ್ನವಿಲ್ಲದೆ ಜನ ಸಾಯುತ್ತಿದ್ದಾರೆ. ಅವರನ್ನು ಸುಡಲು ಕಟ್ಟಿಗೆಯಿಲ್ಲದೆ, ಹೆಣಗಳು ಕೊಳೆತು ನಾರುತ್ತಿವೆ. ಜನರ ಆರ್ತನಾದ ಪ್ರಭುಗಳ ಕಿವಿಗೆ ಇನ್ನೂ ಬಿದ್ದಿಲ್ಲವೆಂದು ತೋರುತ್ತಿದೆ. ಸೈನಿಕರು ಹೊಟ್ಟೆಯಾತುರದಿಂದ ಜನರನ್ನು ಪರಿಪರಿಯಾಗಿ ಹಿಂಸಿಸುತ್ತಿದ್ದಾರೆ. ಅವರಲ್ಲಿ ಶಿಸ್ತು ಸಂಯಮಗಳು ಮರೆತು ಹೋಗಿವೆ. ಸೌದೆಗಾಗಿ ಕಟ್ಟಿದ ಮನೆಗಳನ್ನೂ ಉದ್ಯಾನವನಗಳ ವೃಕ್ಷಗಳನ್ನೂ ನಾಶ ಮಾಡಿದ್ದಾರೆ. ನಗರವನ್ನು ನೋಡಿದರೆ ಸ್ಮಶಾನದಂತೆ ಕಾಣುತ್ತಿದೆ. ಪ್ರಭುಗಳು ಇನ್ನಾದರೂ ತಮ್ಮ ವಿಲಾಸಜೀವನವನ್ನು ಸಾಕುಮಾಡಿ ಜನರನ್ನೂ, ಸೈನಿಕರನ್ನೂ ಈ ಕಷ್ಟದಿಂದ ಪಾರುಮಾಡಬೇಕು. ಮೊದಲು ಇಲ್ಲಿಂದ ಸೈನ್ಯ ಸಮೇತ ಹೊರಟರೆ ಜನರೂ ಉಳಿಯುತ್ತಾರೆ, ಸೈನಿಕರೂ ಉಳಿಯುತ್ತಾರೆ.'

ತಿಮ್ಮರಸನ ಮಾತಗಳು ರಾಯನ ಹೃದಯವನ್ನು ಮುಟ್ಟಿತು. ಅವನು ತನ್ನ ಯಾವ ನಿರ್ಧಾರವನ್ನು ತಿಳಿಸುವ ಮುನ್ನ ನಗರ ಪ್ರದಕ್ಷಿಣೆ ಮಾಡಿಕೊಂಡು ಬರಲು ಆಶಿಸಿದನು. ಆದರಂತೆ ತಿಮ್ಮರಸನೊಂದಿಗೆ ಕೂಡಲೇ ಕುದುರೆಯನ್ನೇರಿ ಹೊರಟನು.

ತಿಮ್ಮರಸನ ಹೇಳಿದ್ದ ಸಂಗತಿ ಅಕ್ಷರಶಃ ಸತ್ಯವಾಗಿತ್ತು.

ತುಂಬಿದ ಊರಾದ ಬಿಜಾಪುರ ನಿಂದು ಹಾಳುಸುರಿಯುತ್ತಿತ್ತು. ಎಲ್ಲೆಲ್ಲೂ ಮುರಿದ ಮನೆಗಳು. ರಸ್ತೆಯಲ್ಲಿ ಆಹಾರವಿಲ್ಲದೆ ಸತ್ತುಬಿದ್ದಿರುವ ನಾಯಿನರಿಗಳು; ಬಡ ಬಗ್ಗರ ಶವಗಳು! ಅಲ್ಲದೆ ಹಸಿವು ನೀರಡಿಕೆಗಳಿಂದ ಬಳಲಿದ ಪ್ರೇಮರೂಪಿನ ಜನರು! ಈ ಭೀಕರ ನೋಟವನ್ನು ನೋಡಿ ರಾಯನ ಮನಸ್ಸಿಗೆ ಬಹಳ ನೋವಾಯಿತು. ಅವನು ಮೌನವಾಗಿ ಎಲ್ಲವನ್ನೂ ನೋಡಿ ಭಾರವಾದ ಹೃದಯದಿಂದ ಅರಮನೆಗೆ ಬಂದನು.

'ಹೌದು ಅಪ್ಪಾಜಿ, ನಾನು ಇಲ್ಲಿ ಇಷ್ಟು ಕಾಲ ಬೀಡು ಬಿಟ್ಟು ಬಹಳ ಅಪಚಾರ ಮಾಡಿದೆ. ನಾಳೆ ಮುಂಜಾನೆಗೆ ಇಲ್ಲಿಂದ ಹೊರಡಲು

ಸೈನ್ಯಕ್ಕೆ ಆಜ್ಞಾಪಿಸಿ' ಎಂದು ಅಪ್ಪಣೆಯನ್ನಿತ್ತನು.

ಅದರಂತೆ, ಮಾರನೆಯ ದಿನ ಬೆಳಿಗ್ಗೆ ರಾಯನ ಸೈನ್ಯ ಬಿಜಾಪುರ ವನ್ನು ಬಿಟ್ಟು ಹೊರಡಲು ಸಿದ್ಧವಾಯಿತು

ರಾಯನು ಸೈನ್ಯ ಚಲನೆಗೆ ಅಪ್ಪಣೆಯನ್ನಿತ್ತನು.

ಸೈನ್ಯ ಜಯಘೋಷಗಳೊಡನೆ, ರಣವಾದ್ಯವನ್ನು ನುಡಿಸುತ್ತಾ, ಸಾಗಿತು. ಅವರ ಹಿಂದೆ, ಅವರು ಪಾಳುಗೆಡವಿದ್ದ ಬಿಜಾಪುರನಗರ-ಸ್ಮಶಾನದಂತೆ, ಅಸ್ತವ್ಯಸ್ತವಾಗಿ ನಿಂತಿತ್ತು. ಇದು ರಾಯನ ಪ್ರಚಂಡ ದಿಗ್ವಿಜಯದ ಸಂಕೇತವಾಗಿತ್ತು !

## ೧೧

ಕೃಷ್ಣದೇವರಾಯನು ಬಿಜಾಪುರವನ್ನು ತ್ಯಜಿಸಿ ಮುದ್ಗಲ್ಲಿಗೆ ಹಿಂದಿರು ಗಿದನೆಂಬ ವಾರ್ತೆಯನ್ನು ಕೇಳಿ ತಲೆತಪ್ಪಿಸಿಕೊಂಡಿದ್ದ ಅದಿಲ್‌ಷಹನು ಮತ್ತೆ ಸೈನ್ಯ ಸಮೇತ ಬಿಜಾಪುರಕ್ಕೆ ಆಗಮಿಸಿದನು. ಬಿಜಾಪುರದಲ್ಲಿ ಯಾವ ಬಗೆಯ ಶಬ್ದವೂ ಇಲ್ಲದೆ ಸ್ಮಶಾನ ಮೌನ ಆವರಿಸಿತ್ತು. ಕೋಟೆಯ ಮಹಾದ್ವಾರಗಳು ಚಿತ್ತಲೆಯಾಗಿ ನಿಂತಿದ್ದವು. ಕೋಟೆಯ ಗೋಡೆಯನ್ನು ಅಲ್ಲಲ್ಲಿ ಪಾಳುಗೆಡವಲಾಗಿತ್ತು. ಕೋಟೆಯನ್ನು ಹಾದು ಒಳಗೆ ಬರುತ್ತಲೇ ಕಣ್ಣಿಗೆ ಬಿದ್ದ ನೋಟ ಹೃದಯ ವಿದ್ರಾವಕವಾಗಿತ್ತು; ಎಲ್ಲೆಲ್ಲೂ ಮುರುಕಲು ಮನೆಗಳು. ಕಲ್ಲು ಮುಳ್ಳುಗಳಿಂದ ಆವರಿಸಿದ್ದ ರಸ್ತೆಗಳು. ನಿರ್ಜನವಾದ ಬೀದಿಗಳು ಕಾಣುತ್ತಿದ್ದವು. ಇನ್ನೂ ಬದುಕಿದ್ದ ಪ್ರಾಣಿಗಳೆಂದರೆ ಸತ್ತವರ ದೇಹದಿಂದ ಮಾಂಸವನ್ನು ಕಿತ್ತು ತಿನ್ನುತ್ತಿದ್ದ ನಾಯಿ-ನರಿಗಳು, ರಣಹದ್ದುಗಳು. ಅವುಗಳದೇ ರಾಜ್ಯ. ಕೆಲವಡೆ ಅವು ತಿಂದು ಉಳಿದಿದ್ದ ಕೊಳೆತು ನಾರುವ ಶವಗಳ ದುರ್ವಾಸನೆ. ಹೆಣಗಳನ್ನು ಯಾರು ಮಣ್ಣು ಮಾಡಬೇಕು ? ಅದೂ ದರಿದ್ರರ ಶವಗಳನ್ನು !

ಸುತ್ತ ಮುತ್ತಲು ಎಲ್ಲೂ ಮಳೆಯಿಲ್ಲದೆ ಕ್ಷಾಮದ ಮಾರಿಗೆ ಆಹ್ವಾನ ಕೊಟ್ಟಂತಾಗಿತ್ತು. ಮೊದಲೇ ನಗರದ ಬಡ ಜನರಿಗೆ ಸಾಕಷ್ಟು ಆಹಾರ

ವಿರಲಿಲ್ಲ. ಇದರ ಮೇಲೆ ರಾಯನ ಲಕ್ಷ ಲಕ್ಷ ಸಂಖ್ಯೆಯಲ್ಲಿದ್ದ ಸೈನ್ಯವು ಮೂರು ತಿಂಗಳ ಕಾಲ ಬೀಡು ಬಿಟ್ಟಿತ್ತು. ಇಷ್ಟೊಂದು ಜನಕ್ಕೆ ಆಹಾರವನ್ನು ಒದಗಿಸುವುದೇ ದುಸ್ತರವಾಗಿತ್ತು. ಇನ್ನು ಅವರ ಆನೆ, ಕುದುರೆ ಒಂಟೆಗಳಿಗೆ ಆಹಾರವನ್ನು ಒದಗಿಸುವುದೆಲ್ಲಿ ಬಂತು ? ಸೈನಿಕರು ಜನರ ಗೋಳನ್ನು ಕೇಳದೆ ದಯೆ ದಾಕ್ಷಿಣ್ಯವಿಲ್ಲದೆ ತಮಗೆ ಬೇಕಾದ ಆಹಾರ ವಸ್ತುಗಳನ್ನು ಎಲ್ಲಿದ್ದರೂ ಕಸಿದುಕೊಂಡು ಹೋಗುತ್ತಿದ್ದರು. ನಗರದಲ್ಲಿನ ಆಹಾರ ಸಾಮಾಗ್ರಿಗಳು ಮುಗಿದ ಮೇಲೆ ಅಕ್ಕಪಕ್ಕದ ಹಳ್ಳಿಗಳಲ್ಲಿ ಲೂಟಿಗೆ ಪ್ರಾರಂಭವಾಯಿತು. ತಮ್ಮ ಪ್ರಾಣಕ್ಕೂ ಸಂಚಕಾರ ಬರಬಹುದೆಂದು ಹೆದರಿದ ಹಳ್ಳಿಗರು ತಮ್ಮ ಹಳ್ಳಿಯನ್ನು ತೊರೆದು ಓಡಿಹೋಗಿದ್ದರು. ಇಷ್ಟಾದರೂ ಕೆಲವು ಜನ ಶ್ರೀಮಂತರು ರಾಯನ ಸೈನಿಕರು ಅಪೇಕ್ಷಿಸಿದ್ದನ್ನು ಸೂರೆಗೊಟ್ಟು ಜೀವಂತವಾಗಿ ಉಳಿದಿದ್ದರು—ಸುಲ್ತಾನನಿಗೆ ರಾಯನ ಸೈನಿಕರ ಆಕ್ರಮಣದ ದಾರುಣ ಕಥೆಯನ್ನು ತಿಳಿಸಲು.

ಸುಲ್ತಾನನು ಕುದುರೆಯನ್ನೇರಿ ನಗರವನ್ನು ನೋಡಿ ಬರಲು ಹೊರಟನು. ನಗರದಲ್ಲಿನ ಭವ್ಯ ಭವನಗಳು ಮಾಂಸ ಕರಗಿದ ಅಸ್ಥಿಪಂಜರದಂತೆ, ಚಿತ್ತಲೆಯಾಗಿ ಹರುಕು ಮುರುಕಾಗಿ ನಿಂತಿದ್ದವು. ತನ್ನ ಪ್ರೀತಿಯ ರಾಜಧಾನಿಗೊದಗಿದ ದುರವಸ್ಥೆಯನ್ನು ನೋಡಿ ರಾಜನ ಕಣ್ಣಿನಲ್ಲಿ ನೀರೂರಿತು.

ಸುಲ್ತಾನನು ತನ್ನ ಅರಮನೆಗೆ ಬಂದನು. ಅರಮನೆ ಮಾತ್ರ ಭಗ್ನವಾಗಿರಲಿಲ್ಲ. ಅವನಿಗೆ ಆಚ್ಚರಿಯಾಯಿತು. ರಾಯನು ಅಲ್ಲಿಯೇ ಬಿಡಾರ ಮಾಡಿದುದರಿಂದ ಉಳಿದ ಸೌಧಗಳಿಗೊದಗಿದ್ದ ದುಃಸ್ಥಿತಿ ಅದಕ್ಕೆ ಒದಗದೆ ಅರಮನೆ ಮೊದಲಿನಂತೆಯೇ ಸುವ್ಯವಸ್ಥಿತವಾಗಿತ್ತು.

ತನ್ನ ರಾಜಧಾನಿಗೆ ಒದಗಿದ್ದ ಸ್ಥಿತಿಯನ್ನು ನೆನೆದು ಸುಲ್ತಾನನಿಗೆ ಅಪಾರ ವ್ಯಥೆಯಾಗಿತ್ತು. ತಾನು ಹೇಡಿಯಂತೆ ತಲೆ ತಪ್ಪಿಸಿಕೊಳ್ಳುವ ಬದಲು ಧೀರನಂತೆ ಯುದ್ಧದಲ್ಲಿ ಹೋರಾಡಿ ತನುವನ್ನು ನೀಗಿದ್ದರೆ, ತನ್ನ ರಾಜಧಾನಿಗೆ ಬಂದೊದಗಿದ್ದ ಭಗ್ನಾವಸ್ಥೆಯನ್ನು ನೋಡುವ ಪ್ರಮೇಯವೇ ಬರುತ್ತಿರಲಿಲ್ಲವೆಂದು ಪರಿತಪಿಸಿದನು. ಅವನಿಗೆ ತನ್ನ ಮೇಲೆಯೇ ಕೋಪ ಬಂದಿತು. ಅವನಿಗೆ ತನ್ನ ಹೇಡಿತನದ ಬಗ್ಗೆ ತಿರಸ್ಕಾರ ಉಂಟಾಯಿತು. ಅವನು ರೋಷದಿಂದ ರಾಯನ ಮೇಲೆ ಹಲ್ಲು ಕಡಿದನು. ತಾನು ದುಡುಕಿ

ವರ್ತಿಸಿದೆನೆಂದು ತನ್ನನ್ನೇ ಹಳಿದುಕೊಂಡನು. ಆದರೆ ಕಾರ್ಯ ಮಿಂಚಿ ಹೋಗಿತ್ತು. ದುಡುಕಿ ನಡೆಸಿದ ಆ ಕೃತ್ಯಕ್ಕಾಗಿ ಚಿಂತಿಸಿ ಫಲವಿರಲಿಲ್ಲ. ಆದರೂ ಸುಲ್ತಾನನು ಅನ್ನ ನೀರುಗಳನ್ನು ಬಿಟ್ಟು ಆ ಬಗ್ಗೆ ಚಿಂತಿಸುತ್ತಾ ಕುಳಿತನು. ಇದನ್ನು ಅವಲೋಕಿಸಿದ ಅಸದ್ ಖಾನನು ಸುಲ್ತಾನನನ್ನು ಸಂತೈಸಲೆತ್ನಿಸಿದನು.

'ತಾವು ಇಷ್ಟಕ್ಕೆಲ್ಲಾ ಹೆದರಿ ಚಿಂತಿಸಬಾರದು ಖಾವಂದ್. ಅಲ್ಲಾನ ಮನಸ್ಸಿನಲ್ಲಿ ನಮ್ಮ ಅಹಂಕಾರವನ್ನು ಈ ಬಗೆಯಲ್ಲಿ ಮುರಿಯಬೇಕೆಂದಿದ್ದಿತೇನೋ. ಅದರಂತೆ ನಡೆಯಿತು. ತಾವು ಧೈರ್ಯ ತಾಳಬೇಕು. ಕೈಬಿಟ್ಟು ಹೋಗಿರುವ ಪ್ರದೇಶಗಳನ್ನು ಹೇಗಾದರೂ ವಶಪಡಿಸಿಕೊಳ್ಳಬೇಕು. ಆ ಕಾಫರರ ಮೇಲೆ ಸೇಡು ತೀರಿಸಿಕೊಳ್ಳಬೇಕು. ಆ ಬಗ್ಗೆ ಯೋಚಿಸಬೇಕೇ ಹೊರತು ಕಳೆದು ಹೋದುದಕ್ಕೆ ಚಿಂತಿಸಿ ಫಲವಿಲ್ಲ, ಖಾವಂದ್.'

'ಹೌದು ಅಸದ್ ಖಾನ್, ಆ ಕಾಫರರ ಮೇಲೆ ಸೇಡು ತೀರಿಸಿಕೊಳ್ಳಬೇಕು. ನನ್ನ ಹೃದಯದಲ್ಲಿ ದ್ವೇಷದ ಕಿಚ್ಚು ಧಗಧಗಿಸುತ್ತಿದೆ. ಆದರೆ ಹೇಗೆ ಸೇಡು ತೀರಿಸಿಕೊಳ್ಳಬೇಕೆಂಬುದು ತಿಳಿಯದಾಗಿದೆ.' ಎಂದನು.

'ನನಗೆ ಅಪ್ಪಣೆ ಕೊಡಿ ಖಾವಂದ್, ಶತ್ರುಗಳ ಮೇಲಿನ ಸೇಡು ತೀರಿಸಿಕೊಳ್ಳುವವರಿಗೂ ತಮಗೆ ಮುಖ ತೋರಿಸುವುದಿಲ್ಲ.'

'ನೀನೊಬ್ಬನೇ ಏನು ಮಾಡಬಲ್ಲೆ ಅಸದ್ ಖಾನ್. ಅಲ್ಲಾನೇ ನಮ್ಮ ವಿಷಯದಲ್ಲಿ ಮುನಿದಿರುವಾಗ ನಾವೇನು ಮಾಡಬಲ್ಲೆವು ? ಯಾರಿಗೆ ತಿಳಿದಿತ್ತು—ಆ ಕಾಫರರು ರಾಯಚೂರು ಯುದ್ಧದಲ್ಲಿ ಭೇದಿಸಲು ಅಸಾಧ್ಯವಾದ ಕೋಟೆಯನ್ನು ಮುರಿದು ನಮ್ಮನ್ನು ಸೋಲಿಸುತ್ತಾರೆಂದು. ಅವರಿಗೆ ಸೈತಾನನೇ ಸಹಾಯ ಮಾಡುತ್ತಿರಬೇಕು—ನಾವು ಮಾಡಿದ ಒಂದು ಕಾರ್ಯವೂ ಯಶಸ್ವಿಯಾಗುತ್ತಿಲ್ಲ !—' ಎಂದು ಖಿನ್ನನಾಗಿ ನುಡಿದನು.

'ಹೌದು, ಖಾವಂದ್. ನಮ್ಮ ಅದೃಷ್ಟ ಹೀನವಾಗಿದೆ. ಹಾಗಿಲ್ಲದೆ ಇದ್ದಿದ್ದರೆ ಆ ರಾಯನನ್ನು ನಾವು ಕಟ್ಟಿದ್ದ ಆ ಬಿಡಾರದಲ್ಲಿ ಅವನ ಸಮಾಧಿಯನ್ನು ಮಾಡಬಹುದಾಗಿತ್ತು. ಆದರೆ ನಮ್ಮ ಸಂಚನ್ನು ಹೇಗೆ ಕಂಡು ಹಿಡಿದನೋ ಅಂತೂ ಅವನು ಬದುಕಿಕೊಂಡು ಖಾವಂದರಿಗೆ ಈ ಪಾಡು ಬಂತು !'

‘ ಎಲ್ಲವೂ ನಮ್ಮ ಹಣೆಯಬರೆಹ, ಅಸದ್ ಖಾನ್. ನಮ್ಮ ಹಿಂದಿನ ಸುಲ್ತಾನರು ವಿಜಯನಗರದ ರಾಯರ ಮೇಲೆ ನಡೆಸಿದ ಅತ್ಯಾಚಾರಕ್ಕೆ ನಾವು ದಂಡ ತೆರಬೇಕಾಗಿದೆ. ಅವರ ಪಾಪದ ಫಲವನ್ನು ನಾವು ಅನುಭವಿಸಬೇಕಾಗಿದೆ. ನಮ್ಮ ಪೂರ್ವಿಕರು ಅದಿಲ್‌ಷಹ ಬಹಮನಿ ಆ ದೇವರಾಯನನ್ನು ಆ ರೀತಿಯಲ್ಲಿ ಅಪಮಾನಗೊಳಿಸದೆ ಇದ್ದರೆ ನಮಗೆ ಈ ದುರ್ಗತಿ ಬರುತ್ತಿರಲಿಲ್ಲ.’ ಎಂದು ವಿಷಾದವಾಗಿ ಹೇಳಿದನು.

‘ ತಾವು ಇಷ್ಟು ಹತಾಶರಾಗಬೇಕಾದ ಕಾರಣವಿಲ್ಲ, ಖಾವಂದ್. ನಾನು ತಮ್ಮ ಸೇವೆಯಲ್ಲಿರುವ ತನಕ ತಾವು ಯಾವುದಕ್ಕೂ ಚಿಂತಿಸಬೇಕಾಗಿಲ್ಲ. ಈಗಲೂ ಎಲ್ಲವೂ ಮುಗಿದು ಹೋಗಿಲ್ಲ. ನಮ್ಮ ಪ್ರಯತ್ನವನ್ನು ನಾವು ಮಾಡೋಣ.’

‘ ಇನ್ನು ಏನು ಉಳಿದಿದೆ, ಆಸದ್ ಖಾನ್. ಹಿಂದೆ ರಾಯನ ಪಾದವನ್ನು ಚುಂಬಿಸಿದ್ದರೆ ನಾನು ಬದುಕಿಕೊಳ್ಳಬಹುದಿತ್ತು. ಕಳೆದುಕೊಂಡ ರಾಜ್ಯಕೋಶಗಳನ್ನು ಮರಳಿ ಪಡೆಯಬಹುದಿತ್ತು. ನಾವು ರಾಯನ ಕೋರಿಕೆಯನ್ನು ಧಿಕ್ಕರಿಸಿ, ಈ ಸ್ಥಿತಿಗೆ ಬಂದೆವು. ಈಗ ರಾಯನ ಬಳಿಗೆ ಹೋದರೆ, ನಮ್ಮನ್ನು ಕೈ ಸೆರೆ ಹಿಡಿದು ಆಮರಣಾಂತ ಕಾರಾಗೃಹದಲ್ಲಿಡುತ್ತಾನೆ. ಇದು ಖಂಡಿತ. ಹೀಗಿರುವಲ್ಲಿ ಮೊದಲಿನಂತೆ ಸ್ನೇಹಿತನಾಗಿರುವಂತಹ ಒಪ್ಪಂದವನ್ನು ಮಾಡಿಕೊಳ್ಳಲು ಸಾಧ್ಯವಿದೆಯೇ ?’

‘ಸಾಧ್ಯವಿದೆ ಖಾವಂದ್, ಸಾಧ್ಯವಿದೆ- ನನ್ನ ಮೇಲೆ ನಂಬಿಕೆ ಇರಿಸಿ ಅಪ್ಪಣೆ ಕೊಡಿ. ಅಸಾಧ್ಯವಾದುದನ್ನು ಸಾಧ್ಯವಾಗಿಸಿಕೊಂಡು ಬರುತ್ತೇನೆ’ ಎಂದು ಸುಲ್ತಾನನಿಗೆ ಧೈರ್ಯ ತುಂಬಿ ಅವನಿಂದ ಹೊಸ ರಾಯಭಾರಕ್ಕೆ ಅನುಮತಿಯನ್ನು ದೊರಕಿಸಿಕೊಂಡನು.

ರಾಯನ ಭೇಟಿಗೆಂದು ಆಸದ್ ಖಾನನು ಮುದ್ಗಲ್ಲಿಗೆ ಹೊರಟನು.

ಆಸದ್ ಖಾನನು ವೀರಯೋಧ. ಅಲ್ಲದೆ ಮಹತ್ವಾಕಾಂಕ್ಷಿ. ಆವನು ಹುಟ್ಟಿನಿಂದ ಮೇಲೇರಿ ಬಂದವನಲ್ಲ. ಸ್ವಶಕ್ತಿಯಿಂದ ಮುಂದೆ ಬಂದವನು. ಹಳ್ಳಿಯ ಮಸೀದಿಯ ಖಾಜಿ ಸಾಹೇಬನಾಗಿದ್ದ ಸಾಮಾನ್ಯ ಬಡ ಕುಟುಂಬದಲ್ಲಿ ಜನಿಸಿದವನು ಅಸದ್ ಖಾನ್. ಅವನ ತಂದೆ ಹತ್ತು ಜನರಿಗೆ ಬೇಕಾಗಿದ್ದ ವ್ಯಕ್ತಿಯಾಗಿದ್ದರೂ ಬಡತನದ ಬೇಗೆ ಮಾತ್ರ

ನೀಗಿರಲಿಲ್ಲ. ಅವನ ಅಲ್ಪಸ್ವಲ್ಪ ಆಸ್ತಿಯೆಲ್ಲವೂ ಮಕ್ಕಳ ಮದುವೆಯಲ್ಲಿ ಕರಗಿತ್ತು. ಆಸದ್‌ಖಾನನಿಗೆ ಉಳಿದಿದ್ದ ಆಸ್ತಿ ಎಂದರೆ ಖಾಜಿಯು ಬಳಿಯಲ್ಲಿದ್ದ ಖುರಾನ್ ಮಾತ್ರವೇ. ಅವನು ಅದೆಂತಹ ಅಮೂಲ್ಯ ಸಂಪತ್ತೆಂದು ತಿಳಿದಿದ್ದುದರಿಂದಲೇ ಮಗನಿಗೆ ಖುರಾನ್ ಪಾಠ ಹೇಳಿ ಜೊತೆಗೆ ನ್ಯಾಯಶಾಸ್ತ್ರಗಳಲ್ಲಿ ಪಾರಂಗತನನ್ನಾಗಿ ಮಾಡಿದನು. ಅವನು ಸಣ್ಣ ವಯಸ್ಸಿನಲ್ಲಿಯೇ ತನ್ನ ವಯಸ್ಸಿನ ಇತರ ಬಾಲಕರಿಗಿಂತ ಬುದ್ಧಿವಂತನೆನಿಸಿಕೊಂಡಿದ್ದನು. ಖುರಾನನ್ನು ಆಮೂಲಾಗ್ರವಾಗಿ ಬಾಯಿ ಪಾಠ ಮಾಡಿದ್ದುದರಿಂದ ಹಿರಿಯರ ಪ್ರೀತಿಗೂ ಗೌರವಕ್ಕೂ ಪಾತ್ರನಾಗಿದ್ದನು. ಇಂತಿರುವಲ್ಲಿ ಅವನ ತಂದೆ ಹಠಾತ್ತನೆ ಯಾವುದೋ ಬೇನೆಗೆ ಬಲಿಯಾದನು. ಅವನ ತಾಯಿ ಮಗನೊಂದಿಗೆ ಮಗಳ ಮನೆಗೆ ಸೇರಿಕೊಂಡಳು.

ಬಿಜಾಪುರದಲ್ಲಿದ್ದ ಅಳಿಯನಿಗೆ ಸುಲ್ತಾನನ ಮೈಗಾವಲು ಪಡೆಯಲ್ಲಿ ಕೆಲಸವಿತ್ತು- ಅಸದ್‌ಖಾನನು ವಯಸ್ಸಿಗೆ ಬಂದ ಮೇಲೆ ಅವನು ತನ್ನ ವರ್ಚಸ್ಸನ್ನು ಉಪಯೋಗಿಸಿ ಆಸದ್‌ಖಾನನಿಗೆ ಸೈನ್ಯದಲ್ಲಿ ಒಂದು ಕೆಲಸವನ್ನು ದೊರಕಿಸಿಕೊಟ್ಟನು. ಆದಿಲ್‌ಷಹನ ತಂದೆಯ ಕಾಲಕ್ಕೆ ನಡೆದ ಮೂರು ನಾಲ್ಕು ದಿಗ್ವಿಜಯಗಳಲ್ಲಿ ಅವನು ತನ್ನ ಶಕ್ತಿ, ಸಾಮರ್ಥ್ಯಗಳನ್ನು ಪ್ರದರ್ಶಿಸಿ ಅವರ ವಿಶ್ವಾಸಕ್ಕೆ ಪಾತ್ರನಾದನು. ಸಾಮಾನ್ಯ ಸೈನಿಕನಾಗಿದ್ದವನು, ಆದಿಲ್‌ಷಹನು ಪಟ್ಟಕ್ಕೆ ಬರುವ ವೇಳೆಗೆ ಸೈನ್ಯದಲ್ಲಿ ಅವನು ಪ್ರಮುಖ ಸೇನಾಧಿಪತಿಯಾಗಿದ್ದನು. ಅವನನ್ನು ಆದಿಲ್‌ಷಹನು ಬೆಳಗಾಂನ ದುರ್ಗಾಧಿಪತಿಯನ್ನಾಗಿ ಮಾಡಿದ್ದನು.

ಅವನ ಒಂದೇ ಒಂದು ಆಸೆ ಎಂದರೆ ತಾನು ಬಿಜಾಪುರದ ಸಮಸ್ತ ಸೈನ್ಯಕ್ಕೆ ಮಹಾದಂಡನಾಯಕನಾಗಬೇಕೆಂಬುದು. ಎರಡನೆಯ ಸುಲ್ತಾನನಂತೆ ಮೆರೆಯಲು ಆ ಪದವಿಯಿಂದ ಮಾತ್ರ ಸಾಧ್ಯವಾಗಿತ್ತು. ಅಂತಲೇ ದಂಡನಾಯಕನ ಪದವಿಗೆ ಆಶಿಸುತ್ತಿದ್ದ ಅವನನ್ನು ಬೆಳಗಾಂ ದುರ್ಗಾಧಿಪತ್ಯ ತೃಪ್ತಿಪಡಿಸಿರಲಿಲ್ಲ. ಅವನ ಆಸೆಗಳು ಈಡೇರುವ ಕಾಲ ಬಂದಿತ್ತು. ಅವನ ಮಹಾತ್ವಾಕಾಂಕ್ಷೆಗೆ ಕಂಟಕಪ್ರಾಯರಾಗಿದ್ದ ಸೇನಾಧಿಪತಿಗಳೆಲ್ಲರೂ ರಾಯಚೂರಿನ ಯುದ್ಧದಲ್ಲಿ ಮಡಿದಿದ್ದರು. ಇನ್ನು ಉಳಿದಿದ್ದ ಒಬ್ಬನೇ ಒಬ್ಬ ಸೇನಾಧಿಪತಿ—ಸಲಬತ್‌ಖಾನನು, ರಾಯನಿಗೆ ಕೈಸೆರೆ ಸಿಕ್ಕಿ ವಿಜಯ

ನಗರದ ಸೆರೆಮನೆಯಲ್ಲಿ ಕೊಳೆಯುತ್ತಾ ಬಿದ್ದಿದ್ದದು.

ಸಲಬತ್‌ಖಾನನು ವೀರಾಗ್ರಣಿಯಾಗಿದ್ದ ಸೇನಾಧಿಪತಿ. ಅಷ್ಟೇ ನಿಸ್ಪೃಹ. ಅವನಿಗೆ ಮೊದಲಿನಿಂದಲೂ ಅಸದ್‌ಖಾನನ ಮೇಲೆ ಸಂಶಯ. ಅವನ ಕುತಂತ್ರಬುದ್ಧಿಯನ್ನು ಕಂಡು ನಂಬಿಕೆಗೆ ಪಾತ್ರನಲ್ಲವೆಂದು ತಿಳಿದು ಅವನನ್ನು ದೂರವಿಟ್ಟಿದ್ದನು. ಸಲಬತ್‌ಖಾನನೆಂದರೆ ಸುಲ್ತಾನನಿಗೆ ಅಪಾರ ಪ್ರೇಮ, ಗೌರವಗಳಿತ್ತು; ಅಷ್ಟೇ ನಂಬಿಕೆಯೂ ಇತ್ತು. ಅವನ ವಿರುದ್ಧ ಸಂಚು ನಡೆಸಿ ಸುಲ್ತಾನನ ಮನಸ್ಸನ್ನು ಕೆಡಿಸಲು ಪ್ರಯತ್ನಿಸಿ ವಿಫಲನಾಗಿದ್ದನು ಅಸದ್‌ಖಾನ್.

ಆದರೆ ರಾಯಚೂರು ಯುದ್ಧನಲ್ಲಿ ಸಲಬತ್‌ಖಾನನು ಸಿಂಹ ಪರಾಕ್ರಮದಲ್ಲಿ ಯುದ್ಧಮಾಡಿ ಕೈಸೆರೆ ಸಿಕ್ಕಿದ ಮೇಲೆ ಉಳಿದಿದ್ದ ಸೇನಾಧಿಪತಿ ಎಂದರೆ ಅಸದ್‌ಖಾನ್. ಅವನ ವಿಷಯದಲ್ಲಿ ವಿಶ್ವಾಸವಿಲ್ಲದಿದ್ದರೂ ಸುಲ್ತಾನನು ನಿರ್ವಾಹವಿಲ್ಲದೆ ಅವನನ್ನು ರಾಯನ ಬಳಿಗೆ ರಾಯಭಾರಿಯನ್ನಾಗಿ ಕಳುಹಿಸಿದ್ದನು. ಅವುಗಳನ್ನು ದಕ್ಷತೆಯಿಂದ ನಿರ್ವಹಿಸಿದ್ದುದರಿಂದ ಅಸದ್‌ಖಾನನ ವಿಷಯದಲ್ಲಿ ಸುಲ್ತಾನನಿಗೆ ಸದಭಿಪ್ರಾಯ ಉಂಟಾಗಿತ್ತು. ಅಲ್ಲದೆ ಕಳೆದುಳಿದ ಅವನೇ ಸುಲ್ತಾನನ ಆಪ್ತಮಿತ್ರನೂ ನರ್ಮ ಸಚಿವನೂ ಆಗಿದ್ದನು.

ಅಸದ್‌ಖಾನನು ಮಿತಪರಿವಾರದೊಡನೆ ಮುದ್ಗಲ್ಲಿಗೆ ಬಂದಿಳಿದನು. ಅದಿಲ್‌ಷಹನಿಂದ ಮತ್ತೆ ರಾಯಭಾರ ಬಂದಿರುವುದನ್ನು ಕೇಳಿ ರಾಯನಿಗೂ ತಿಮ್ಮರಸನಿಗೂ ಆಶ್ಚರ್ಯವಾಯಿತು. ತಾವು ಬಿಜಾಪುರದ ಮೇಲೆ ಧಾಳಿಯಿಟ್ಟು ಹಾಳುಗೆಡವಿದ್ದರೂ, ಬಿಜಾಪುರದ ಸುಲ್ತಾನನು ಸಂಧಾನಕ್ಕೆಂದು ರಾಯಭಾರಿಯನ್ನು ಕಳುಹಿಸಿರುವನಲ್ಲಾ ಎಂದು ಆಶ್ಚರ್ಯ. ಸೋತು ಸೊರಗಿರುವ ಸುಲ್ತಾನನು ಪ್ರಾಣ ಉಳಿಸಿಕೊಳ್ಳಲು ಮಾಡುತ್ತಿರುವ ಕೊನೆಯ ಪ್ರಯತ್ನ ಇಂದು ಎಂದು ರಾಯನು ಯೋಚಿಸಿದನು. ಹೇಡಿಯಂತೆ ದಯಾಭಿಕ್ಷೆಯನ್ನು ಬೇಡಲು ದೂತನನ್ನು ಕಳುಹಿಸಿರುವನೆಂದು ರಾಯನು ಬಗೆದನು. ಹೇಡಿಯ ದೂತನಾಗಿ ಬಂದಿರುವ ರಾಯಭಾರಿಯನ್ನು ರಾಯನು ತಿರಸ್ಕಾರದಿಂದಲೇ ಕಂಡನು. ಬಂದು ಒಂದು ತಿಂಗಳಾದರೂ ಅವನನ್ನು ಭೇಟಿಗೆ ಕರೆಯಲಿಲ್ಲ.

ರಾಯನು ತನ್ನ ಹಾಗೂ ತನ್ನ ಒಡೆಯನ ವಿಷಯದಲ್ಲಿ ಪ್ರತ್ಯಕ್ಷವಾಗಿ ತೋರಿಸುತ್ತಿರುವ ತಿರಸ್ಕಾರದಿಂದ ಅಸದ್‌ಖಾನನಿಗೆ ಬೆಂಕಿಬೆಂಕಿಯಾದರೂ ನಿರ್ವಾಹವಿಲ್ಲದೆ, ಹಲ್ಲು ಕಚ್ಚಿಕೊಂಡು ಅಪಮಾನವನ್ನು ನುಂಗಿದನು. ರಾಯನು ತೋರಿಸಿದ ಅನಾದರ. ಅಸಡ್ಡೆಯನ್ನು ಕಂಡೂ ಕಾಣದವನಂತೆ ನಿರ್ಲಕ್ಷ್ಯದಿಂದ ಇದ್ದನು. ಈ ಬಾರಿ ತನ್ನ ಪರ ವಕೀಲಿ ವಹಿಸಲು ತಿಮ್ಮರಸನನ್ನು ಕಾಣಲು ಹೋಗಲಿಲ್ಲ. ತಿಮ್ಮರಸನನ್ನು ಕಂಡರೆ ತನ್ನ ಸಂಚು ಬಯಲಾಗುವುದೆಂದು ತಿಳಿದು ಅವನು ಹೆದರಿದನು. ರಾಯನು ದರ್ಶನ ಕೊಡುವವರೆಗೂ ಆ ಸ್ಥಳವನ್ನು ಬಿಡಬಾರದೆಂದು ಹಠಮಾಡಿ ಕುಳಿತನು.

ಒಂದು ತಿಂಗಳು ಕಳೆದ ಮೇಲೆ ರಾಯನನ್ನು ಸಂದರ್ಶಿಸುವ ಸುಯೋಗ ಅಸದ್‌ಖಾನನಿಗೆ ದೊರೆಯಿತು.

ಅಸದ್‌ಖಾನನು ರಾಯನ ಸಂದರ್ಶನಕ್ಕೆ ನೇರ ಹಾದಿಯನ್ನು ಹಿಡಿಯದೆ ಅಡ್ಡದಾರಿಯನ್ನು ಹಿಡಿದನು. ಅವನು ಬಿಜಾಪುರದಿಂದ ತಂದಿದ್ದ ದ್ರಾಕ್ಷಾರಸ, ವಿಲಾಸಿನಿಯರ ನೃತ್ಯ ಇವುಗಳಿಂದ ಕೊಂಡಮರಸಯ್ಯನ ಮಗನ ಪರಿಚಯ ಮಾಡಿಕೊಂಡನು. ಅವನ ಮೂಲಕ ರಾಯನಿಗೆ ತನ್ನ ಸಂದೇಶವನ್ನು ಮುಟ್ಟಿಸಿದನು. ತಾನು ಬಹಳ ಮಹತ್ವದ ರಾಜಕಾರಣಕ್ಕಾಗಿ ಬಂದಿರುವಂತೆ ತಿಳಿಸಿದನು. ಇದರಿಂದಾಗಿ ರಾಯನು ಒಂದು ದಿನ ಅಸದ್‌ಖಾನನಿಗೆ ಸಂದರ್ಶನವನ್ನು ಕೊಟ್ಟನು. ಅದೂ ಅಸದ್‌ಖಾನನ ಇಚ್ಛೆಯಂತೆ ಖಾಸಗಿಯ ಸಂದರ್ಶನ !

ಅವನು ತನ್ನ ಬೆಣ್ಣೆಯ ಮಾತುಗಳಿಂದ ರಾಯನನ್ನು ಮರುಳು ಮಾಡಿ, ಅವನ ಮನವನ್ನು ಅಪಹರಿಸಿಕೊಂಡನು.

ಆದಿಲ್‌ಷಹನು ಸ್ವಭಾವತಃ ಒಳ್ಳೆಯವನು. ಆದರೆ ಕೊಂಚ ಅಂಜುಕುಳಿ. ಇತರರ ಹೇಳಿಕೆಯ ಮಾತು ಕೇಳಿಕೊಂಡು ಅದರಂತೆ ನಡೆಯುವುದು ಅವನ ಸ್ವಭಾವ. ವಾಸ್ತವವಾಗಿ ಅವನಿಗೆ ರಾಯನ ವಿಷಯದಲ್ಲಿ ಪ್ರೀತಿ, ಗೌರವಗಳಿವೆ. ರಾಯನಂತಹ ಸಾಮ್ರಾಟನ ಸ್ನೇಹ ತನಗೆ ದೊರೆತರೆ ತಾನು ಭಾಗ್ಯಶಾಲಿ! ಎಂದೇ ತಿಳಿದಿರುವವನು. ಅಂತಲೇ ಸ್ನೇಹಕ್ಕಾಗಿ ರಾಯನ ಪಾದಚುಂಬನ ಮಾಡಲು ಹಿಂದೆಗೆಯಲಿಲ್ಲ....ಆದರೆ... ಆದಿಲ್‌ಷಹನು ರಾಯನ ವಿಷಯದಲ್ಲಿ ಬಹಳ ಹೆದರಿದ್ದಾನೆ. ರಾಯನ ಸ್ನೇಹದ

ಮಾತುಗಳು ಕಪಟವೆಂದೂ, ರಾಯನ ಬಳಿಗೆ ಅದಿಲ್‌ಷಹನು ಬಂದರೆ ಅವನನ್ನು ಸೆರೆ ಹಿಡಿದು ಕೊಲ್ಲುವನೆಂದೂ, ಯಾರೊ ಬೇಕೆಂದೇ ರಾಯನ ವಿಷಯದಲ್ಲಿ ಅದಿಲ್‌ಷಹನ ಮನಸ್ಸನ್ನು ಕೆಡಿಸಿದ್ದಾರೆ....ಇತ್ಯಾದಿ, ಇತ್ಯಾದಿ ಸಂಗತಿಗಳನ್ನೆಲ್ಲಾ ಬಣ್ಣಗಟ್ಟಿ ಹೇಳಿ ರಾಯನ ಮನಸ್ಸನ್ನು ಒಲಿಸಿಕೊಂಡನು.

'ಖಾವಂದ್ ! ಬಡವರಾದ ನಮ್ಮ ಮೇಲೆ ಕೃಪೆಮಾಡಿ. ಇತರ ಬಹಮನಿ ಸುಲ್ತಾನರನ್ನು ನಡೆಸಿಕೊಂಡಿರುವಂತೆ ನಮ್ಮ ಸುಲ್ತಾನರನ್ನು ನಡೆಸಿಕೊಂಡು, ಸ್ನೇಹ ಭಿಕ್ಷೆಯನ್ನು ನೀಡಬೇಕು' ಎಂದು ದೈನ್ಯವಾಗಿ ಕೇಳಿಕೊಂಡನು.

'ನಮ್ಮ ಮಾತನ್ನು ನಡೆಸಿಕೊಟ್ಟಿದ್ದರೆ ನಿಮ್ಮ ಸುಲ್ತಾನರಿಗೆ ಈ ದುರ್ಗತಿ ಬರುತ್ತಿರಲಿಲ್ಲ. ಅವರೇ ಸ್ವತಃ ತಂದುಕೊಂಡ ದುರ್ಗತಿ ಇದು. ನಾವು ಅವರನ್ನು ಸ್ನೇಹಭಾವದಿಂದಲೇ ಕಂಡೆವು. ಅವರು ನಮ್ಮ ಸ್ನೇಹ ಹಸ್ತವನ್ನು ತಿರಸ್ಕರಿಸಿದರು. ಯುದ್ಧ ಅನಿವಾರ್ಯವಾಯಿತು. ಬಿಜಾಪುರದ ಮೇಲೆ ಧಾಳಿಯಿಡಬೇಕಾಯಿತು. ಆದರೆ ನಿಮ್ಮ ಸುಲ್ತಾನರು ನಗರವನ್ನು ತ್ಯಜಿಸಿ ಓಡಿಹೋಗಿ ಯುದ್ಧವನ್ನು ತಪ್ಪಿಸಿದರು. ಈಗಲೂ ವೇಳೆ ಮೀರಿಲ್ಲ. ನೀವು ಹೇಳುವಂತೆ ನಿಮ್ಮ ಸುಲ್ತಾನರಿಗೆ ನಮ್ಮೊಂದಿಗೆ ಗೆಳೆತನ ಬಯಸುವ ಇಚ್ಛೆ ಇದ್ದರೆ ಈಗಲೂ ಅವರು ನಾವು ಕೋರಿದ್ದಂತೆ ನಡೆದುಕೊಳ್ಳಲಿ. ಅವರಿಂದ ಗೆದ್ದ ಸಮಸ್ತವನ್ನೂ ಅವರಿಗೆ ಹಿಂದಿರುಗಿಸಿ, ಅವರೊಂದಿಗೆ ಗೌರವದ ಒಪ್ಪಂದ ಮಾಡಿಕೊಳ್ಳಲು ಈಗಲೂ ಸಿದ್ಧರಿದ್ದೇವೆ' ಎಂದು ಹೇಳಿದನು.

'ಖಾವಂದರು ನಮ್ಮ ಮೇಲೆ ಇಟ್ಟಿರುವ ಅಭಿಮಾನಕ್ಕೆ ನಾವು ಬಹಳ ಋಣಿಗಳಾಗಿದ್ದೇವೆ. ತಮ್ಮ ಕೋರಿಕೆಯನ್ನು ನಡೆಸಲು ನಮ್ಮ ಸುಲ್ತಾನರು ಸಿದ್ಧರಾಗಿದ್ದಾರೆ. ಅವರು ಹಿಂದೆಯೂ ಸಿದ್ಧರಾಗಿದ್ದರು.... ಆದರೆ ದ್ರೋಹಿಗಳ ಮಾತನ್ನು ನಂಬಿಕೊಂಡು ತಮ್ಮ ಸ್ನೇಹದಲ್ಲಿ ದುರುದ್ದೇಶವನ್ನು ಆರೋಪಿಸಿ ಕೆಟ್ಟರು. ಇದರ ತಪ್ಪು ಸುಲ್ತಾನರದಲ್ಲ. ಮಿಥ್ಯಾರೋಪಣೆಗಳಿಂದ ಮನಸ್ಸು ಕೆಡಿಸಿದ ಆ ವಿದ್ರೋಹಿಯದು'

'ನಮ್ಮ ವಿಷಯದಲ್ಲಿ ಸಲ್ಲದ ಸಂಗತಿಗಳನ್ನು ಹೇಳಿ ಸುಲ್ತಾನರ ಮನ

ಸ್ಸನ್ನು ಕೆಡಿಸಿದ ದ್ರೋಹಿ ಯಾರು ? '

' ಅವನೊಬ್ಬ ವಿಶ್ವಾಸ ಘಾತುಕ ಖಾವಂದ್ ! '

' ಅವನು ಯಾರು ? ಎಲ್ಲಿದ್ದಾನೆ ? '

' ಸದ್ಯಕ್ಕೆ ಖಾವಂದರ ಉಪ್ಪು ತಿನ್ನುತ್ತಾ ರಾಜಧಾನಿಯಲ್ಲೇ ಇದ್ದಾನೆ'

' ನನ್ನ ಉಪ್ಪು ತಿಂದು ನನಗೆ ವಿದ್ರೋಹ ಬಗೆಯುವ ಆ ಸ್ವಾಮಿ ದ್ರೋಹಿ ಯಾರು?' ಎಂದು ಕೆರಳಿ ಹೇಳಿದ ರಾಯ.

ಒಂದು ಕ್ಷಣ ಹೇಳಲೊ ಬೇಡವೊ ಎನ್ನುವಂತೆ ಆಲೋಚಿಸುತ್ತಾ ಕುಳಿತ ಅಸದ್‌ಖಾನನನ್ನು ರಾಯನು ನೋಡಿ

' ಸತ್ಯಸಂಗತಿಯನ್ನು ತಿಳಿಸಲು ಅಂಜುವ ಕಾರಣವಿಲ್ಲ. ಆ ದ್ರೋಹಿ ಯಾರೇ ಆಗಿರಲಿ ಅವನನ್ನು ಹಿಡಿತರಿಸಿ, ತಕ್ಕ ರೀತಿಯಲ್ಲಿ ಶಿಕ್ಷಿಸಿ ಅವನು ಮಾಡಿದ ಅಪರಾಧ ಕಲ್ಪನೆ ಅವನಿಗೆ ಬರುವಂತೆ ಮಾಡುತ್ತೇನೆ. ಆ ಬಗ್ಗೆ ಸಂಶಯಬೇಡ' ಎಂದನು.

' ಆ ದ್ರೋಹಿ ಬೇರೆ ಯಾರೂ ಅಲ್ಲ. ತಮಗೆ ಕೈಸೆರೆ ಸಿಕ್ಕಿ ರಾಜಧಾನಿಯ ಸೆರೆಮನೆಯಲ್ಲಿ ಕೊಳೆಯುತ್ತಾ ಬಿದ್ದಿರುವ ಆ ಸಲಬತ್‌ಖಾನ್.'

' ಏನು ಸಲಬತ್‌ಖಾನನೇ ?'

' ಹೌದು, ಖಾವಂದ್ !'

' ಕೈಸೆರೆ ಸಿಕ್ಕಿದಲಾಗಿಯಿತು ಸೆರೆಮನೆಯಲ್ಲಿ ಸರ್ಪಕಾವಲಿನ ಮಧ್ಯೆ ಕುಳಿತಿರುವ ಅವನಿಗೆ ನಮ್ಮ ವಿರುದ್ಧ ಸಂಚು ನಡೆಸಲು ಅವಕಾಶವೆಲ್ಲಿದೆ ? '

' ಅದೇ ಎಲ್ಲರಿಗೂ ಅಚ್ಚರಿಯನ್ನುಂಟುಮಾಡುವ ವಿಷಯ, ಖಾವಂದ್ ! ಸಲಬತ್‌ಖಾನನು ಸಾಮಾನ್ಯನಲ್ಲ. ಅವನಲ್ಲಿ ಸುಲ್ತಾನರಿಗೆ ಬಹಳ ವಿಶ್ವಾಸವಿದೆ. ಅದಕ್ಕಾಗಿಯೇ ಅವನನ್ನು ಮುಖ್ಯ ದಳಪತಿಯನ್ನಾಗಿ ಮಾಡಿ ಯುದ್ಧಕ್ಕೆ ಕಳುಹಿಸಿದುದು. ಅವನಿಗೆ ತಮ್ಮನ್ನು ಕಂಡರೆ ಮೊದಲಿನಿಂದಲೂ ದ್ವೇಷ ತಿರಸ್ಕಾರ ತುಂಬಿದೆ. ಅಂತಲೇ ತಾವು ಸುಲ್ತಾನರೊಂದಿಗೆ ಸ್ನೇಹ ಚಿಂತನೆಯನ್ನು ಮಾಡಿರುವುದನ್ನು ಕೇಳಿ, ಆ ಹಾಲಿಗೆ ಹುಳಿ ಹಿಂಡಿ ಸಲ್ಲದ ಆರೋಪಣೆಗಳನ್ನು ಸುಲ್ತಾನರ ತಲೆಗೆ ತುಂಬಿದುದು. ಸುಲ್ತಾನರು ತಮ ಭೇಟಿಗೆ ಬಂದರೆ ಪ್ರಾಣಕ್ಕೆ ಅಪಾಯವೆಂದು ಮುದ್ಗಲ್ಲಿನ ಬಳಿ ತಮ್ಮನ್ನು ಇದಿರುಗೊಳ್ಳಲು ಸಿದ್ಧನಾಗಿದ್ದ ಸುಲ್ತಾನರನ್ನು ಹೆದರಿಸಿ ಓಡಿಹೋಗು

ವಂತೆ ಮಾಡಿದವನು ಅವನೇ' ಇಲ್ಲದೆ ಇದ್ದಿದ್ದರೆ ಸುಲ್ತಾನರು ಆ ದಿನ ತಮ್ಮ ಅರಮನೆಯಲ್ಲಿಯೇ ನಿಮ್ಮನ್ನು ಇದಿರುಗೊಂಡು ಒಪ್ಪಂದ ಮಾಡಿ ಕೊಳ್ಳುತ್ತಿದ್ದರು. ಸುಲ್ತಾನರ ಬದುಕನ್ನು ಹಾಳುಮಾಡಿದವನೇ ಆ ನೀಚ !'

' ಸೆರೆಮನೆಯಲ್ಲಿದ್ದ ಅವನು ಸುಲ್ತಾನರೊಂದಿಗೆ ಸಂಬಂಧವಿಟ್ಟು ಕೊಳ್ಳಲು ಹೇಗೆ ಸಾಧ್ಯ !'

' ಅದು ಅತ್ಯಂತ ರಹಸ್ಯದ ಸಂಗತಿ. ಸೆರೆಮನೆಯ ಕೆಲಸಗಾರರನ್ನು ಒಳಪಡಿಸಿಕೊಂಡು ಅವರ ಮೂಲಕ ಎಲ್ಲ ಸುದ್ದಿಗಳನ್ನು ಸಂಗ್ರಹಿಸಿಕೊಂಡು ಸುಲ್ತಾನರಿಗೆ ಪತ್ರಮುಖೇನ ವರದಿ ಮಾಡುತ್ತಿರಬೇಕೆಂದು ನನ್ನ ಊಹೆ !'

' ಇದು ಕೇವಲ ನಿಮ್ಮ ಊಹೆಯೇ ಆಗಿದ್ದರೆ ?'

' ನನ್ನ ಮಾತಿನಲ್ಲಿ ಖಾವಂದರಿಗೆ ನಂಬಿಕೆ ಇಲ್ಲವಾದರೆ ಈ ಕಾಗದಗ ಳನ್ನು ಓದಿ ನೋಡಬಹುದು. ಇವುಗಳನ್ನು ಸಲಬತ್‌ಖಾನನು ತಮ್ಮ ರಾಜಧಾನಿಯಿಂದ ಬರೆದುದು—ಎಲ್ಲವೂ ಅವನ ಹಸ್ತಾಕ್ಷರಗಳಲ್ಲಿವೆ !' ಎಂದು ಹೇಳಿ ತಾನು ತಂದಿದ್ದ ಕಾಗದಗಳ ಸುರುಳಿಯನ್ನು ರಾಯನ ಕೈಗಿತ್ತನು.

ಆ ಪತ್ರಗಳನ್ನು ನೋಡಿ ರಾಯನ ಮುಖ ಸಿಟ್ಟಿನಿಂದ ಕೆಂಪಾಯಿತು.

' ದ್ರೋಹಿ, ನನ್ನ ಕಣ್ಣೆದುರಿನಲ್ಲಿಯೇ ಇಂತಹ ವಿದ್ರೋಹವೇ ?'

'ಹೌದು, ಖಾವಂದ್. ಸಲಬತ್‌ಖಾನನು ಸೆರೆಮನೆಯಲ್ಲಿದ್ದೇ ಇಷ್ಟೆಲ್ಲಾ ಕಾರಸ್ಥಾನ ನಡೆಸಿದ್ದಾನೆ. ಅವನಲ್ಲಿ ಜನರನ್ನು ಆಕರ್ಷಿಸುವ ಗುಣವಿದೆ. ಅವನ ಗುಪ್ತಚಾರರು ನಗರದಲ್ಲಿಯೇ ಬೇಕಾದಷ್ಟು ಮಂದಿ ಇದ್ದಾರೆ '

ರಾಯನಲ್ಲಿ ಇದುವರೆಗೆ ಹುದುಗಿದ್ದ ಕ್ರೋಧದ ಕಿಡಿ ಹೊಗೆಯಾಡಿತು.

' ಇಂತಹ ವಿದ್ರೋಹಿಯನ್ನು ಚಿತ್ರಹಿಂಸೆ ಕೊಟ್ಟು ಗಲ್ಲಿಗೇರಿಸಬೇಕು' ಎಂದು ರಾಯನು ಹಲ್ಲು ಕಡಿದನು.

ರಾಯನ ಅಪ್ಪಣೆ ಅಂದೇ ಲಿಖಿತ ರೂಪ ತಾಳಿ, ಓಲೆಕಾರನೊಡನೆ, ವಿಜಯನಗರದ ಸೆರೆಮನೆಯ ಮುಖ್ಯಾಧಿಕಾರಿಗೆ ತಲುಪಿಸಲು ಹೊರಟಿತು.

ಈ ಸುದ್ದಿಯನ್ನು ಕೇಳಿ ಅಸದ್‌ಖಾನನ ಮುಖ ಒಮ್ಮೆಲೇ ಬಿಳಿಚಿಕೊಂಡಿತು.

## ೧೨

ಅಸದ್‌ಖಾನನ ಮುಖ ಬಿಳಿಚಿಕೊಳ್ಳಲು ಕಾರಣವಿಲ್ಲದೆ ಇಲ್ಲ. ರಾಯನ ಅಪ್ಪಣೆ ಲಿಖಿತರೂಪ ತಾಳಿತೆಂದರೆ ಅಲ್ಲಿಗೆ ಸಲಬತ್‌ಖಾನನ ಆಯುಸ್ಸು ಮುಗಿದಂತೆಯೇ ಎಂದು ಅವನು ತರ್ಕಿಸಿದನು. ಸಲಬತ್ ಖಾನನು ನಿಜವಾಗಿಯೂ ವಿದ್ರೋಹಿಯಾಗಿದ್ದರೆ, ಅವನಿಂದಲೇ ಸುಲ್ತಾನನ ಹಾಗೂ ರಾಯನ ಮೈತ್ರಿಗೆ ತಡೆಯುಂಟಾಗಿದ್ದರೆ, ಅಂತಹ ಘಾತುಕನ ಸಾವಿನಿಂದ ಅಸದ್‌ಖಾನನು ಗಾಬರಿಗೊಳ್ಳುವ ಕಾರಣವಿರಲಿಲ್ಲ. ಅವನ ಸಾವಿನ ಬಗ್ಗೆ ಸಂತೋಷಗೊಳ್ಳಬೇಕಾಗಿತ್ತು. ಆದರೆ ಅವನ ಮುಖ ಗಾಬರಿ, ಕಳವಳಗಳನ್ನು ಸೂಚಿಸಿದವು. ಇದಕ್ಕೆ ಕಾರಣ ಅವನ ಮೋಸ ಕೃತ್ಯ. ಅವನು ತನ್ನ ಹಾಗೂ ಸುಲ್ತಾನನ ನಡುವೆ ಇದ್ದ ಪ್ರತಿಬಂಧಕ, ಸಲಬತ್‌ಖಾನನ್ನು ನಿವಾರಿಸಿಕೊಳ್ಳಲು ರಾಯನನ್ನು ಮೋಸಪಡಿಸಿ ರಾಯನಿಂದ ಅವನ ಕೊಲೆಗೆ ಅಪ್ಪಣೆ ಹೊರಡಿಸಿದ್ದನು. ಅವನ ಆಶಯ ಸಲಬತ್‌ಖಾನನನ್ನು ಕೊಲ್ಲಿಸುವುದು—ಹೀಗೆ ಈಡೇರಿತ್ತು. ಇನ್ನು ತಾನು ಮುದ್ಗಲ್ಲಿನಲ್ಲಿ ಹೆಚ್ಚು ಕಾಲ ನಿಂತರೆ, ತನ್ನ ಮೋಸ ಕೃತ್ಯ ಬಯಲಾಗಿ ರಾಯನ ಕೈಗೆ ಸಿಕ್ಕಿಬಿದ್ದು ಅದೇ ಶಿಕ್ಷೆಯನ್ನು ತಾನು ಅನುಭವಿಸಬೇಕಾಗಿ ಬರುವುದೆಂದು ತಿಳಿದು ಅವನು ಆದಷ್ಟು ಬೇಗ ಅಲ್ಲಿಂದ ಹೊರಡಲು ಪ್ರಯತ್ನ ಮಾಡಿದನು. ಆದರೆ ರಾಯನು ಅವನನ್ನು ಕಳುಹಿಸಿಕೊಡಲು ಇಷ್ಟಪಡದೆ ಅಸದ್‌ಖಾನನ ಪ್ರಯಾಣವನ್ನು ಮುಂದು ಹಾಕುತ್ತ ಬಂದನು. ಇದಕ್ಕೆ ಕಾರಣವೇನು ?

ಅಸದ್‌ಖಾನನು, ರಾಯನ ಕೋರಿಕೆಯಂತೆ ನಡೆಯಲು ಒಪ್ಪಿ ಬರೆದಿದ್ದ ಸುಲ್ತಾನನ ಪತ್ರವನ್ನು ಕೃಷ್ಣದೇವರಾಯನಿಗೆ ಕೊಟ್ಟಿದ್ದನಷ್ಟೇ. ಅದರಲ್ಲಿ ಅಸದ್‌ಖಾನನ ವಿಷಯದಾಗಿ ಸಂದೇಹ ಪಡುವಂತಹ ಒಂದೆರಡು ಅಂಶಗಳಿದ್ದವು. ಇವುಗಳನ್ನು ಅಸದ್‌ಖಾನನು ಅಷ್ಟಾಗಿ ಗಮನಿಸಿರಲಿಲ್ಲ. ಆ

ತ್ರದಲ್ಲಿ ಸಲಬತ್‌ಖಾನನ ಹೆಸರಿಲ್ಲದೆ ಇದ್ದರೂ, ಅವನ ವಿಷಯದಲ್ಲಿ
ರೋಕ್ಷವಾಗಿ ಬರೆದ ಒಂದು ಮಾತಿತ್ತು. ಅದೇನೆಂದರೆ ಸುಲ್ತಾನನು
ನು ರಾಯನ ಕೋರಿಕೆಯಂತೆ ನಡೆದುಕೊಳ್ಳಲು ಸಿದ್ಧನಿರುವುದಾಗಿಯೂ
ದರಂತೆ ರಾಯನು ಯುದ್ಧದಲ್ಲಿ ಗೆದ್ದ ಪ್ರದೇಶಗಳನ್ನೂ ಸೂರೆಗೊಂಡ
ಪತ್ತನ್ನೂ ರಾಯಚೂರು ಯುದ್ಧದಲ್ಲಿ ಕೈಸೆರೆ ಸಿಕ್ಕಿದ್ದ ಪ್ರಮುಖದಂಡ
ಯಕರನ್ನು ಬಿಡುಗಡೆ ಮಾಡಬೇಕೆಂದೂ ಸುಲ್ತಾನನು ಸ್ಪಷ್ಟವಾಗಿ ಬರೆ
ದ್ದನು.

ಮೊದಲು ಈ ಪತ್ರದ ವಿಷಯದಲ್ಲಿ ರಾಯನಿಗೆ ಸಂಶಯ ಬಂದಿರಲಿಲ್ಲ.
ರ್ಘವಾಗಿ ಆಲೋಚಿಸುತ್ತಿದ್ದಾಗ ಪತ್ರದಲ್ಲಿನ ಕಡೆಯ ಮಾತು ಸುಲ್ತಾ
ನು ಸಲಬತ್‌ಖಾನನ ಬಗೆ ಬರೆದಿದ್ದ ಮಾತೆಂದು ಹಠಾತ್ತನೆ ಹೊಳೆಯಿತು.
ುದ್ಧದಲ್ಲಿ ಕೈಸೆರೆ ಸಿಕ್ಕಿದ್ದ ಅಸಂಖ್ಯಾತ ಸೈನಿಕರಲ್ಲಿ ದಂಡನಾಯಕನು ಅವ
ಒಬ್ಬನೇ. ಉಳಿದವರೆಲ್ಲ ಯುದ್ಧ ರಂಗದಲ್ಲಿಯೇ ತೀರಿಕೊಂಡಿದ್ದರು.

ಅಸದ್‌ಖಾನನ ದ್ರೋಹದ ಕಲ್ಪನೆ ರಾಯನ ಮನಸ್ಸಿಗೆ ಬರುವ
ಳಿಗೆ ವಿಜಯನಗರದಿಂದ, ಸಲಬತ್‌ಖಾನನನ್ನು ರಾಜಾಜ್ಞೆಯಂತೆ
ತ್ರಹಿಂಸೆ ಕೊಟ್ಟು ಗಲ್ಲಿಗೇರಿಸಲಾಯಿತೆಂಬ ಸುದ್ದಿ ಬಂದಿತು. ಇದ
ಂದಿಗೆ ಮತ್ತೊಂದು ಸಂಗತಿಯೂ ವರದಿಯಾಗಿತ್ತು. ಸಾಯುವವರೆಗೂ
ಬತ್‌ಖಾನನು ಧೈರ್ಯವಾಗಿಯೇ ಇದ್ದನಂತೆ! ಅವನು ತನ್ನ ಮೇಲಿನ
ಜದ್ರೋಹದ ಆಪಾದನೆಯನ್ನು ಒಪ್ಪಿಕೊಳ್ಳದೆ, ತಾನು ಸೆರೆಮನೆಯಲ್ಲಿರು
ಗ, ಅಂತಹ ಯಾವ ವಿದ್ರೋಹದ ಅಕೃತ್ಯಕ್ಕೂ ಕೈ ಹಾಕಿಲ್ಲವೆಂದು ಆಣೆ
ಡಿ ಹೇಳಿದನಂತೆ ! ತಾನು ಸುಲ್ತಾನನ ಹಾಗೂ ರಾಯನ ಮೈತ್ರಿಗೆ
ತ್ತ ಬರಲಿಲ್ಲವೆಂದೂ, ಆದರೆ ಸುಲ್ತಾನನು ತನ್ನ ಆತ್ಮಾಭಿಮಾನಕ್ಕೆ ಕುಂದು
ುವ ಯಾವ ಒಪ್ಪಂದಕ್ಕೆ ಒಪ್ಪಿಕೊಳ್ಳಬಾರದೆಂದು ಹಿಂದೊಮ್ಮೆ ಸಲಹೆ
ಾಡಿದುದು ದಿಟವೆಂದೂ, ಆದರೆ ಸೆರೆಮನೆಯಿಂದ ಪತ್ರ ಬರೆದು ಸುಲ್ತಾ
ನ ಮನಸ್ಸನನ್ನು ಕೆಡಿಸಿದುದು ಸುಳ್ಳೆಂದೂ–ಗಲ್ಲಿನ ಮರದ ಬಳಿ ನಿಂತಾಗ
ು ಹೇಳಿದನಂತೆ! ಅದನ್ನೆಲ್ಲ ನಂಬದೆ ಸೆರೆಮನೆಯ ಅಧಿಕಾರಿ ರಾಜಾಜ್ಞೆ
ನ್ನು ನೆರವೇರಿಸಿಬಿಟ್ಟನಂತೆ !

ಈ ಸುದ್ದಿಯನ್ನು ಕೇಳಿ ರಾಯನಿಗೆ ಅಸದ್‌ಖಾನನ ಮೋಸ ಕೃತ್ಯ

ಸ್ಪಷ್ಟವಾಯಿತು. ಅವನನ್ನು ಕರೆತರಲು ರಾಯನು ದೂತರನ್ನು ಕಳುಹಿಸಿದನು.

ಈ ವೇಳೆಗಾಗಲೇ ಅಸದ್‌ಖಾನನು ರಾಯನ ಕಣ್ಣು ತಪ್ಪಿಸಿ ಮುದ್ಗಲ್ಲಿನಿಂದ ತಪ್ಪಿಸಿಕೊಂಡು ಓಡಿಹೋಗಿದ್ದನು.

ತಾನು ಮುದ್ಗಲ್ಲಿನಿಂದ ಹೊರಡಲು ಅಪ್ಪಣೆಯನ್ನು ಕೊಡಲು ರಾಯನು ನಿರಾಕರಿಸಿದಾಗಲೇ ಅವನಿಗೆ ಅನುಮಾನಕ್ಕೆ ಕಾರಣವಾಗಿತ್ತು. ಬಹುಶಃ ತನ್ನ ಮೋಸ ಕೃತ್ಯವೇನಾದರೂ ರಾಯನಿಗೆ ತಿಳಿದಿದೆಯೋ ಏನೊ ಎಂದು ಅವನು ಶಂಕಿಸಿದನು. ಆದಕ್ಕಾಗಿ ತನ್ನನ್ನು ವಿಜಯನಗರದಿಂದ ಸಲಬತ್‌ಖಾನನ ಸಾವಿನ ವಾರ್ತೆ ಬರುವವರೆಗೂ ನಿಲ್ಲಿಸಿಕೊಂಡಿರಬೇಕೆಂದು ಆಲೋಚಿಸಿದನು. ಆದರಂತೆ ಸಲಬತ್‌ಖಾನನ ಕೊಲೆಯ ವಿವರಗಳು—ಅವನು ಸಾಯುವ ಮುನ್ನ ಹೇಳಿದ್ದ ಕೆಲವು ಸಂಗತಿಗಳು ಮುದ್ಗಲ್ಲನ್ನು ತಲುಪಿ ಅಸದ್‌ಖಾನನ ಕಿವಿಗೂ ಬಿತ್ತು. ರಾಯನು ತನ್ನ ಮೋಸ ಕೃತ್ಯವನ್ನು ಬಯಲು ಮಾಡಿ, ತನ್ನನ್ನು ಸಲಬತ್‌ಖಾನನ ಹತ್ಯಾಕಾರಿ ಎಂದು ಶಿಕ್ಷಿಸಲು ಆಶಿಸುತ್ತಿರುವನೆಂದು ಯೋಚಿಸಿ, ರಾಯನಿಗೆ ಸುದ್ದಿ ಕೊಡದೆ ಮುದ್ಗಲ್ಲಿನಿಂದ ಓಡಿಹೋಗಿದ್ದನು ಅಸದ್‌ಖಾನ್.

ಅವನು ಯಾವುದೋ ನೆವವೊಡ್ಡಿ, ರಾಜಸೇವಕರ ಕಣ್ಣು ತಪ್ಪಿಸಿ ಉಪಾಯಾಂತರವಾಗಿ ಮುದ್ಗಲ್ಲಿನಿಂದ ಹೊರಬಿದ್ದು ಬಿಜಾಪುರವನ್ನು ಸೇರಿ ರಾಯನ ಎಲ್ಲ ಸಂಗತಿಗಳನ್ನೂ ಸುಲ್ತಾನನಿಗೆ ವರದಿ ಮಾಡಿದನು.

ಅಸದ್‌ಖಾನನ ರಾಯಭಾರ ಏನಾಯಿತೋ ಎಂದು ಕಾದು ಕುಳಿತ್ತಿದ್ದ ಸುಲ್ತಾನನಿಗೆ ಅಸದ್‌ಖಾನನು ಸುಳ್ಳು ವರ್ತಮಾನವನ್ನೇ ವರದಿ ಮಾಡಿದನು. ತನ್ನ ತಲೆಯನ್ನುಳಿಸಿಕೊಳ್ಳುವ ಸಲುವಾಗಿ ಅವನು ಮತ್ತೊಂದು ಕಪಟ ನಾಟಕವಾಡಬೇಕಾಯಿತು. ರಾಯನಿಗೆ ಸುಲ್ತಾನನ ಮೇಲಿನ ಕೋಪ, ಅಸಮಾಧಾನಗಳು ತಗ್ಗಿಲ್ಲವೆಂದೂ, ಅದಿಲ್‌ಷಹನ ಹಿರಿಯರು ಮಾಡಿದ ಅಪಮಾನಕ್ಕೆ ಅದಿಲ್‌ಷಹನನ್ನು ಶಿಕ್ಷಿಸುವುದೇ ರಾಯನ ಉದ್ದೇಶವೆಂದೂ, ಅದಿಲ್‌ಷಹನು ತನ್ನ ಕೈಗೆ ಸಿಕ್ಕಿದೊಡನೆ ಅವನಿಗೆ ಅಪಮಾನ ಮಾಡಿ ಅವನನ್ನು ಗಲ್ಲಿಗೇರಿಸಲು ರಾಯನು ನಿಶ್ಚಯಿಸಿರುವನೆಂದೂ ತಿಳಿಸಿದನು. ಈ ಮಾತನ್ನು ಪುಷ್ಟೀಕರಿಸುವಂತೆ ಸಲಬತ್‌ಖಾ

ನನ ಕೊಲೆಯ ಸಮಾಚಾರವನ್ನೂ ತಿಳಿಸಿದನು. ಸಲಬತ್‌ಖಾನನು ರಾಯ ನಿಗೆ ಯಾವ ತಪ್ಪುಮಾಡದೇ ಇದ್ದರೂ, ಅವನು ಸುಲ್ತಾನನ ಮೇಲಿನ ದ್ವೇಷ ತೀರಿಸಿಕೊಳ್ಳಲು ಅವನನ್ನು ಚಿತ್ರಹಿಂಸೆ ಕೊಟ್ಟು ತೀರಿಸಿದನೆಂದೂ ಹೇಳಿದನು.

ಈ ವಾರ್ತೆಯನ್ನು ಕೇಳಿ ಸುಲ್ತಾನನು ಒಮ್ಮೆಲೇ ಕುಸಿದುಬಿದ್ದನು. ಕೆಲವು ಹೊತ್ತು ಸಲಬತ್‌ಖಾನನ ಸಾವನ್ನು ನಂಬದೆ ಮರಳಿ ಮರಳಿ ಪ್ರಶ್ನಿಸಿದನು. ಸಲಬತ್‌ಖಾನನು ಸುಲ್ತಾನನಿಗೆ ಅಚ್ಚುಮೆಚ್ಚಾಗಿದ್ದನು. ತನ್ನ ಸದ್ಗುಣಗಳಿಂದ ಸುಲ್ತಾನನ ಮನಸ್ಸನ್ನು ಸೂರೆಮಾಡಿದ್ದನು. ಅವನು ಸುಲ್ತಾನನ ಪರಮಾಪ್ತ ಮಿತ್ರನಾಗಿದ್ದನು. ಸಲಬತ್‌ಖಾನನಂತಹ ವೀರನನ್ನು ವಿನಾಕಾರಣವಾಗಿ ರಾಯನು ಚಿತ್ರಹಿಂಸೆ ಕೊಟ್ಟು ಕೊಂದಿರಬೇಕಾದರೆ ಅವನಿಗೆ ತನ್ನ ಮೇಲೆ ಇನ್ನೆಷ್ಟು ಕೋಪವಿರಬಹುದೆಂದು ಸುಲ್ತಾನನು ತರ್ಕಿಸಿದನು. ಅವನಿಗೆ ಆಕ್ಷಣಕ್ಕೆ ಅಸದ್‌ಖಾನನ ಎಲ್ಲ ಮಾತು ಸತ್ಯವಾಗಿ ತೋರಿತು. ಅಗಲಿದ ಮಿತ್ರನಿಗಾಗಿ ಸುಲ್ತಾನನು ಶೋಕಿಸಿ ಅವನ ಆತ್ಮಕ್ಕೆ ಶಾಂತಿಯನ್ನು ಕೋರಿ ಪ್ರಾರ್ಥಿಸಿದನು.

ಇಷ್ಟಾದರೂ ಅವನ ಹೃದಯದ ಕ್ಷೋಭೆ ನಿಂತುಹೋಗಲಿಲ್ಲ. ರಾಯನೇಕೆ ಸಲಬತ್‌ಖಾನನ್ನು ಕ್ರೂರವಾಗಿ ಶಿಕ್ಷಿಸಿದನೆಂಬುದು ಬಿಡಿಸಲಾಗದ ಸಮಸ್ಯೆಯಾಯಿತು. ತನ್ನ ಸೇನಾಧಿಪತಿಗಳ ಮೇಲೆ ರಾಯನಿಗೆ ಈ ಬಗೆಯ ಕೋಪವಿದ್ದರೆ ಅಸದ್‌ಖಾನನು ಸುರಕ್ಷಿತವಾಗಿ ಬಂದ ಬಗೆ ಹೇಗೆ? ರಾಯನು ಅವನನ್ನು ಸೆರೆಹಿಡಿದು ಶಿಕ್ಷಿಸದೆ ಇರುತ್ತಿದ್ದನೆ ? ರಾಯನು ತನ್ನ ಪತ್ರಕ್ಕೆ ಉತ್ತರ ಬರೆದು ಕಳುಹಿಸದೆ ಇರುತ್ತಿದ್ದನೆ ? ರಾಯನು ಪತ್ರ ಬರೆಯುವ ಮುನ್ನ ಅಸದ್‌ಖಾನನು ಓಡಿ ಬಂದಿರಬಹುದೆ ? ಇವೇ ಮೊದಲಾದ ಪ್ರಶ್ನೆಗಳು ಸುಲ್ತಾನನ ತಲೆಯನ್ನು ತುಂಬಿದವು. ತನ್ನ ಮೋಸ ಹೊರಪಟ್ಟರೆ, ತನ್ನ ಪ್ರಾಣಕ್ಕೆ ಸಂಚಕಾರ ಬರುವುದೆಂದು ಹೆದರಿ ಅಸದ್‌ಖಾನನು ಸಮಯೋಚಿತವಾದ ಸುಳ್ಳಿನ ಕಥೆಯನ್ನೇ ಹೇಳಿದನು.

ರಾಯನು ತನ್ನನ್ನು ತಿರಸ್ಕಾರವಾಗಿ ಕಂಡು ಮುದ್ಗಲ್ಲಿಗೆ ಹೋಗುತ್ತಲೇ ಸೆರೆಹಿಡಿದನೆಂದೂ, ತಾನು ಸೆರೆಯಿಂದ ತಪ್ಪಿಸಿಕೊಂಡು ಬಂದನೆಂದೂ ತಿಳಿಸಿದನು. ಸುಲ್ತಾನನ ರಾಯಸವನ್ನು, ರಾಯನು ತಿರಸ್ಕಾರದಿಂದ ನೋಡಿ

ದನೆಂದೂ ತನ್ನ ಕತ್ತಿಯಿಂದಲೇ ಸುಲ್ತಾನನಿಗೆ ಉತ್ತರ ಕೊಡುವುದಾಗಿಯೂ ಹೇಳಿವನೆಂದೂ ತಿಳಿಸಿದನು. ಇದರಿಂದ ಸುಲ್ತಾನನ ಮನಸ್ಸಿಗೆ ಪೂರ್ತಿಯಾಗಿ ಸಮಾಧಾನವಾಗಲಿಲ್ಲವಾದರೂ ತಾತ್ಕಾಲಿಕ ಸಮಾಧಾನ ಉಂಟಾಗದಿರಲಿಲ್ಲ.

ಆದರೆ ಈ ಸಮಾಧಾನ ಸುಲ್ತಾನನಿಗೆ ಬಹಳ ಕಾಲ ಉಳಿಯಲಿಲ್ಲ. ಮುದ್ಗಲ್ಲಿನಿಂದ ಬಂದ ರಾಯನ ದೂತರು ಸುಲ್ತಾನನಿಗೆ ಕಾಣಿಸಿಕೊಂಡರು. ಅವರು ರಾಯನ ಪತ್ರವನ್ನು ತಂದಿದ್ದರು. ಅವರ ಮುಖಂಡನಾಗಿ ಗೋವಿಂದರಾಜನು ಬಂದಿದ್ದನು.

ಗೋವಿಂದರಾಜನನ್ನು ಸುಲ್ತಾನನು ಆದರಿಂದ ಬರಮಾಡಿಕೊಂಡು ಅವನು ತಂದಿದ್ದ ರಾಯಸವನ್ನು ಓದಿಕೊಂಡನು.

ಅದನ್ನು ನೋಡುತ್ತಲೇ ಸುಲ್ತಾನನ ಮುಖ ವಿವರ್ಣವಾಯಿತು. ಆ ಪತ್ರದಲ್ಲಿ ರಾಯನು ಅಸದ್‌ಖಾನನು ತನ್ನನ್ನು ಹೇಗೆ ಮೋಸಪಡಿಸಿ, ಸಲಬತ್‌ಖಾನನ್ನು ಕೊಲ್ಲಿಸಿದನೆಂಬ ವಿಷಯ ವಿವರವಾಗಿ ಬರೆಸಿದ್ದನು. ಅಲ್ಲದೆ ಸುಲ್ತಾನನು ತನ್ನೊಡನೆ ಸ್ನೇಹದಿಂದಿರುವುದು ನಿಜವಾದರೆ ದ್ರೋಹಿಯಾದ ಅಸದ್‌ಖಾನನ್ನು ಗೋವಿಂದರಾಜನೊಂದಿಗೆ ಸೆರೆಹಿಡಿದು ಕಳುಹಿಸಿಕೊಡಬೇಕೆಂದೂ ಆ ನೀಚನನ್ನು ತಾನು ಶಿಕ್ಷಿಸಬೇಕೆಂದಿರುವುದಾಗಿಯೂ ತಿಳಿಸಿದ್ದನು. ಅಸದ್‌ಖಾನನನ್ನು ರಾಯನಿಗೆ ಒಪ್ಪಿಸದಿದ್ದ ಪಕ್ಷದಲ್ಲಿ ಅವನ ಎಲ್ಲ ಅಕೃತ್ಯಗಳಿಗೆ ಸುಲ್ತಾನನ ಬೆಂಬಲವಿರುವುದಾಗಿ ತಾನು ತಿಳಿಯುವುದಾಗಿಯೂ ಆ ದ್ರೋಹಿಯನ್ನು ಶಿಕ್ಷಿಸಲು ತಾನೇ ಮತ್ತೆ ದಂಡೆತ್ತಿ ಬರುವುದಾಗಿ ಬೆದರಿಕೆ ಹಾಕಿದ್ದನು.

ಈ ಪತ್ರದ ಬೆದರಿಕೆ ಕೇವಲ ಗೊಡ್ಡು ಬೆದರಿಕೆಯಲ್ಲವೆಂದು ಸುಲ್ತಾನನಿಗೆ ಚೆನ್ನಾಗಿ ತಿಳಿದಿತ್ತು.

ರಾಯನು ಹೇಳಿದ್ದಂತೆ ಅಸದ್‌ಖಾನನ್ನು, ಗೋವಿಂದರಾಜನಿಗೆ ಒಪ್ಪಿಸಿಕೊಟ್ಟರೆ ಮಾತ್ರ ತನ್ನ ಉಳಿವು. ಇಲ್ಲದೆ ಇದ್ದರೆ ಅಸದ್‌ಖಾನನ ಮೋಸ ಕೃತ್ಯದಲ್ಲಿ ತನ್ನ ಭಾಗ ಉಂಟೆಂದು ತಿಳಿದು ರಾಯನು ತಮ್ಮ ಮೇಲೆ ದಂಡೆತ್ತಿ ಬರುವುದು ದಿಟ. ಈ ಬಾರಿ ರಾಯನು ದಂಡೆತ್ತಿ ಬಂದರೆ ತನ್ನ ರಾಜ್ಯ ಧೂಳಿಪಟವಾಗಿ ಹೋಗುತ್ತದೆ. ತಾನು ದಿಕ್ಕಿಲ್ಲದ ಪರದೇಶಿಯಂತೆ

ಆಲೆಯಬೇಕಾಗುತ್ತದೆ. ತಾನು ರಾಯನ ಕೈಗೆ ಸಿಕ್ಕಿಬಿದ್ದರೆ ತನ್ನ ಗತಿ ಪೂರೈಸಿದಂತೆಯೇ ಸರಿ ಎಂದೆಲ್ಲಾ ಆಲೋಚಿಸಿ, ಅಸದ್‌ಖಾನನನ್ನು ಗೋವಿಂದರಾಜನಿಗೆ ಒಪ್ಪಿಸಿ ಕೊಡುವುದೊಂದೇ ಯೋಗ್ಯ ದಾರಿ ಎಂದು ಅಸದ್‌ಖಾನನನ್ನು ಹಿಡಿದುತರಲು ದೂತರನ್ನು ಅಟ್ಟಿದನು. ಅಸದ್‌ಖಾನನನ್ನು ರಾಯನಿಗೆ ಒಪ್ಪಿಸುವುದರಲ್ಲಿ ಸ್ವಾರ್ಥದ ಜೊತೆಗೆ ತನ್ನ ಸ್ನೇಹಿತನಾದ ಸಲಬತ್‌ಖಾನನನ್ನು ಅನ್ಯಾಯವಾಗಿ ಕೊಲ್ಲಿಸಿದ ಆ ವಿಶ್ವಾಸ ಘಾತುಕನಿಗೆ ಶತ್ರುವಿನ ಕೈಯಿಂದಲೇ ಆ ಶಿಕ್ಷೆ ವಿಧಿಸಲ್ಪಡುವುದು ಸಂತೋಷದ ವಿಷಯವೇ ಆಗಿತ್ತು.

ಈ ಸುದ್ದಿಯನ್ನು ಅಸದ್‌ಖಾನನು ಹೇಗೆ ಅರಿತುಕೊಂಡನೋ ಅವನು ಬಿಜಾಪುರದಿಂದ ಸರಿಯಾದ ಸಮಯದಲ್ಲಿ ತಪ್ಪಿಸಿಕೊಂಡು ಸುಲ್ತಾನನ ಎಲ್ಲ ಹಂಚಿಕೆಯನ್ನು ಬುಡಮೇಲು ಮಾಡಿದ್ದನು. ಅವನು ಎಲ್ಲಿಗೆ ಹೋದವನೆಂಬುದು ಯಾರಿಗೂ ತಿಳಿಯದ ವಿಷಯವಾಗಿತ್ತು. ಸುಲ್ತಾನನು ಗೋವಿಂದರಾಜನನ್ನು ಬರಿಗೈಯಲ್ಲಿ ಕಳುಹಿಸಬೇಕಾಯಿತು. ಇದರ ಪರಿಣಾಮವೇನೆಂದು ಸುಲ್ತಾನನಿಗೂ ತಿಳಿದಿತ್ತು!

ಅಸದ್‌ಖಾನನನ್ನು ರಾಯನಿಗೊಪ್ಪಿಸದಿದ್ದರೆ ರಾಯನ ಕ್ರೋಧ ತನ್ನ ಮೇಲೆ ತಿರುಗಿ ಅಸದ್‌ಖಾನನ ಶೋಧನೆಗಾಗಿ ತಾನೇ ದಂಡೆತ್ತಿ ಬರುವುದು ಖಂಡಿತವೆಂದು ತಿಳಿದಿದ್ದನು. ಈ ವಿಪತ್ತಿನಿಂದ ಪಾರಾಗಲು ತಾನು ಅಸದ್‌ಖಾನನನ್ನು ಹುಡುಕಿಕೊಡುವುದೊಂದೇ ದಾರಿಯಾಗಿತ್ತು. ಆದರೆ ಅಸದ್‌ಖಾನನು ಎಲ್ಲಿ ಅಡಗಿದ್ದಾನೆನ್ನುವುದು ಯಾರಿಗೂ ತಿಳಿದಿರಲಿಲ್ಲ. ರಾಯನು ಅವನ ಶೋಧನೆಗೆ ಹೊರಡುವ ಮುನ್ನ ತಾನು ಅಸದ್‌ಖಾನನನ್ನು ಹಿಡಿದು ಅವರಿಗೆ ಒಪ್ಪಿಸಿ ಆ ಮೂಲಕ ಸಂಧಿಯನ್ನು ಸಾಧಿಸಬೇಕೆಂದು ಸುಲ್ತಾನನು ನಿಶ್ಚಯಿಸಿ ಕೂಡಲೇ ಕಾರ್ಯಾಚರಣೆಗೆ ತೊಡಗಿದನು.

ಇಷ್ಟರಲ್ಲಿ ರಾಯನು ತನ್ನ ಸಕಲ ಸೈನ್ಯಸಮೇತ ಅಸದ್‌ಖಾನನ ಶೋಧನೆಗೆ ಹೊರಟ್ಟಿದ್ದಾನೆಂದು ತಿಳಿಯಿತು. ಅಸದ್‌ಖಾನನು ಬಿಜಾಪುರದಿಂದ ಓಡಿಹೋಗಿ, ಗುಲ್ಬರ್ಗದಲ್ಲಿ ಅಡಗಿರುವನೆಂಬ ಸುದ್ದಿ ಗೂಢಚಾರರಿಂದ ರಾಯನಿಗೆ ತಿಳಿಯಿತು. ತಾವು ಗುಲ್ಬರ್ಗವನ್ನು ಮುತ್ತಿದರೆ, ಗುಲ್ಬರ್ಗ ತಮ್ಮ ವಶವಾಗುವುದರೊಂದಿಗೆ ಅಸದ್‌ಖಾನನು ತಮ್ಮ ಕೈಸೆರೆ

ಸಿಕ್ಕುವನೆಂದು ತಿಳಿದು ರಾಯನು ಗುಲ್ಬರ್ಗದ ಮೇಲೆ ಧಾಳಿಯಿಡಲು ಸೈನ್ಯ ಸಮೇತ ಹೊರಟನು.

ಈ ವಾರ್ತೆಯನ್ನು ಕೇಳಿ ಸುಲ್ತಾನನು ತಲ್ಲಣಗೊಂಡನು. ಸುಲ್ತಾನನಿಗೆ ಈ ಪ್ರಸಂಗದಲ್ಲಿ ಏನು ಮಾಡಬೇಕೆಂದು ತೋರದಾಯಿತು. ತಾನು ಗುಲ್ಬರ್ಗದ ರಕ್ಷಣೆಗೆ ಹೊರಡಲು ತನ್ನ ಬಳಿಯಿದ್ದ ಸೈನ್ಯ ರಾಯನನ್ನು ಎದುರಿಸಲು ಸಾಕಷ್ಟಿರಲಿಲ್ಲ. ವೃಥಾ ರಾಯನೊಡನೆ ಸೆಣಸಿದರೆ ಸೋಲು ಖಂಡಿತ, ತಾನು ರಾಯನ ಗೊಡವೆಗೆ ಹೋಗದಿರುವುದೇ ಕ್ಷೇಮವೆಂದು ಸುಲ್ತಾನನು ಬಿಜಾಪುರದಿಂದಲೇ ರಾಯನ ಚಲನವಲನಗಳನ್ನು ನೋಡುತ್ತಾ ಕುಳಿತನು.

ಗುಲ್ಬರ್ಗವನ್ನು ಸುಲಭವಾಗಿ ವಶಮಾಡಿಕೊಳ್ಳಬೇಕೆಂದಿದ್ದ ರಾಯನ ಊಹೆ ಸುಳ್ಳಾಗಿತ್ತು. ಅದು ಶಕ್ತನಾದ ಆದಿಲ್‌ಖಾನ್ ಎಂಬ ದಳಪತಿಯ ಆಳ್ವಿಕೆಗೆ ಒಳಪಟ್ಟಿತ್ತು. ಅವನು ಅದಿಲ್‌ಷಹನಂತೆ ಹೇಡಿಯಲ್ಲ. ಪ್ರಾಣಹೋದರೂ ಶತ್ರುಗಳಿಗೆ ಕೋಟೆಯನ್ನು ವಶಮಾಡಬಾರದೆಂಬ ವೀರ ಪ್ರತಿಜ್ಞೆ ಅವನದು. ಅವನು ಸಹಾಯಕ್ಕಾಗಿ ಬಹಮನೀ ಸುಲ್ತಾನರಿಗೆ ಓಲೆ ಬರೆದು, ಅವರ ಸಹಾಯ ಒದಗುವವರೆಗೂ ದುರ್ಗವನ್ನು ಕಾಯಬೇಕೆಂದು ನಿರ್ಧರಿಸಿದ್ದನು. ಶತ್ರುಗಳು ಗುಲ್ಬರ್ಗದ ಮೇಲೆ ಧಾಳಿಯಿಡಲು ಬರುತ್ತಿರುವರೆಂಬ ಸುದ್ದಿಯನ್ನು ಕೇಳಿದೊಡನೆಯೇ ಅವನು ಕೋಟೆಯ ಬಾಗಿಲನ್ನು ಭದ್ರಪಡಿಸಿ, ಪ್ರತಿಯೊಂದು ಆಯಕಟ್ಟಿನ ಸ್ಥಳಗಳಲ್ಲೂ ಸೈನಿಕರನ್ನೂ, ತೋಪುಗಳನ್ನೂ ನಿಲ್ಲಿಸಿ ಮುಂಜಾಗ್ರತೆಯ ಕ್ರಮಗಳನ್ನು ತೆಗೆದುಕೊಂಡಿದ್ದನು. ಅಲ್ಲದೆ ಕೋಟೆಯಲ್ಲಿ ಸಾಕಷ್ಟು ಆಹಾರವನ್ನು ಶೇಖರಿಸಿದ್ದನು.

ಬಿಜಾಪುರದ ಸುಲ್ತಾನನು ಮಾಡಿದ್ದಂತೆ ಗುಲ್ಬರ್ಗದ ದಳಪತಿಯೂ ಯುದ್ಧವಿಲ್ಲದೆ ನಗರವನ್ನು ವಶಪಡಿಸುವನೆಂದು ಭಾವಿಸಿದ್ದ ರಾಯನಿಗೆ ನಿರಾಶೆಯೇ ಆಯಿತು. ಆದರೂ ಗುಲ್ಬರ್ಗವನ್ನು ರಕ್ತಪಾತವಿಲ್ಲದೆ ವಶಪಡಿಸಿಕೊಳ್ಳುವ ಹಾಗೆ ಮಾಡಬೇಕೆಂದು ದುರ್ಗಾಧಿಪತಿಗೆ ಯುದ್ಧದ ಆಹ್ವಾನ ಕೊಡುವ ಮುನ್ನ ನಯವಾಗಿ ಒಂದು ಮಾತು ತಿಳಿಸಬೇಕೆಂದು ರಾಯಭಾರಿಯನ್ನು ಕಳುಹಿಸಿದನು. ಗುಲ್ಬರ್ಗದಲ್ಲಿ ಅಡಗಿಕೊಂಡು

ಕುಳಿತಿರುವ ರಾಜದ್ರೋಹಿ ಅಸದ್‌ಖಾನನ್ನು ಕೈಸೆರೆ ಹಿಡಿದು ತಮಗೆ ಒಪ್ಪಿಸಿದರೆ ಯುದ್ಧವಿಲ್ಲದೆ ತಾವು ಸ್ನೇಹಿತರಂತೆ ಉಳಿಯಬಹುದೆಂದು ಹೇಳಿ ಕಳುಹಿಸಿದನು.

ಇದಕ್ಕೆ ದುರ್ಗಾಧಿಪತಿ ಕೊಟ್ಟ ಉತ್ತರದಿಂದ ರಾಯನ ಸ್ವಾಭಿಮಾನಕ್ಕೆ ಬರೆ ಕೊಟ್ಟಂತಾಯಿತು. ಯುದ್ಧಕ್ಕೆಂದೇ ಬಂದಿರುವ ರಾಯನು ತನ್ನ ಮುಂದೆ ಯಾವ ಕಪಟ ನಾಟಕವಾಡಿದರೂ ಅವುಗಳಿಗೆ ಬೆರಗಾಗಿ, ದುರ್ಗವನ್ನು ಒಪ್ಪಿಸುವುದಿಲ್ಲವೆಂದೂ ದುರ್ಗದ ಸಮಸ್ತ ರಕ್ಷಣೆಯ ಭಾರ ತನ್ನದೆಂದೂ, ಯುದ್ಧ ಮಾಡಿಯೇ ಅದನ್ನು ವಶಪಡಿಸಿಕೊಳ್ಳಬೇಕೇಹೊರತು ಬೊಬ್ಬೆ ಬೆದರಿಕೆಗಳಿಂದ ಖಂಡಿತ ಸಾಧ್ಯವಿಲ್ಲವೆಂದು ವಿರೋಚಿತವಾದ ಉತ್ತರವನ್ನೇ ದಳಪತಿ ಕೊಟ್ಟಿದ್ದನು.

ಇದರ ಪರಿಣಾಮವಾಗಿ ಯುದ್ಧ ಅನಿವಾರ್ಯವಾಯಿತು. ರಾಯನ ಸೈನಿಕರು ಯುದ್ಧವನ್ನು ಘೋಷಿಸಿ ಗುಲ್ಬರ್ಗದ ಮೇಲೇರಿ ಹೋದರು. ಆಗ ಅವರಿಗೆ ಆದಿಲ್‌ಖಾನನೆಂಬುವನು ಎಂತಹ ವೀರನೆಂಬುದು ತಿಳಿಯಿತು.

ಆದಿಲ್‌ಖಾನನು ಕಡಮೆಯ ಸಂಖ್ಯೆಯ ಸೈನ್ಯವನ್ನು ಹೊಂದಿದ್ದರೂ ದುರ್ಗವನ್ನು ಸುಲಭವಾಗಿ ಬಿಟ್ಟುಕೊಡಲಿಲ್ಲ. ಅವನು ರಾಯನ ಸೈನ್ಯಕ್ಕೆ ಬಲವಾದ ಕಾಳಗವನ್ನೇ ಕೊಟ್ಟನು. ಆದರೆ ರಾಯನ ಅಧಿಕ ಸಂಖ್ಯೆಯ ಸುಸಜ್ಜಿತವಾದ ಸೈನ್ಯದ ಮುಂದೆ ಗುಲ್ಬರ್ಗ ಬಹಳ ಕಾಲ ನಿಲ್ಲದೇ ಹೋಯಿತು. ದುರ್ಗದ ಬಾಗಿಲುಗಳನ್ನು ಮದ್ದಾನೆಗಳ ಸಹಾಯದಿಂದ ಒಡೆಯಲಾಯಿತು. ಕಡೆಗೂ ನಗರವನ್ನು ಸೈನಿಕರು ಪ್ರವೇಶಿಸಿಯೇ ಬಿಟ್ಟರು. ನಗರದ ಅಳಿದುಳಿದ ಸೈನಿಕರೊಂದಿಗೆ ಬಲವಾದ ಕಾಳಗವಾಯಿತು. ಈ ಕಾಳದಲ್ಲಿ ಆದಿಲ್‌ಖಾನನು ಮಡಿದು ಬಿದ್ದನು. ಅವನ ತಲೆಯನ್ನು ಕತ್ತರಿಸಿ, ಅದನ್ನು ಊರಿನಲ್ಲೆಲ್ಲಾ ಮೆರವಣಿಗೆ ಮಾಡಿದರು. ಜನರನ್ನು ಅಂಕೆಯಲ್ಲಿಡಲು ಈ ಕೆಲಸ ಸಾಕಾಗಿತ್ತು.

ಜನ ಮುಂದೆ ತಮಗೇನು ಅನಾಹುತ ಕಾದಿದೆಯೋ ಎಂದು ಹೆದರಿ ಕುಳಿತರು.

ಆದರೆ ಜನ ಹೆದರುವ ಕಾರಣವಿರಲಿಲ್ಲ. ರಾಯನಿಗೆ ಗುಲ್ಬರ್ಗವನ್ನು ಬಿಜಾಪುರದಂತೆ ಹಾಳುಗೆಡಹಲು ಇಷ್ಟವಿರಲಿಲ್ಲ. ಅಲ್ಲದೆ ಗುಲ್ಬರ್ಗದ

ಮೇಲೆ ದಂಡೆತ್ತಿ ಹೋಗುವುದರ ಉದ್ದೇಶ ಅಸದ್‌ಖಾನನನ್ನು ಸೆರೆಹಿಡಿಯು ವುದು. ಅವನು ಸಿಕ್ಕಿದರೆ ತಮ್ಮ ಉದ್ದೇಶ ನೆರವೇರಿದಂತೆಯೇ ಸರಿ. ಹೀಗಾಗಿ ದುರ್ಗ ವಶವಾದ ಕೂಡಲೇ ಅಸದ್‌ಖಾನನಿಗಾಗಿ ಪ್ರತಿಯೊಂದು ಮನೆ, ಬೀದಿಗಳನ್ನು ಬಿಡದೆ ಶೋಧಿಸಿದರು. ಏನಾದರೂ ಅಸದ್‌ಖಾನನು ಪತ್ತೆಯಾಗಲಿಲ್ಲ.

ಅಸದ್‌ಖಾನನ ಅದೃಷ್ಟ ಚೆನ್ನಾಗಿದ್ದು ಅವನು ಇಲ್ಲಿಂದಲೂ ಸಕಾಲ ದಲ್ಲಿ ತಪ್ಪಿಸಿಕೊಂಡಿದ್ದನು.

ರಾಯನ ಸೈನ್ಯ ದುರ್ಗವನ್ನು ಪ್ರವೇಶಿಸುವ ವೇಳೆಗೆ ಅಸದ್‌ಖಾನನು ದುರ್ಗದಲ್ಲೇ ಇರಲಿಲ್ಲ. ಅಸದ್‌ಖಾನನು ವೇಷ ಮರೆಸಿಕೊಂಡು ತನ್ನ ದುರ್ಗವಾದ ಬೆಳಗಾಂಗೆ ಓಡಿಹೋದನು. ಅಸದ್‌ಖಾನನು ಒಂದು ದಿನ ತಡಮಾಡಿದ್ದರೆ ಅವನು ರಾಯನಿಗೆ ಕೈಸೆರೆಯಾಗಬೇಕಾಗಿತ್ತು. ಅಸದ್ ಖಾನನ ಪಲಾಯನದಿಂದ ಕೈಗೆ ಬಂದ ತುತ್ತು ಬಾಯಿಗಿಲ್ಲವಾಯಿತು. ರಾಯನು ಕೋಪದಿಂದ ಹಲ್ಲುಕಡಿದನು.

ರಾಯನು ಸೈನ್ಯಸಮೇತ ಕೆಲವುಕಾಲ ಗುಲ್ಬರ್ಗ್ಗದಲ್ಲಿ ಬೀಡುಬಿಟ್ಟನು. ಗುಲ್ಬರ್ಗವನ್ನು ವಶಪಡಿಸಿಕೊಂಡಿದ್ದರೂ ರಾಯನ ಆಶಯುಗಳೊಂದೂ ನೆರ ವೇರಿರಲಿಲ್ಲ. ಸುಲಭವಾಗಿ ಕೈಸೆರೆ ಹಿಡಿದು ಅಸದ್‌ಖಾನನನ್ನು ತನಗೆ ಒಪ್ಪಿಸಬಹುದಾಗಿದ್ದ ಅದಿಲ್‌ಷಹನು ಉದಾಸೀನಮಾಡಿದುದರಿಂದ ಅಸದ್ ಖಾನನು ತಪ್ಪಿಸಿಕೊಂಡು ಹೋದನೆಂದು ರಾಯನಿಗೆ ಅದಿಲ್‌ಷಹನ ಮೇಲೆ ಕೋಪ ಬಂತು. ಆ ಕೋಪವನ್ನು ಬೇರೊಂದು ರೀತಿಯಲ್ಲಿ ತೀರಿಸಿ ಕೊಂಡನು.

ಗೋಲ್ಕಂಡದ ಪೂರ್ವದ ಬಹಮನೀ ರಾಜ್ಯದ ಅರಸುವಂಶಕ್ಕೆ ಸೇರಿದ್ದ ಮೂವರು ರಾಜಕುಮಾರರನ್ನು ಬಿಜಾಪುರದ ಸುಲ್ತಾನ್ ಆದಿಲ್‌ಷಹನು ಬಹಳ ಕಾಲದಿಂದಲೂ ಗುಲ್ಬರ್ಗದಲ್ಲಿ ಸೆರೆಮನೆಯಲ್ಲಿಟ್ಟಿದ್ದನು. ರಾಯನು ಅವರನ್ನು ಸೆರೆಯಿಂದ ಬಿಡುಗಡೆ ಮಾಡಿ ಅವರಲ್ಲಿ ಹಿರಿಯನಾದ ಅಲ್ಲಾವು ದ್ದೀನನಿಗೆ ಪಟ್ಟಕಟ್ಟಿ ಅವನನ್ನು ಬಹಮನೀ ಚಕ್ರಾಧಿಪತ್ಯದ ಸಾಮ್ರಾಟ ನೆಂದು ಘೋಷಿಸಿದನು. ಇದರಿಂದ ಸ್ವತಂತ್ರ ರಾಜ್ಯಗಳಾದ ಬಿದರೆ, ಬೀ ರಾರ್, ಬಿಜಾಪುರ, ಅಹಮದ್ ನಗರಗಳು ಅಲ್ಲಾವುದ್ದೀನನ ಆಶ್ರಿತರಾಜ್ಯಗ

ಳಾದವು. ಈ ಕಾರ್ಯದಿಂದ ಸುಪ್ರೀತನಾದ ಕೃಷ್ಣದೇವರಾಯನು 'ಯವನರಾಜ್ಯಪ್ರತಿಷ್ಠಾಪನಾಚಾರ್ಯ' 'ಅಷ್ಟ ವಿಗ್ರಹ ಮನೋವಲ್ಲಭ' ಎನ್ನುವ ಬಿರುದನ್ನು ಧರಿಸಿದನು.

ಅಲ್ಲಾವುದ್ದೀನನನ್ನು ಸಿಂಹಾಸನದ ಮೇಲೆ ಕೂಡಿಸಿ ಬಹಮನೀ ರಾಜ್ಯಗಳ ಚಕ್ರವರ್ತಿ ಎಂದು ಘೋಷಿಸಿದುದರಿಂದ ಉಳಿದ ಸುಲ್ತಾನರಿಗೆ ರಾಯನ ಮೇಲೆ ಅಸಮಾಧಾನ ಉಂಟಾಯಿತು. ಇನ್ನು ಕೈಕಟ್ಟಿಕೊಂಡು ಕುಳಿತರೆ ತಮ್ಮ ಅಸ್ತಿತ್ವವನ್ನೇ ರಾಯನು ತೊಡೆದುಬಿಡುವನೆಂದು ಅವರು ಹೆದರಿದರು. ಅವರು ಅದಿಲ್‌ಷಹನಿಗೆ ಓಲೆಬರೆದು ತಾವು ತಮ್ಮ ಸೈನ್ಯ ಬಲದೊಂದಿಗೆ ಅವನ ನೆರವಿಗೆ ಬರುವುದಾಗಿ ತಿಳಿಸಿ, ಅವನು ಮತ್ತೆ ರಾಯನ ಮೇಲೆ ದಂಡೆತ್ತಿಹೋಗಬೇಕೆಂದು ಪ್ರೋತ್ಸಾಹ ಕೊಟ್ಟರು. ಸುಲ್ತಾನರು ಈ ಸನ್ನಾಹದಲ್ಲಿ ತೊಡಗಿರುವಾಗಲೇ, ಕೃಷ್ಣದೇವರಾಯನ ಗಮನ ಬೆಳಗಾಂ ದುರ್ಗದ ಕಡೆಗೆ ಹರಿದಿತ್ತು.

ಬೆಳಗಾಂದುರ್ಗ ಮೊದಲಿನಿಂದಲೂ ಅಸದ್‌ಖಾನನಿಗೆ ಸೇರಿದ್ದ ದುರ್ಗ. ಅಸದ್‌ಖಾನನು ಬೆಳಗಾಂ ದುರ್ಗವನ್ನು ಸೇರಿಕೊಂಡು ಅಲ್ಲಿ ಪ್ರಬಲನಾಗಲು ಪ್ರಯತ್ನಿಸಿದನು. ಸುತ್ತಮುತ್ತಲಿನ ರಾಜ್ಯಗಳನ್ನು ಗೆದ್ದು ಬೆಳಗಾಂ ರಾಜ್ಯವಾಗಿ ಮಾಡಿಕೊಳ್ಳಲು ಸನ್ನಾಹಮಾಡಿದನು. ಬೆಳಗಾಂ ರಾಜ್ಯದ ಎಲ್ಲೆಗಳಾದ ಬಿಜಾಪುರ ಹಾಗೂ ವಿಜಯನಗರ ರಾಜ್ಯಗಳನ್ನು ಆಕ್ರಮಿಸುವ ಎದುಗಾರಿಕೆಯಿಲ್ಲದೆ, ಗೋವೆಯನ್ನು ಆಕ್ರಮಿಸಲು ಸೈನ್ಯಸಮೇತ ಹೊರಟನು. ಗೋವೆ ಅಸದ್‌ಖಾನನ ವಶವಾದರೆ, ಪೋರ್ಚುಗೀಸರ ಮೂಲಕ ನಡೆಯುತ್ತಿದ್ದ ವಿಜಯನಗರದ ಅಶ್ವವ್ಯಾಪಾರಕ್ಕೆ ತೊಂದರೆ ಬರುವುದೆಂದು ಆಲೋಚಿಸಿ ಗೋವೆಯನ್ನು ಆಕ್ರಮಿಸಲು ಹೊರಟಿದ್ದ ಅಸದ್‌ಖಾನನ ಆಕ್ರಮಣವನ್ನು ತಡೆದು, ಅವನನ್ನು ಸೆರೆಹಿಡಿದು ತರಲು ರಾಯನು ಗೋವಿಂದರಾಜನನ್ನು ತಕ್ಕ ಸೈನ್ಯದೊಂದಿಗೆ ಕಳುಹಿಸಿಕೊಟ್ಟನು.

ಗೋವಿಂದರಾಜನು ಅಸದ್‌ಖಾನನನ್ನು ಹಿಡಿದುತರಲು ಗೋವೆಯ ಕಡೆಗೆ ಸೈನ್ಯ ಸಮೇತ ಹೊರಟನು.

ಕೃಷ್ಣದೇವರಾಯನಿಗೆ ಬೇಟೆ ಎಂದರೆ ಪ್ರೀತಿ. ಬೇಟೆಯಲ್ಲಿ ಅವನಿಗೆ ನಿಷ್ಣಾತ ಜ್ಞಾನವಿತ್ತು. ಒಮ್ಮೆ ಅವನು ಬೇಟೆಗೆ ಹೊರಟನೆಂದರೆ ಅನೇಕ ದಿನಗಳ ಪರ್ಯಂತ ಕಾಡಿನಲ್ಲಿಯೇ ನಿಲ್ಲುತ್ತಿದ್ದನು. ಎಷ್ಟೋ ವೇಳೆ ಪ್ರಾಣದ ಮೇಲಿನ ಆಸೆಯನ್ನೂ ತೊರೆದು ಬೇಟೆಯಾಡುತ್ತಿದ್ದನು. ಪ್ರಾಣಾಪಾಯ ಒದಗಿದ ಒಂದೆರಡು ಸಂದರ್ಭಗಳಲ್ಲಿ ರಾಯನು ದೈವವಶಾತ್ ಅವುಗಳಿಂದ ಪಾರಾಗಿದ್ದನು. ರಾಯನು ಬೇಟೆಯಾಡಲು ಉತ್ತಮ ದರ್ಜೆಯ ತುರಗಗಳನ್ನೂ, ಅವುಗಳಿಗೆ ಹಾಕುವ ಕಡಿವಾಣ, ಜೀನು ಮೊದಲಾದುವುಗಳನ್ನು ಓರ್ಮಜ್, ಶಿರಾಜ್, ಗುಜರಾತ್ ಮುತ್ತು ಪೈತಲಗಳಿಂದ ತರಿಸುತ್ತಿದ್ದನು. ಅಲ್ಲದೆ ರಾಯನ ಬಳಿ ಅನೇಕ ಬೇಟೆ ನಾಯಿಗಳಿದ್ದವು. ಅವುಗಳಿಗೆ ಅವುಗಳ ಶಕ್ತಿಸಾಮರ್ಥ್ಯಗಳಿಗನುಗುಣವಾದ ಹೆಸರುಗಳು ಕೊಡಲ್ಪಟ್ಟಿದ್ದವು. ವ್ಯಾಘ್ರ, ಕಚ್ಚಿದರೆ ಬಿಡ, ಅಸುರಪೋತ, ಹನುಮಂತ, ಚಂಗಲ, ಭೈರವ, ಕತ್ತರಿ, ಸಂಪಗಿ, ಬೆಳ್ಳಿಗುಂಡು, ವಾಯುವೇಗಿ, ಪುಟ್ಲಿಂಗ, ಸಾಳ್ವ, ವೃತ್ಯನಾಭಿ ಮೊದಲಾದ ನೂರಾರು ಹೆಸರಿನ ನಾಯಿಗಳಿದ್ದವು. ಬೇಟೆ ನಾಯಿಗಳನ್ನು ಕೂಡಿಕೊಂಡು ಕಣೇ ಹಂದಿಯನ್ನು ಬೇಟೆಯಾಡುವುದೆಂದರೆ ರಾಯನಿಗೆ ಬಲು ಪ್ರೀತಿಯ ವಿನೋದ. ಒಮ್ಮೆಯಂತೂ ಕಣೇಹಂದಿಯ ಬೇಟೆಗೆ ಹೊರಟಿದ್ದ ರಾಯನು ಕುದುರೆಯಿಂದ ಜಾರಿ ಜ್ಞಾನ ತಪ್ಪಿಬಿದ್ದನು. ಆಗ ಗಾಯಗೊಂಡಿದ್ದ ಕಣೇಹಂದಿ ರಾಯನ ಮೇಲೆ ಆಕ್ರೋಶದಿಂದ ಎರಗಿ ಬಂದಿತ್ತು. ಅದರ ಹೊಡತಕ್ಕೆ ರಾಯನು ಸಿಕ್ಕಿದ್ದರೆ ರಾಯನ ಕಥೆ ಪೂರೈಸುತ್ತಿತ್ತು. ಅಂತಹ 'ವಿಷಮ ವೇಳೆಯಲ್ಲಿ ರಾಯನು ಹತ್ತಿಕೊಂಡಿದ್ದ ಕುದುರೆ ನೆರವಿಗೆ ಬಂದು ರಾಯನನ್ನು ಉಳಿಸಿತ್ತು. ಅದು ಮುಂಗಾಲುಗಳನ್ನು ಎತ್ತಿ ರಾಯನ ಬಳಿಗೆ ಹಂದಿ ಬರದಂತೆ ಪುಟು ಪುಟಿಸಿ ಕೆನೆದು ಇತರರಿಗೆ ರಾಯನು ವಿಪತ್ತಿನಲ್ಲಿರುವುದನ್ನು ತಿಳಿಸಿತ್ತು. ರಾಯನನ್ನು ಅರಸಿಕೊಂಡುಬಂದ ಸಂಗಡಿಗರು ಕೂಡಲೇ ಹಂದಿಯನ್ನು ಕೊಂದು ಕುದುರೆಯನ್ನು ಕೊಂಡಾಡಿದರು. ಅನಂತರ ಪ್ರಜ್ಞೆ ತಿಳಿದ ರಾಯನಿಗೆ ತನ್ನ ಕುದುರೆ ಹೇಗೆ ತನ್ನ ಪ್ರಾಣ ರಕ್ಷಣೆ ಮಾಡಿತೆಂದು ತಿಳಿದ ಮೇಲೆ ಕುದುರೆಗೆ ಯಾವ

ರೀತಿಯಲ್ಲಿ ಕೃತಜ್ಞತೆಯನ್ನು ತೋರಿಸಬೇಕೆಂದು ತಿಳಿಯದೆ ಅದರ ಕತ್ತಿಗೆ ಬಹು ಬೆಲೆಯುಳ್ಳ ಹಾರವನ್ನು ಹಾಕಿ ಅದನ್ನು ತನ್ನ ಪ್ರಿಯಮಿತ್ರನಂತೆ ನೋಡಿಕೊಂಡನು. ಆ ದಿನದಿಂದ ರಾಯನು ಬೇಟೆಗೆ ಒಂಟಿಯಾಗಿ ಹೋಗುತ್ತಿರಲಿಲ್ಲ.

ರಾಯನ ಪೂರ್ವಿಕರಾಜರೆಲ್ಲರೂ ಬೇಟೆಯಾಡುವುದರಲ್ಲಿ ತುಂಬಾ ಆಸಕ್ತಿ ತೆಗೆದುಕೊಂಡಿದ್ದರು. ಇಮ್ಮಡಿ ಪ್ರೌಢದೇವರಾಯನಿಗೆ 'ಗಜಬೇಂಟೆಕಾರ' ನೆಂಬ ಬಿರುದಿತ್ತು. ಅವನಿಗೆ ಕಾಡಿನ ಆನೆಗಳನ್ನು ಪಳಗಿಸಿದ ಆನೆಗಳ ಮೂಲಕ ಹಳ್ಳಕ್ಕೆ ಕೆಡವಿ, ಅಲ್ಲಿ ಅನ್ನನೀರು ಕೊಡದೆ ಒಣಗಿಸಿ, ಪಳಗಿಸುವ ಕಲೆಯಲ್ಲಿ ಅಪೂರ್ವ ಕೌಶಲ್ಯವಿತ್ತು. ಅಂತಲೇ ಅವನ ಸೈನ್ಯದಲ್ಲಿ ಆನೆಗಳ ಸಂಖ್ಯೆ ಅಪರಿಮಿತವಾಗಿತ್ತು.

ರಾಯನು ತನ್ನ ಪೂರ್ವಿಕರಂತೆ 'ಗಜಬೇಂಟ' ಕಾರನಾಗದೆ ಅವನು 'ನರಬೇಂಟೆ'ಕಾರನಾಗಿದ್ದನು. ಅವನಿಗೆ ವನಮೃಗಗಳ ಬೇಟೆಗಿಂತಲೂ ಶತ್ರುರಾಜರ ಬೇಟೆ ಪ್ರಿಯವಾಗಿತ್ತು. ಅಂತಲೇ ಗಜಪತಿಗಳೆನಿಸಿಕೊಂಡಿದ್ದ ಉತ್ಕಲದ ಅರಸರ ಸೊಕ್ಕನ್ನು ಮುರಿದಿದ್ದನು. ಅಶ್ವಪತಿಗಳಾದ ಬಿಜಾಪುರದ ಸುಲ್ತಾನನನ್ನು ಯುದ್ಧದಲ್ಲಿ ಸೋಲಿಸಿ, ಪರದೇಶಿಯನ್ನಾಗಿ ಮಾಡಿದ್ದನು. ಅಸದ್‌ಖಾನನ ಪಿತೂರಿಗೆ ಬಲಿಯಾಗಿ ರಾಯನು ಸಲಬತ್‌ಖಾನನ ಕೊಲೆಮಾಡಿದ ಮೇಲೆ, ಸಲಬತ್‌ಖಾನನ ಹತ್ಯಾಕಾರಿ ಅಸದ್‌ಖಾನನನ್ನು ಹಿಡಿತರಿಸಿ ಕ್ರೂರ ರೀತಿಯಲ್ಲಿ ಶಿಕ್ಷಿಸಬೇಕೆಂದು ರಾಯನು ಹೊರಟು ಅಸದ್‌ಖಾನನನ್ನು ಬೇಟೆಯಾಡುತ್ತಾ ಗುಲ್ಬರ್ಗಕ್ಕೆ ಬಂದಿದ್ದನು. ದುರದೃಷ್ಟದಿಂದ ಕೈಗೆ ಸಿಕ್ಕಿದ ಬೇಟೆ ತಪ್ಪಿಸಿಕೊಂಡು ಹೋಗಿತ್ತು. ಅವನನ್ನು ಹಿಡಿದು ತರಲು ಗೋವಿಂದರಾಜನನ್ನು ಕಳುಹಿಸಿ ರಾಯನು ಗೋವಿಂದರಾಜನು ಬರುವವರೆಗೂ, ಗುಲ್ಬರ್ಗದಲ್ಲಿಯೇ ಬೀಡುಬಿಟ್ಟನು. ಹೊತ್ತು ಕಳೆಯಲು ಅನೇಕ ಬಗೆಯ ಮನರಂಜನೆಗಳಲ್ಲೂ, ಮೃಗಯಾವಿಲಾಸ ವಿನೋದಗಳಲ್ಲೂ ತೊಡಗಿದ್ದನು.

ಇಂತಿರುವಲ್ಲಿ ಒಂದು ದಿನ ಗುಲ್ಬರ್ಗದ ಹೊರವಲಯದಲ್ಲಿ ವಿಹಾರಾರ್ಥವಾಗಿ ಬರುತ್ತಿದ್ದಾಗ, ಹಳ್ಳಿಗನೊಬ್ಬನ ಆರ್ತಧ್ವನಿ ಕೇಳಿಸಿತು. ಏನೆಂದು ವಿಚಾರಿಸಲಾಗಿ ಅವನ ಬಳಿಯಲ್ಲಿದ್ದ ಒಂದೇ ಒಂದು ಹಸುವನ್ನು–ತುಂಬು

ಗಬ್ಬದ ಹಸುವನ್ನು ಹುಲಿ ಹಿಡಿದುಕೊಂಡು ಹೋಯಿತೆಂದೂ ಅದಕ್ಕಾಗಿ ಆವನು ರೋದಿಸುತ್ತಿರುವುದಾಗಿಯೂ ತಿಳಿಯಿತು. ರಾಯನ ಕುತೂಹಲ ಇದರಿಂದ ಕೆರಳಿತು. ಹುಲಿಯ ಬಗ್ಗೆ ಹೆಚ್ಚು ವಿವರಗಳನ್ನು ತಿಳಿದುಕೊಳ್ಳ ಲಾಶಿಸಿದನು.

ಆ ಪ್ರದೇಶದಲ್ಲಿ ಬಹಳ ದಿನಗಳಿಂದಲೂ ಒಂದು ಹೆಬ್ಬುಲಿ ವಾಸಿ ಸುತ್ತಿದ್ದು, ಸುತ್ತಮುತ್ತಲಿನ ಹಳ್ಳಿಗಳಿಗೆ ರಾತ್ರಿ ಕಾಲದಲ್ಲಿ ನುಗ್ಗಿ ದನಕರು ಗಳನ್ನು ಹಿಡಿದುಕೊಂಡು ಹೋಗುತ್ತಿತ್ತು. ಒಂದೆರಡು ಬಾರಿ ದನಗಳನ್ನು ಕಾಯುತ್ತಿದ್ದ ಹುಡುಗರನ್ನೂ ತಿಂದು ಹಾಕಿತ್ತು. ಅದು ತನ್ನ ಬೇಟೆಯಲ್ಲಿ ಪಳಗಿದ್ದ ಹುಲಿ. ಅದನ್ನು ಹಿಡಿಯಲು ಮಾಡಿದ್ದ ಎಲ್ಲ ಹಳ್ಳಿಗರ ಸಾಹಸ ವ್ಯರ್ಥವಾಗಿ, ಅದು ಕಾಳಿಯ ವಾಹನವೆಂದೂ ಅಂತಲೇ ಅದನ್ನು ಮನುಷ್ಯ ಮಾತ್ರರಿಂದ ಕೊಲ್ಲಲು ಸಾಧ್ಯವಿಲ್ಲವೆಂದು ತಿಳಿದು—ನಿರಾಶರಾಗಿದ್ದರು. ಹುಲಿಯ ತೊಂದರೆಯನ್ನನುಭವಿಸಿ ಯಾವ ಬಗೆಯ ಸಂರಕ್ಷಣೆಯಿಲ್ಲದೆ ಜನರು ಹತಾಶರಾಗಿದ್ದರು.

ಇಂದು ಆ ಹುಲಿ ತನ್ನ ಆಹಾರಕ್ಕೆಂದು ತುಂಬಿದ್ದ ಹಸುವನ್ನು ಹಿಡಿದು ಕೊಂಡು ಹೋಗಿತ್ತು. ಅದೂ ವಿಚಿತ್ರ ರೀತಿಯಲ್ಲಿ !

ಹಳ್ಳಿಗನು ಹಸುವನ್ನು ಮೇಯಿಸಿಕೊಂಡು ಬಂದು ಅದನ್ನು ಕೊಟ್ಟಿಗೆ ಯಲ್ಲಿ ಕಟ್ಟಿ ಊಟಮಾಡಿ ಮಲಗಿದ್ದನಂತೆ. ಮಧ್ಯರಾತ್ರಿಯ ವೇಳೆಗೆ ಶಬ್ದ ವಾಗುವುದನ್ನು ನೋಡಿ, ಎಲ್ಲೋ ಕರುಹಾಕುವ ವೇದನೆಯಿರಬಹುದೆಂದು ತಿಳಿದು ಸೂಡಿ ಬೆಳಕಿನಲ್ಲಿ ಕೊಟ್ಟಿಗೆಗೆ ಬಂದು ನೋಡಿ, ಹಸುವಿನ ಪೈ ಸವರಿ, ಹುಲ್ಲುಹಾಕಿ ಮಲಗಿಕೊಂಡನಂತೆ. ಮತ್ತೆ ಹಸುವಿನ ಕೂಗು ಎಚ್ಚ ರಗೊಳಿಸಲು ಗಾಬರಿಯಿಂದ ಓಡಿಹೋಗಿ ಕೊಟ್ಟಿಗೆಯನ್ನು ನೋಡಲು ಪಸು ಕಾಣೆಯಾಗಿತ್ತು. ಅದು ಇದ್ದ ಕಡೆ ರಕ್ತದ ಕೋಡಿ ಹರಿದಿತ್ತು. ಅದನ್ನು ನೋಡುತ್ತಲೇ ಅದು ಹೆಬ್ಬುಲಿಯ ಕೆಲಸವೆಂದು ಊಹಿಸಿ, ಹುಲಿ ಹೋಗಿರಬಹುದಾದ ಸ್ಥಳಕ್ಕೆ ಅದರ ಹೆಜ್ಜೆಯನ್ನನುಸರಿಸಿ ಹೋಗಿ ನೋಡಿದಾಗ ಸುಮಾರು ನೂರು ಮಾರು ದೂರದಲ್ಲಿ ಹಸುವನ್ನು ಕೊಂದು ರಕ್ತ ಹೀರುತ್ತಿದ್ದ ಹುಲಿಯ ದರ್ಶನವಾಯಿತು. ಇನ್ನು ತಾನು ಅದರ ಕಣ್ಣಿಗೆಬಿದ್ದರೆ ತನ್ನ ಆಯಸ್ಸು ಮುಗಿದಂತೆ ಎಂದು ತಿಳಿದು ಅವನು ಮನೆಗೆ

ಓಡಿಬಂದಿದ್ದನು.

ಅವನು ತನ್ನ ಸರ್ವಸ್ವವಾದ ಹಸು ಹುಲಿಯ ಬಾಯಿಗೆ ಬಲಿಯಾದು ದಕ್ಕಾಗಿ ಆ ದಿನವೆಲ್ಲಾ ರೋದಿಸುತ್ತಿದ್ದನು. ರಾತ್ರಿಯ ನೀರವತೆಯಲ್ಲಿ ಅವನ ಆರ್ತನಾದ ಕೇಳಿ ಬಡಜನರನ್ನು ತೊಂದರೆ ಕೊಟ್ಟು, ಗೋಳಾಡಿಸು ತ್ತಿರುವ ಆ ಹುಲಿಯನ್ನು ಕೊಲ್ಲಬೇಕೆಂದು ರಾಯನು ನಿರ್ಧರಿಸಿ ತನ್ನ ಅರ ಮನೆಗೆ ಹೊರಟನು.

ಮಾರನೆಯ ದಿನ ರಾಯನು ತನ್ನ ಅಂತರಂಗದ ಮಿತ್ರರಿಗೆ ತಾನು ಹುಲಿಯ ಬೇಟೆಗೆ ಹೊರಡಲಿರುವ ಸುದ್ದಿಯನ್ನು ತಿಳಿಸಿದನು. ಬಹಳ ಕಾಲದಮೇಲೆ ಬೇಟೆಯಾಡಲು ದೊರೆತ ಈ ಅವಕಾಶಕ್ಕಾಗಿ ಅವರಿಗೆ ಸಂತೋಷವಾಗಿ ರಾಯನ ಬೇಟೆಗೆ ಎಲ್ಲ ಸಿದ್ಧತೆ ಮಾಡಿದರು.

ಹುಲಿಯ ಬೇಟೆಯಲ್ಲಿ ಪಳಗಿದ ಬೇಟೆಗಾರರ ತಂಡವೇ ನೆರೆಯಿತು. ಅವರಿಗೆಲ್ಲಾ ಉಡುಪನ್ನೂ ಆಯುಧಗಳನ್ನೂ ಒದಗಿಸಿ ಮಿತ ಪರಿವಾರ ದೊಡನೆ ರಾಯನೇ ಹುಲಿಯ ಶಿಕಾರಿಗೆ ಹೊರಟನು.

ಹೋಗುತ್ತಿರುವಂತೆ ಆ ಹೆಬ್ಬುಲಿಯ ಬಗ್ಗೆ ಅನೇಕ ಚಿತ್ರವಿಚಿತ್ರ ಕಥೆ ಗಳನ್ನು ಕೇಳಿದನು.

ಒಮ್ಮೆ ಆ ಹುಲಿ ಕುರಿಯನ್ನು ಕಾಯುತ್ತಿದ್ದ ಒಬ್ಬ ಬಾಲಕನನ್ನು ನೂರಾರು ಮಂದಿಯ ಎದುರಿನಲ್ಲಿಯೇ ಎತ್ತಿಕೊಂಡು ಹೋಗಿ ಅವನ ರಕ್ತ ವನ್ನು ಹೀರಿ ಅವನನ್ನು ಅಲ್ಲೇ ಬಿಸಾಡಿತಂತೆ!

ಮತ್ತೊಮ್ಮೆ ಇಬ್ಬರು ಪ್ರಯಾಣಿಕರು ಆ ಕಾಡು ದಾರಿಯಲ್ಲಿ ಮಾತ ನಾಡಿಕೊಳ್ಳುತ್ತಾ ಬರುತ್ತಿದ್ದರಂತೆ. ಮಧ್ಯಾಹ್ನ ಎರಡು ಗಂಟೆಯ ಸುಮಾ ರಿನಲ್ಲಿ ದಣಿವಾರಿಸಿಕೊಳ್ಳಲು ಒಂದು ಮರದನೆರಳಿನಲ್ಲಿ ಕುಳಿತರಂತೆ. ಸಹಜ ವಾಗಿ ಅವರಲ್ಲಿ ಆ ಕಾಡಿನಲ್ಲಿ ವಾಸಿಸುತ್ತಿದ್ದ ಹುಲಿಯ ಮಾತು ಬಂತು. ಒಬ್ಬನು ಇನ್ನೊಬ್ಬನಿಗೆ ತನಗೆ ತಿಳಿದ ಆ ಹೆಬ್ಬುಲಿಯ ಜಾಣ್ಮೆ, ಕ್ರೂರತನ, ಧೈರ್ಯಗಳನ್ನು ವರ್ಣಿಸಿ ಹೇಳುತ್ತಿದ್ದನು. ಅದೇ ಹೊತ್ತಿಗೆ ಅವನು ವರ್ಣಿ ಸುತ್ತಿದ್ದ ಹುಲಿಯೇ ಎದುರಾಗಿ ಅವರಿಬ್ಬರೂ ಅಲ್ಲಿಯೇ ಸಮಾಧಿಯಾದ ರಂತೆ!

ಕೃಷ್ಣದೇವರಾಯನು ಹುಲಿಯ ಬಗ್ಗೆ ಸಾಕಷ್ಟು ಸುದ್ದಿ ಸಂಗ್ರಹಿಸಿ

ಕೊಂಡುದರಿಂದ ಹುಲಿಯಿಂದ ಯಾವ ಅಪಾಯವೂ ಒದಗದಂತೆ ಮುಂಜಾಗ್ರತೆ ಕ್ರಮ ತೆಗೆದುಕೊಂಡು ಹುಲಿ ವಾಸಿಸುವುದೆಂದು ಹೇಳಲಾಗಿದ್ದ ಕಾಡಿನ ಭಾಗಕ್ಕೆ ಬಂದು ಸೇರಿದನು.

ಆ ಪ್ರದೇಶದಲ್ಲಿ ದಟ್ಟವಾದ ಮರಗಳು ಬೆಳೆದು ವನ್ಯವೃಗಗಳ ಪ್ರಭುತ್ವಕ್ಕೆ ಅನುಗೊಳಿಸಿತ್ತು. ಎಲ್ಲೆಲ್ಲೂ ಪುರುಷ ಪ್ರಮಾಣಕ್ಕಿಂತ ಹೆಚ್ಚಾಗಿ ಬೆಳೆದ ಕುರುಚಲು ಗಿಡಗಳು, ಪೊದೆಗಳು. ಈ ಕುರುಚಲು ಗಿಡಗಳ ನಡುವೆ ಕಾಡು ಪ್ರಾಣಿಗಳು ವಸತಿ ಮಾಡಿಕೊಂಡಿದ್ದವು. ಹುಲಿ ತನ್ನ ವಾಸಸ್ಥಳವನ್ನು ಕುರುಚಲು ಗಿಡಗಳ ನಡುವೆಯೇ ಏರ್ಪಡಿಸಿಕೊಂಡಿರಬಹುದೆಂದು ನಾಲ್ಕು ದಿಕ್ಕಿನಿಂದ ಆ ಪ್ರದೇಶವನ್ನು ಶೋಧಿಸುತ್ತಾ ಹೊರಟರು.

ರಾಯನು ಒಂದು ದಿಕ್ಕಿನಲ್ಲಿ ಕುದುರೆಯನ್ನೇರಿ ವ್ಯಾಘ್ರದ ನೆಲೆಯನ್ನು ಪತ್ತೆ ಮಾಡುತ್ತಾ ಹೊರಟನು. ಅವನ ಬೆನ್ನ ಹಿಂದೆ ನಾಲ್ಕು ಮಂದಿ ಸಶಸ್ತ್ರ ಸೈನಿಕರು ಮೈಗಾವಲಿಗಾಗಿ ನಡೆದಿದ್ದರು. ರಾಯನ ಬೇಟೆನಾಯಿಗಳು ಹುಲಿಯ ವಾಸನೆಯನ್ನು ಹುಡುಕುತ್ತಾ ಹೊರಟಿದ್ದವು. ಅವುಗಳ ಧ್ವನಿಯನ್ನು ಹಿಂಬಾಲಿಸಿಕೊಂಡು ರಾಯನು ಎಚ್ಚರಿಕೆಯಿಂದ ಮೈಯೆಲ್ಲಾ ಕಣ್ಣಾಗಿಸಿಕೊಂಡು ನಡೆದಿದ್ದನು. ಅಷ್ಟರಲ್ಲಿ ದೂರದಲ್ಲಿ ನಾಯಿಗಳ ಸಂತತ ವಾದ ಬೊಗಳಿಕೆ ಕೇಳಿಸಿತು. ಆ ದಿಕ್ಕಿನಲ್ಲಿ ರಾಯನು ತನ್ನ ಕುದುರೆಯನ್ನು ವೇಗವಾಗಿ ಓಡಿಸಿದನು. ಹೀಗಾಗಿ ಅವನ ಹಿಂಬಾಲಕರು ರಾಯನ ಸನಿಯದಲ್ಲಿ ಹಿಂಬಾಲಿಸದೆ ದೂರವೇ ಉಳಿದರು. ರಾಯನು ಕುದುರೆಯನ್ನು ನಾಗಾಲೋಟದಲ್ಲಿ ಓಡಿಸಿಕೊಂಡು ನಾಯಿಗಳಿದ್ದ ಪ್ರದೇಶಕ್ಕೆ ಬಂದನು.

ಅಲ್ಲಿ ಒಂದು ದನ ಗೋಣು ಮುರಿದು ಸತ್ತು ಬಿದ್ದಿತ್ತು. ಅದನ್ನು ನೋಡಿಯೇ ನಾಯಿಗಳು ಗದ್ದಲಮಾಡಿದ್ದು. ಇದನ್ನು ನೋಡಿ ರಾಯನು ಇದು ಹುಲಿಯ ಕೆಲಸವೆಂದೇ ನಿರ್ಧರಿಸಿದನು. ಅಲ್ಲಿ ರಕ್ತದ ಕಾಲುವೆ ಹರಿದಿತ್ತು. ಹುಲಿ ದನದ ರಕ್ತವನ್ನು ಕುಡಿದು ಅದರ ಹೊಟ್ಟೆಯ ಭಾಗದ ಮಾಂಸವನ್ನು ತಿಂದು, ಉಳಿದ ದೇಹವನ್ನು ಹಾಗೆಯೇ ಉಳಿಸಿಹೋಗಿತ್ತು. ಕೆಲವು ಹದ್ದುಗಳಲ್ಲದೆ ಬೇರೆ ಯಾವ ಪ್ರಾಣಿಯೂ ಅದರ ಬಳಿ ಇರದಿದ್ದುದನ್ನು ಕಂಡು ಆ ವ್ಯಾಘ್ರರಾಜನು ದನದ ರಕ್ತಮಾಂಸದಿಂದ ತೃಪ್ತಿಹೊಂದಿ ಸಮೀಪದಲ್ಲಿಯೇ ವಿಶ್ರಾಂತಿ ತೆಗೆದುಕೊಳ್ಳುತ್ತಿರಬಹುದೆಂದು ರಾಯನು

ತರ್ಕಿಸಿದನು. ಸುತ್ತಲೂ ನೋಡುತ್ತಾ ಹತ್ತು ಮಾರು ಬರುವುದರಲ್ಲಿ ಒಂದು ಮರದಡಿಯಲ್ಲಿ ವ್ಯಾಘ್ರ ಮಲಗಿರುವುದು ಕಾಣಿಸಿತು.

ನೋಡಲು ಅದು ಬಲು ದೊಡ್ಡ ಆಕೃತಿ. ಚೆನ್ನಾಗಿ ತಿಂದು ಕೊಬ್ಬಿದ ದೇಹ. ಅದು ಅಂದಿನ ಬೇಟೆಯಿಂದ ಚೆನ್ನಾಗಿ ಸೊಕ್ಕಿ ದೇಹದ ಪರಿವೆಯೇ ಇಲ್ಲದಂತೆ ಮಲಗಿತ್ತು. ರಾಯನು ಶಬ್ದಮಾಡದೆ ಕುದುರೆಯಿಂದಿಳಿದು ಬಂದು ಆಯಕಟ್ಟಿನ ಸ್ಥಳದಲ್ಲಿ ಕುಳಿತುಕೊಂಡು ಕೋವಿಯಿಂದ ಗುಂಡು ಹಾರಿಸಿದನು. ಗುಂಡು ದುರ್ದೈವವಶಾತ್ ಹುಲಿಗೆ ಬಡಿಯದೆ ಮೇಲೆ ಹಾರಿತು. ಒಮ್ಮೆಲೇ ಗುಂಡು ಹಾರಿದುದರಿಂದ ಹುಲಿಗೆ ಹೆದರಿಕೆಯಾಗಿ ಕಾನನವನ್ನು ನಡುಗಿಸುವಂತೆ ಭೀಕರವಾಗಿ ಗರ್ಜಿಸಿತು. ಆಗ ರಾಯನು ಮತ್ತೊಂದು ಗುಂಡು ಹಾರಿಸಿದನು. ಈ ಬಾರಿ ಗುಂಡು ಹುಲಿಗೆ ಬಡಿದಿತ್ತು. ಆದರೆ ಅದು ಅಪಾಯ ಸ್ಥಳಕ್ಕೆ ಬಡಿದಿರಲಿಲ್ಲವಾಗಿ ಹುಲಿ ಒಮ್ಮೆ ನೆಲಕ್ಕುರುಳಿ, ತನ್ನನ್ನು ಗಾಯಗೊಳಿಸಿದವನ ಮೇಲೆ ಬೀಳಲು ಹಾರಿಬಂತು. ಆಗ ಮತ್ತೊಂದು ಗುಂಡು ಬಂದು ಬಡಿಯಿತು. ಹುಲಿ ಹಾರಿ ನೆಲಕ್ಕೆ ಬಿತ್ತು. ಆದರೆ ಸಾಯಲಿಲ್ಲ. ತನ್ನ ಶತ್ರು ತನಗಿಂತಲೂ ಬಲಶಾಲಿಯಾಗಿರುವನೆಂದು ತಿಳಿದು ಪ್ರಾಣದ ಮೇಲಿನ ಆಸೆಯಿಂದ ಅದು ಅಲ್ಲಿಂದ ಓಡಿತು.

ರಾಯನು ಹುಲಿ ತನ್ನ ಗುಂಡಿಗೆ ಬಲಿಯಾಗದೆ ಗಾಯಗೊಂಡಿದ್ದರೂ ಸಾಯದೆ ಉಳಿದಿರುವುದನ್ನು ನೋಡಿ ಅಚ್ಚರಿಯಾಯಿತು. ಅಷ್ಟೇ ಅಲ್ಲ; ಅದು ತನ್ನ ಕಣ್ಣು ತಪ್ಪಿಸಿ ಓಡಿಹೋಗಿತ್ತು. ಗಾಯಗೊಂಡಿರುವ ಹುಲಿಯನ್ನು ಹಾಗೆಯೇ ಬಿಡಬಾರದೆಂದೂ, ಇದರಿಂದ ಕೇಡು ಹೆಚ್ಚುವುದೆಂದೂ ಏನೇ ಆಗಲಿ, ಹುಲಿಯನ್ನು ಕೊಂದು ಯಮಸದನಕ್ಕೆ ಅಟ್ಟಲೇಬೇಕೆಂದು ಯೋಚಿಸಿ ಅವನು ಕುದುರೆಯ ಮೇಲೇರಿ ಹುಲಿಯನ್ನು ಹಿಂಬಾಲಿಸಿಕೊಂಡು ನಡೆದನು.

ರಾಯನು ಹುಲಿಯನ್ನು ಹಿಂಬಾಲಿಸಿಕೊಂಡು ಹತ್ತು ಮಾರು ಹೋಗಿರಲಿಲ್ಲ. ಅವನು ಏರಿದ್ದ ಕುದುರೆ ಹಠಾತ್ತದೆ ಮುಗ್ಗರಿಸಿತು. ರಾಯನು ಕುದುರೆಯಿಂದ ಹಾರಿ ನೆಲಕ್ಕೆ ಬಿದ್ದನು. ಮತ್ತೆ ಎದ್ದು ಕುದುರೆಯನ್ನು ಏರಲು ಪ್ರಯತ್ನಿಸುವಷ್ಟರಲ್ಲಿ ರಾಯನ ಸುತ್ತ ಸರ ಸರ ಶಬ್ದವಾ

ಯಿತು. ಏನೆಂದು ತಿರುಗಿ ನೋಡುವಷ್ಟರಲ್ಲಿಯೇ ಹತ್ತು ಜನ ಕಟ್ಟು ಮಸ್ತಾದ ವ್ಯಕ್ತಿಗಳು ರಾಯನ ಮೇಲೆ ಬಿದ್ದು ಅವನನ್ನು ನಿಶ್ಶಸ್ತ್ರಗೊಳಿಸಿದರು. ಅನಂತರ ರಾಯನ ಬಾಯಿಗೆ ಬಟ್ಟೆ ತುರುಕಿ ಕೈಕಾಲುಗಳನ್ನು ಹಗ್ಗಗಳಿಂದ ಕಟ್ಟಿದರು. ರಾಯನು ಹಠಾತ್ತನೆ ಒದಗಿದ ಆಕ್ರಮಣದಿಂದ ಗಾಬರಿಗೊಂಡು ತನ್ನ ಶತ್ರುಗಳು ಯಾರೆಂದು ನೋಡುವಷ್ಟರಲ್ಲಿ ಇಷ್ಟೆಲ್ಲಾ ಕೆಲಸಗಳು ನಡೆದುಹೋಗಿದ್ದವು. ತನ್ನ ಮೇಲೆ ಬಿದ್ದ ಪುಂಡರು ಯಾರು ? ಅವರ ಉದ್ದೇಶವೇನು ? ಎಂದು ರಾಯನಿಗೆ ತಿಳಿಯದಾಯಿತು. ಅವರನ್ನೇ ಕ್ಷಣಕಾಲ ದುರುಗುಟ್ಟಿ ನೋಡಿ ಕೋಪದಿಂದ ಕಿಡಿಕಿಡಿಯಾದನು. ರಾಯನ ಕೋಪವನ್ನು ಸಂಪೂರ್ಣವಾಗಿ ನಿರ್ಲಕ್ಷಿಸಿದವನಂತೆ ಆ ಪುಂಡರ ಒಡೆಯನಂತೆ ಕಾಣುತ್ತಿದ್ದ, ಬಲಶಾಲಿಯಾದ ವ್ಯಕ್ತಿ ರಾಯನ ಬಳಿಗೆ ಬಂದು ರಾಯನ ಮುಖಕ್ಕೆ ಮುಷ್ಟಿಯಿಂದ ಒಂದು ಪ್ರಹಾರವಿತ್ತು ಮುಖಕ್ಕೆ ಕಪ್ಪುವಸ್ತ್ರವನ್ನು ಬಿಗಿದು ಕಟ್ಟಿದನು. ರಾಯನಿಗೆ ಒಮ್ಮೆಲೇ ಬಿದ್ದ ಹೊಡೆತದಿಂದ ಮೂಗು ಬಾಯಿಯಲ್ಲಿ ರಕ್ತ ಬಂದಿತು. ಬುದ್ಧಿ ಕುಂಠಿತವಾಯಿತು. ಆಕಾಶವು ಬಂದು ತಲೆಗೆ ಬಡಿದ ಸಂವೇದನೆಯಾಯಿತು. ನಕ್ಷತ್ರಗಳು ಬಂದು ಕುಕ್ಕಿದಂತೆ ಭಾಸವಾಯಿತು. ಏಟು ಬಿದ್ದ ಮೂಗಿನ ಭಾಗದಲ್ಲಿ ಭಯಂಕರ ನೋವು ಕಾಣಿಸಿಕೊಂಡಿತು. ರಾಯನು ನೋವಿನಿಂದ ಕೂಗಲು ಪ್ರಯತ್ನಿಸಿದನು. ಬಾಯಿಂದ ಧ್ವನಿ ಹೊರಡಲಿಲ್ಲ. ತನ್ನ ಸಂಗಡಿಗರನ್ನು ಕೈಬೀಸಿ ಕರೆಯಲು ಪ್ರಯತ್ನಿಸಿದ್ದನು ಕೈ ಬಂಧಿಸಲಾಗಿತ್ತು. ಕಣ್ಣುನೋಟದಿಂದಲಾದರೂ ನೆರವು ಪಡೆಯಲು ನೋಡಿದನು. ರಾಯನ ಕಣ್ಣಿಗೆ ದಟ್ಟವಾದ ಕಪ್ಪು ಪರದೆ ಬಿದ್ದಿತ್ತು. ರಾಯನು ತಾಮಸದ ಗಾಡಾಂಧಕಾರದಲ್ಲಿ ಪ್ರಜ್ಞಾಶೂನ್ಯನಾಗಿ ಬಿದ್ದಿದ್ದನು.

ಆ ಪುಂಡರ ನಾಯಕನು ರಾಯನನ್ನು ಹೊರಿಸಿಕೊಂಡು ಬೇಗಬೇಗನೆ ಹೊರಟನು. ಅವರು ತಮ್ಮ ಉದ್ದೇಶ ಸಾಧಿಸಿದ್ದುದರಿಂದ, ಸಂತೋಷದಿಂದ ಹಿಗ್ಗುತ್ತಾ ತಾವು ರಾಯನ ಸಂಗಡಿಗರ ಕಣ್ಣಿಗೆ ಬೀಳುವ ಮುನ್ನ ತಪ್ಪಿಸಿಕೊಳ್ಳಬೇಕೆಂದು ಬೇಗ ಬೇಗನೆ ಹೆಜ್ಜೆ ಹಾಕಿದರು. ಗಟ್ಟಿಯಾಗಿ ಸದ್ದು ಮಾಡಿದರೆ ಶತ್ರುಗಳಿಗೆಲ್ಲಿ ತಿಳಿಯುವುದೋ ಎಂದು, ಒಂದು ಮಾತೂ ಆಡದೆ ಲಗುಬಗೆಯಿಂದ ರಾಯನನ್ನು ಹೊತ್ತುಕೊಂಡು ನಡೆದರು.

ಹೀಗೆ ಅವರು ಸುಮಾರು ಅರ್ಧ ತಾಸು ಹಾದಿಯನ್ನು ಕಳೆದಿರಬೇಕು. ಅಷ್ಟರಲ್ಲಿ ಅವರ ಗಮ್ಯ ಸ್ಥಾನ ಸಿಕ್ಕಿತು.

ಆ ಪ್ರದೇಶದಲ್ಲಿ ನಾಲ್ಕಾರು ದೊಡ್ಡದೊಡ್ಡ ಬಂಡೆಗಳು ಚಿತ್ರ ವಿಚಿತ್ರ ರೀತಿಯಲ್ಲಿ ಒಂದರ ಮೇಲೊಂದು ಜೋಡಿಸಿಟ್ಟಂತೆ ಇದ್ದವು. ಅವುಗಳ ನಡುವೆ ಒಬ್ಬ ಮನುಷ್ಯನು ಕಷ್ಟದಿಂದ ತೆವಳಿ ಹೋಗಬಹುದಾದ ಬಿಲದ್ವಾರವಿತ್ತು. ಅದನ್ನು ದೊಡ್ಡದೊಂದು ಗುಂಡಿನಿಂದ ಮುಚ್ಚಿದ್ದರು.

ರಾಯನನ್ನು ಹೊತ್ತುಕೊಂಡು ಬಂದ ಆ ಮೂರು ನಾಲ್ಕು ಮಂದಿ, ಬಲವನ್ನೆಲ್ಲಾ ಪ್ರಯೋಗಿಸಿ ಆ ಬಂಡೆಯನ್ನು ಪಕ್ಕಕ್ಕೆ ಸರಿಸಿ ಇಟ್ಟರು. ಆ ಪ್ರದೇಶದಲ್ಲಿ ಬಿಲದ್ವಾರ ಕಾಣಿಸಿತು. ರಾಯನನ್ನು ಹೊತ್ತುಕೊಂಡು ಒಬ್ಬೊಬ್ಬರಾಗಿ ತೆವಳಿಕೊಂಡು, ಗುಹೆಯಲ್ಲಿ ಕಣ್ಮರೆಯಾದರು.

ಆ ಗುಹೆ ಆರಂಭದಲ್ಲಿ ಕಿರಿದಾಗಿದ್ದರೂ, ಹೋಗುತ್ತಾ, ಹೋಗುತ್ತಾ ವಿಶಾಲವಾಗಿತ್ತು. ಅಷ್ಟು ಮಾತ್ರವೇ ಅಲ್ಲ. ಅಲ್ಲಿ ಗಾಳಿ ಬೆಳಕು ಸಾಕಷ್ಟು ಬೀಳುತ್ತಿದ್ದು, ಒಮ್ಮೆಲೆ ಮೂವತ್ತು ನಲವತ್ತು ಮಂದಿ ಮಲಗುವಷ್ಟು ವಿಶಾಲವಾಗಿತ್ತು.

ಅಲ್ಲಿಗೆ ರಾಯನನ್ನು ಹೊತ್ತು ತಂದು ಒಂದು ಕಡೆ ಕೆಡಹಲಾಯಿತು. ಅನಂತರ ಅವರ ಮುಖಂಡನು ಏನನ್ನೊ ತನ್ನ ಅನುಚರರಿಗೆ ಆಜ್ಞಾಪಿಸಿ ಗುಹೆಯಿಂದ ಹೊರಬಿದ್ದನು. ಅವನ ಹಿಂದೆ ಇನ್ನಿಬ್ಬರು ದೊಡ್ಡ ಚೀಲಗಳೊಂದಿಗೆ ಹೊರಹೊರಟರು.

ಗುಹೆಯ ಒಳಗೆ ಬರುವವರೆಗೂ ಉಸಿರು ಹಿಡಿದುಬಂದಿದ್ದ ಆ ಪುಂಡರು ಸ್ವಸ್ಥಾನ ಸೇರಿದ್ದರು. ಅವರು ಈಗ ತಮ್ಮ ಮನಬಂದಂತೆ ಮಾತನಾಡಿಕೊಂಡು ನಕ್ಕು ನಲಿದರು. ತಮ್ಮ ಸಾಹಸಗಳನ್ನು ಕೊಚ್ಚಿಕೊಂಡು ಕುಣಿದರು. ತಾವು ಬಹುದಿನಗಳಿಂದ ಹೊಂಚು ಹಾಕಿದ್ದ ಕಾರ್ಯ ಯಶಸ್ವಿಯಾದುದಕ್ಕಾಗಿ ಅವರ ಸಂತೋಷಕ್ಕೆ ಮೇರೆ ಇಲ್ಲವಾಗಿತ್ತು. ಅವರು ಸಂತೋಷದಿಂದ ಹಾಡಿ, ಹಬ್ಬ ಮಾಡಿದರೆಂದರೂ ಸರಿ!

ಇದೆಲ್ಲ ನಡೆಯುವ ವೇಳೆಗೆ ರಾಯನಿಗೆ ಹೋಗಿದ್ದ ಜ್ಞಾನ ಮತ್ತೆ ಬರತೊಡಗಿತ್ತು. ಕಿವಿಗೆ ಕರ್ಕಶವಾದ ಕೂಗು, ಕೇಕೆ, ಅಸಭ್ಯವಾದ ಮಾತುಗಳು ಕೇಳಿದವು. ರಾಯನು ಅವರ ಮಾತುಕತೆಗಳಿಂದ ಅವರು

ಕಾಡಿನಲ್ಲಿ ವಾಸ ಮಾಡುವ ದರೋಡೆಕಾರರೆಂದು ತಿಳಿದನು. ಅವರು ಹಿಂದೊಮ್ಮೆ ಬಿಜಾಪುರದ ಸುಲ್ತಾನನ ಸೈನಿಕರಾಗಿ ಇದ್ದಿರಬೇಕು ಎಂದು ಅವರ ಭಾಷೆಯಿಂದ ಊಹಿಸಿದನು. ಇದಕ್ಕೂ ಹೆಚ್ಚು ಸಂಗತಿಗಳು ಅವರ ಅಸ್ಪಷ್ಟ ಮಾತುಕತೆಗಳಿಂದ ರಾಯನಿಗೆ ತಿಳಿಯದಾಯಿತು. ಈಗ ರಾಯನು ಕಣ್ಣು ಬಿಟ್ಟು ನೋಡಬಹುದಾಗಿತ್ತು. ಮುಖದ ಮೇಲಿನ ಕಪ್ಪು ಬಟ್ಟೆಯನ್ನು ತೆಗೆದಿದ್ದರು. ಬಾಯಲ್ಲಿ ತುರುಕಿದ್ದ ಬಟ್ಟೆಯನ್ನು ತೆಗೆದಿದ್ದುದರಿಂದ ಸಿರಾಳವಾಗಿ ಉಸಿರಾಡಬಹುದಾಗಿತ್ತು. ಆದರೆ ಅತ್ತಿತ್ತ ಅಲುಗದಂತೆ ಬಲವಾಗಿ ಕಟ್ಟಿದ್ದ ಕಟ್ಟುಗಳು ಮಾತ್ರ ಬಿಗಿಯಾಗಿದ್ದವು.

ರಾಯನು ಮಲಗಿದ್ದಲ್ಲಿಯೇ ಹೊರಳಿ ತಾನು ಎಲ್ಲಿದ್ದೇನೆ ? ಇಲ್ಲಿಗೆ ತಾನು ಬಂದ ಬಗೆ ? ತನ್ನನ್ನು ಬಂಧಿಸಿ ತಂದವರು ಯಾರು ? ಎಂದು ತಿಳಿಯಲು ಪ್ರಯತ್ನಿಸಿದನು. ಅವನಿಗೆ ಸ್ವಲ್ಪ ದೂರದಲ್ಲಿ ಆ ಪುಂಡರು ನೆಲದ ಮೇಲೆ ಹಾಸಿದ್ದ ಚಾಪೆಯ ಮೇಲೆ ಕುಳಿತು ಮದ್ಯವನ್ನು ಸೇವಿಸುತ್ತಾ ಮನಬಂದಂತೆ ಹರಟುತ್ತಿದ್ದರು. ಅವರ ಕರಾಳ ಮುಖಗಳು ಉರಿಯುತ್ತಿದ್ದ ಒಲೆಯ ಕೆಂಬೆಳಕಿನಲ್ಲಿ ಸ್ಪಷ್ಟವಾಗಿ ಕಾಣುತ್ತಿದ್ದವು. ರೌದ್ರತೆಯಿಂದ ಕೂಡಿದ ಆ ಮನುಷ್ಯರು ಯಮನ ಕಿಂಕರರಂತೆ ರಾಯನಿಗೆ ಕಂಡರು.

ಕೈ ಕಾಲುಗಳನ್ನು ಬಿಡಿಸಿಕೊಂಡು ಅಲ್ಲಿಂದ ತಪ್ಪಿಸಿಕೊಂಡು ಹೋಗಲು ಸಾಧ್ಯವೇ ಎಂದು ರಾಯನು ನೋಡಿದನು. ಆದರೆ ಕೈಕಾಲುಗಳನ್ನು ಭದ್ರವಾಗಿ ಬಿಗಿದು ಕಟ್ಟಿದ್ದರು. ತಪ್ಪಿಸಿಕೊಳ್ಳುವ ಮಾತು ದೂರವೇ ಉಳಿಯಿತು. ರಾಯನು ಹತಾಶನಾಗಿ ಹಲ್ಲು ಕಡಿದನು. ತನ್ನನ್ನು ಅವರಲ್ಲಿ ಯಾರೂ ಗಮನಿಸುತ್ತಿರುವಂತೆ ಕಾಣಲಿಲ್ಲ. ರಾಯನು ಬೊಬ್ಬೆಯಿಟ್ಟು ಗದ್ದಲ ಮಾಡಿದನು. ರಾಯನ ಸದ್ದಡಗಿಸಲು ಅವರಲ್ಲಿ ಒಬ್ಬನು ಬಂದು ತನ್ನ ಮುಷ್ಟಿಯಿಂದ ರಾಯನ ಮುಖಕ್ಕೆ ಬಲವಾಗಿ ಏಟುಕೊಟ್ಟನು. ಆ ಹೊಡೆತಕ್ಕೆ ರಾಯನು ಮತ್ತೆ ಜ್ಞಾನ ತಪ್ಪಿ ಮಲಗಿದನು.

## ೧೪

ಹೀಗೆ ರಾಯನು ಜ್ಞಾನತಪ್ಪಿ ಅದೆಷ್ಟು ಹೊತ್ತು ಮಲಗಿದ್ದನೋ ಅವನಿಗೆ ತಿಳಿಯದು. ರಾಯನಿಗೆ ಎಚ್ಚರವಾದಾಗ ಆ ಗುಹೆಯಲ್ಲಿ ಯಾರೋ ಒಬ್ಬನ ಹೊರತು, ಉಳಿದವರೆಲ್ಲರೂ ಹೊರಟುಹೋಗಿದ್ದರು. ರಾಶಿ ರಾಶಿ ಗೆಡ್ಡೆ ಗೆಣಸುಗಳನ್ನು ಬೇಯಿಸುತ್ತಾ ಅವನು ಒಲೆಯ ಮುಂದೆ ಕುಳಿತಿದ್ದನು. ಅವನ ಬಳಿಯಲ್ಲಿದ್ದ ಮತ್ತೊಂದು ಒಲೆಯ ಮೇಲೆ ಬಿಸಿ ಮಾಡಿದ ಮದ್ಯವಿತ್ತು. ಅದರ ವಾಸನೆ ಗಾಳಿಯಲ್ಲಿ ತೇಲಿಕೊಂಡು ಬಂದು ರಾಯನ ಮೂಗಿಗೂ ಬಡಿದು ಅವನ ಗ್ರಹಣೇಂದ್ರಿಯವನ್ನು ಬಡಿದೆಬ್ಬಿಸಿತ್ತು. ರಾಯನು ಕೂಗಿಕೊಳ್ಳಲು ನೋಡಿದನು. ಸಾಧ್ಯವಾಗಲಿಲ್ಲ. ರಾಯನ ಮುಖವೆಲ್ಲ ಕೆಂಪರಿದು ಕೆಂಡದಂತೆ ಸುಡುತ್ತಿತ್ತು. ತಲೆ ಭಾರವಾಗಿ ಗಿರ್ರನೆ ಸುತ್ತುತ್ತಿರುವಂತೆ ಭಾಸವಾಯಿತು. ಹೃದಯಾಂತರಾಳದಲ್ಲಿ ತಳಮಳವೆದ್ದು ಒಂದು ಬಗೆಯ ಅಶಕ್ತತೆ ಮನೆ ಮಾಡಿತ್ತು. ಇದೇ ಸ್ಥಿತಿಯಲ್ಲಿ ಹೆಚ್ಚು ಕಾಲವಿದ್ದರೆ ತಾನು ಸಾಯುವುದೇ ದಿಟವೆಂದು ರಾಯನು ತಲ್ಲಣಗೊಂಡನು. ಒಲೆಯ ಮುಂದೆ ಕುಳಿತ ಆ ಮನುಷ್ಯನ ಗಮನ ರಾಯನ ಕಡೆಗೆ ಹರಿಯಿತು. ರಾಯನು ತನ್ನ ಬಳಿಗೆ ಬರಲು ತಲೆಯಿಂದ ಸಂಜ್ಞೆ ಮಾಡಿದನು. ಅವನಿಗೆ ರಾಯನ ಸ್ಥಿತಿ ಕಂಡು ಕರುಣೆಯುಂಟಾಗಿರಬೇಕು. ಅವನು ಓಡಿಬಂದು ರಾಯನ ಬಳಿ ನಿಂತು, ರಾಯನು ಉಸಿರಾಡಲು ಕಷ್ಟಪಡುತ್ತಿರುವುದನ್ನು ನೋಡಿ ಕಟ್ಟುಗಳನ್ನು ಸರಾಗವಾಗಿ ಉಸಿರಾಡುವ ಮಟ್ಟಿಗೆ ಸಡಿಲಗೊಳಿಸಿದನು. ಅದರಿಂದ ರಾಯನಿಗೆ ಹೋಗಿದ್ದ ಜೀವ ಮರಳಿ ಬಂದಂತಾಯಿತು. ಇಂತಹ ಕಟುಕರ ನಡುವೆಯೂ ಒಬ್ಬ ಕರುಣೆಯಿರುವನಲ್ಲಾ ಎಂದು ಅವನ ಬಗ್ಗೆ ರಾಯನಿಗೆ ಕೃತಜ್ಞತೆ ಉಂಟಾಯಿತು. ಅವನೊಂದಿಗೆ ಮಾತನಾಡಿ ತನ್ನನ್ನು ಹೊತ್ತು ತಂದಿರುವವರು ಯಾರು ? ಅವರ ಉದ್ದೇಶವೇನು ? ಎಂದು ತಿಳಿಯಲು ರಾಯನು ಪ್ರಯತ್ನ ಪಟ್ಟನು. ಆದರೆ ರಾಯನಿಗೆ ನಿರಾಶೆಯೇ ಆಯಿತು. ಅವನು ಮೂಕನೆಂದು ತಿಳಿಯಲು ರಾಯನಿಗೆ ಹೆಚ್ಚು ಕಾಲ ಬೇಕಾಗಲಿಲ್ಲ. ರಾಯನು ಮೂಕನ ಭಾಷೆಯಲ್ಲಿಯೇ ಮಾತನಾಡಬೇಕಾಯಿತು. ಇಷ್ಟು

ಶಲ್ಲಿ ಅವನಿಗೆ ಎಷ್ಟು ಸಂಗತಿಗಳು ತಿಳಿಯಿತೋ ಹೇಳುವುದು ಕಷ್ಟ. ಅಂತೂ ರಾಯನಿಗೆ ಅವನಿಂದ ಯಾವುದೊಂದು ವಿಷಯವೂ ತಿಳಿಯಲಿಲ್ಲ.

ರಾಯನಿಗೆ, ಒಲೆಯ ಮೇಲೆ ಬೇಯುತ್ತಿದ್ದ ಆ ಪದಾರ್ಥಗಳ ದುರ್ವಾಸನೆ ಕುಡಿದು ವಾಂತಿಯಾಗುವ ಸಂವೇದನೆಯಾಯಿತು. ಕೊಂಚ ನೀರು ಕುಡಿದರೆ ತಳಮಳ ಕಡಿಮೆಯಾಗಬಹುದೆಂದು ತಿಳಿದು ನೀರು ಬೇಕೆಂದು ಸನ್ನೆ ಮಾಡಿ ತಿಳಿಸಿದನು. ಇದು ಅವನಿಗೆ ಅರ್ಥವಾಗಿ, ಒಂದು ಮಡಕೆಯಲ್ಲಿ ಬಿಸಿಯಾದ ಹುಳಿ ಹೆಂಡವನ್ನು ತಂದುಕೊಟ್ಟನು, ಅದನ್ನು ಕುಡಿದು ರಾಯನು, ತನ್ನ ದಾಹವನ್ನು ಪರಿಹರಿಸಿಕೊಳ್ಳಲೆಂದು. ಆದರೆ ಆ ಹೆಂಡದ ವಾಸನೆಯನ್ನು ನೋಡುತ್ತಲೇ ರಾಯನಿಗೆ ಮತ್ತೆ ತಲೆ ಸುತ್ತಿ ಕೊಂಡುಬಂತು. ಮತ್ತೆ ನೀರಿಗಾಗಿ ರಾಯನು ದೈನ್ಯವಾಗಿ ಸಂಜ್ಞೆಮಾಡಿ ದನು. ಆಗ ಆ ಮೂಕನಿಗೆ ಅದೇನೆನಿಸಿತೊ ಒಂದು ಮಡಕೆಯನ್ನು ತೆಗೆ ದುಕೊಂಡು ಗುಹೆಯಿಂದ ಹೊರಗೆ ಹೊರಟನು.

ರಾಯನು ಸುತ್ತಲೂ ನೋಡಿದನು. ಗುಹೆಯ ಅಚ್ಚುಕಟ್ಟಿನ ಕಡೆ ರಾಯನ ಮನಸ್ಸು ಹರಿಯಿತು. ಅದು ಅವರ ವಾಸಸ್ಥಳವೆನ್ನಲು ಅದನ್ನು ಸ್ವಚ್ಛವಾಗಿಟ್ಟುಕೊಂಡಿದ್ದುದೇ ಸಾಕ್ಷಿ. ಒಂದು ಮೂಲೆಯಲ್ಲಿ ದಿನ ಬಳಕೆಯ ಉಪಯೋಗಕ್ಕೆ ಬರುವ ಅನೇಕ ವಸ್ತುಗಳನ್ನು ಅಡಗಿಸಿದ್ದರು. ಒಟ್ಟಿನಲ್ಲಿ ಆ ಗುಹೆ ದರೋಡೆಕಾರರ ಪ್ರಪಂಚವೇ ಆಗಿತ್ತು.

ಇಷ್ಟು ಹೊತ್ತಿಗೆ ಅಡಿಗೆಯವನು ಮಣ್ಣಿನ ಮಡಕೆಯಲ್ಲಿ ತಿಳಿಯಾದ ತಣ್ಣೀರನ್ನು ತಂದು ರಾಯನ ಬಾಯಿಗೆ ಬಿಟ್ಟನು. ರಾಯನು ಅವನನ್ನು ಮನದಲ್ಲಿಯೇ ವಂದಿಸುತ್ತ ನೀರಡಿಕೆಯನ್ನು ನಿವಾರಿಸಿಕೊಂಡನು. ಅನಂತರ ಹೊರಗಡೆ ಯಾರೋ ಬರುತ್ತಿರುವ ಶಬ್ದವಾಗಲು ಅವನು ಗಾಬರಿ ಯಿಂದ ತನ್ನ ಅಡಿಗೆ ಕೆಲಸವನ್ನು ನೋಡಿಕೊಳ್ಳಲು ಒಲೆಯ ಬಳಿ ಹೋಗಿ ಕುಳಿತುಕೊಂಡನು.

ಅವನ ನಿರೀಕ್ಷೆ ಸುಳ್ಳಾಗಲಿಲ್ಲ. ಹೊರಗೆ ಹೋಗಿದ್ದ ಪುಂಡರೆಲ್ಲರೂ, ಒಬ್ಬೊಬ್ಬರಾಗಿ ಗುಹೆಯ ಒಳಗೆ ಬರತೊಡಗಿದರು. ಅವರೆಲ್ಲರ ಹಿಂದೆ ಅವರ ನಾಯಕನಾಗಿದ್ದ ಷಂಷೇರ್‌ಖಾನ್ ನಡೆದು ಬಂದನು. ಅವನ ಹಿಂದೆ, ದೊಡ್ಡ ಪೆಟ್ಟಿಯನ್ನು ಹೊತ್ತ ಇಬ್ಬರು ಒಳಗೆ ಬಂದರು. ಅವರು

ತಮ್ಮ ಮೂಟೆಯನ್ನು ಅಡಿಗೆಯವನ ಮುಂದೆ ಬಿಚ್ಚಿದರು. ಅದರಲ್ಲಿ ಕಾಡುಕೋಳಿಗಳನ್ನೂ, ಮೊಲಗಳನ್ನೂ, ಒಂದು ಜಿಂಕೆಯನ್ನೂ ಆ ದಿನದ ಹಬ್ಬದೂಟಕ್ಕಾಗಿ ಬೇಟೆಯಾಡಿ ತಂದಿದ್ದರು. ಅವರ ಬಹಳ ದಿನಗಳ ಆಸೆ— ಕೃಷ್ಣದೇವರಾಯನನ್ನು ಕೈ ಸೆರೆ ಹಿಡಿದು ಶಿಕ್ಷಿಸುವುದು—ಅಂದು ನೆರವೇರಿತ್ತು. ಅಂತಲೇ ಆ ದಿನ ಅವರಿಗೆ ಹಬ್ಬವೇ ಆಗಿತ್ತು. ಎಲ್ಲರೂ ರಾಯನನ್ನು ಒಂದು ಕ್ಷಣಕಾಲ ದುರುಗುಟ್ಟಿಕೊಂಡು ನೋಡಿ, ತಮ್ಮಲ್ಲೇ ಏನನ್ನೋ ನಿರ್ಧರಿಸಿಕೊಂಡು ಮತ್ತೆ ತಮ್ಮ ಕೆಲಸಗಳಲ್ಲಿ ತೊಡಗಿದರು.

ಆ ಮಾಂಸಾಹಾರ ಸಿದ್ಧವಾಗುತ್ತಿರುವಂತೆ, ಆ ದುರ್ವಾಸನೆಯನ್ನು ಸೇವಿಸಿದ ರಾಯನು ಮತ್ತೆ ಮೂರ್ಛೆ ಹೋದನು.

ಮಧ್ಯಾಹ್ನ ಸರಿದು ಸಂಜೆಯಾಯಿತು. ಈ ವೇಳೆಗೆ ಅಡಿಗೆಯೂ ಪೂರೈಸಿತ್ತು. ಅವರು ಕತ್ತಲೆಯಾಗುತ್ತಿದ್ದಂತೆಯೇ ಗುಹೆಯ ಬಾಗಿಲನ್ನು ಭದ್ರಪಡಿಸಿ, ಹಬ್ಬದೂಟ ಮಾಡಲು ವೃತ್ತಾಕಾರವಾಗಿ ಕುಳಿತುಕೊಂಡರು ಮಧ್ಯೆ ಬೇಯಿಸಿದ ಮಾಂಸ, ಮಸಾಲೆ ಪುಡಿಗಳನ್ನೂ, ಹೆಂಡವನ್ನು, ಇನ್ನಿತರ ಭಕ್ಷ್ಯ ಭೋಜ್ಯಗಳನ್ನು ತಂದಿಟ್ಟುಕೊಂಡು ತೃಪ್ತಿಯಾಗುವ ವರೆಗೂ ತಿಂದು ತೇಗಿದರು. ಅವರಿಗೆ ಸಂಪೂರ್ಣವಾಗಿ ಮದ್ಯದ ಅಮಲೇರಿ, ಯಾವುದೋ ಪದಗಳು ಅವರಬಾಯಿಂದ ಹೊರಬೀಳಲಾರಂಭಿಸಿದವು. ನಡುನಡುವೆ ಕೇಕೆ, ಚಪ್ಪಾಳೆಗಳು, ಅವರವರಲ್ಲಿ ಜಗಳಗಳೂ ಆದುವು. ಹಬ್ಬದ ಗದ್ದಲವೆಲ್ಲಾ ಮುಗಿಯುವ ಹೊತ್ತಿಗೆ ನಮರಾತ್ರಿಯೇ ಆಯಿತು. ಅವರು ಮದ್ಯದ ಅಮಲಿನಲ್ಲಿಯೇ ಮೈ ಮರೆತು ಮಲಗಿದರು. ಅವರ ನಾಯಕ ಷಂಷರ್ ಖಾನನೂ ಅವರಿಂದ ಹೊರತಾಗಲಿಲ್ಲ.

ಅವರ ಪೈಕಿ ಮಧ್ಯ ರಾತ್ರಿಯಾದರೂ ಇನ್ನೂ ನಿದ್ರಿಸದೆ ಇದ್ದವನೆಂದರೆ ಆ ಮೂಕ ಅಡಿಗೆಯವನು. ಅವನು ಎಲ್ಲರೂ ಮಲಗಿಕೊಂಡುದನ್ನು ನಿರ್ಧರಿಸಿಕೊಂಡು ರಾಯನಿಗೆ ಹಸಿವಾಗಿರಬಹುದೆಂದು, ಬೆಂದಿದ್ದ ಮಾಂಸದ ಚೂರುಗಳನ್ನು ತಿನ್ನಲಿತ್ತನು. ರಾಯನು ತಾನು ಅವುಗಳನ್ನು ಸ್ವೀಕರಿಸುವುದಿಲ್ಲವೆಂದು ಸನ್ನೆಮಾಡಿ ತಿಳಿಸಿದನು. ಅವನು ಹಸಿವು, ನೀರಡಿಕೆಗಳ ಬಾಧೆ ಮುಟ್ಟದ ಸ್ಥಿತಿಯಲ್ಲಿದ್ದನು. ದಿನದ ಬಳಲಿಕೆಯಿಂದಲೂ, ಮೇಲೆ ಮೇಲೆ ಬಿದ್ದ ಪ್ರಹಾರಗಳಿಂದಲೂ, ಅವನು ಸೋತು ಸೊರಗಿದ್ದನು.

ದಣಿದ ದೇಹಕ್ಕೆ ನಿದ್ರೆಬೇಕಾಗಿತ್ತು. ರಾಯನು ಹಾಗೆಯೇ ಮಲಗಿದನು. ಅವನಿಗೆ ನಿದ್ರೆ ಹತ್ತಿದುದೂ ತಿಳಿಯಲಿಲ್ಲ.

ಮಾರನೆಯ ದಿನ ಬೆಳಗಾಗುವವರೆಗೂ ಗುಹೆಯಲ್ಲಿ ಮಲಗಿದ್ದವರು ಏಳಲಿಲ್ಲ. ಎಲ್ಲರೂ ಮೈಮೇಲೆ ಎಚ್ಚರವಿಲ್ಲದೆ ಗಾಢವಾದ ನಿದ್ರೆಯಲ್ಲಿದ್ದರು. ಎಲ್ಲರಿಗಿಂತಲೂ ಮೊದಲು ಎದ್ದವನೆಂದರೆ ಷಂಷರ್‌ಖಾನ್. ಅವನು ಇತರರನ್ನೆಬ್ಬಿಸಿ, ಹೊರಗೆ ಹೋಗಿ ಮುಖ ತೊಳೆದು ಬಂದು ಹಿಂದಿನ ದಿನದ ಉಳಿದಿದ್ದ ತಂಗಳಲ್ಲಿ ತಿಂದು, ರಾಯನ ವಿಚಾರಣೆಗೆ ಆರಂಭಿಸಿದನು.

ಉಳಿದವರು ರಾಯನನ್ನು ಅಲ್ಲೇಇದ್ದ ಒಂದು ಕಂಬಕ್ಕೆ ಬಿಗಿದು, ತಮ್ಮ ಒಡೆಯನು ಮಾಡುವ ವಿಚಾರಣೆಯನ್ನು ಕುತೂಹಲದಿಂದ ಆಲಿಸುತ್ತಾ ನಿಂತರು. ಷಂಷರ್‌ಖಾನನು ಮೊದಲು ಮಾತನಾಡಿ, ತಾನು ಯಾರು ? ರಾಯನನ್ನು ಹಿಡಿದು ತಂದು ಕೊಲೆಮಾಡುವ ಉದ್ದೇಶವೇನು ಎಂಬುದನ್ನು ವಿವರವಾಗಿ ತಿಳಿಸಿದನು.

ಷಂಷರ್‌ಖಾನನು ಹಿಂದೊಮ್ಮೆ ಬಿಜಾಪುರದ ಸೈನ್ಯದಲ್ಲಿ ಇದ್ದವನೇ. ಅವನು ಧೈರ್ಯದಲ್ಲಿ ಶಕ್ತಿಯಲ್ಲಿ ಹುಲಿಯಂತೆ ಇದ್ದನು. ಬಿಜಾಪುರದ ಸುಲ್ತಾನನೊಂದಿಗೆ ರಾಯಚೂರು ಯುದ್ಧದಲ್ಲಿ ಭಾಗವಹಿಸಿದ್ದನು. ಅವನು ಸ್ವಾಮಿ ನಿಷ್ಠಸೇವಕ. ಅವನ ಸ್ವಾಮಿ—ಒಡೆಯ ಬೇರಾರೂ ಆಗಿರದೆ ಸಲಬತ್‌ಖಾನನೇ ಆಗಿದ್ದ. ಸಲಬತ್‌ಖಾನನಿಗೆ ಷಂಷರ್‌ಖಾನನನ್ನು ಕಂಡರೆ ಬಹಳ ವಿಶ್ವಾಸವಿತ್ತು. ಅವನನ್ನು ತನ್ನ ಸೋದರನಂತೆ ನೋಡುತ್ತಿದ್ದ. ಯುದ್ಧರಂಗದಲ್ಲಿ ಅವನ ಧೈರ್ಯ ಸಾಹಸಗಳನ್ನು ನೋಡಿ ಅವನನ್ನು ಒಂದು ದಳದ ನಾಯಕನನ್ನಾಗಿ ಮಾಡಿದ್ದ. ರಾಯಚೂರಿನ ಯುದ್ಧದಲ್ಲೂ ತನ್ನ ಒಡೆಯನಿಗೆ ಬಲಭುಜವಾಗಿ ನಿಂತು, ಷಂಷರ್‌ಖಾನನು ಜೀವದ ಹಂಗು ತೊರೆದು ಯುದ್ಧ ಮಾಡಿದ್ದ. ದುರ್ದೈವವಶಾತ್ ಯುದ್ಧರಂಗದಲ್ಲಿ ಸಲಬತ್‌ಖಾನನು ರಾಯನಿಗೆ ಕೈಸೆರೆ ಸಿಕ್ಕಿಬಿಟ್ಟಿದ್ದನು. ಷಂಷರ್‌ಖಾನನು ಯುದ್ಧದಲ್ಲಿ ಹತನಾಗದೆ, ಕೈಸೆರೆ ಸಿಕ್ಕದೆ ತಪ್ಪಿಸಿಕೊಂಡು ಓಡಿಹೋಗಿ ಅನಂತರ ಅವನು ಬಿಜಾಪುರದ ಸುಲ್ತಾನನ ಮೈಗಾವಲು ಪಡೆಯಲ್ಲಿ ಒಬ್ಬನಾಗಿ ನಿಂತನು. ಆದರೆ ಅದಿಲ್‌ಷಹನು ಬಿಜಾಪುರದ ಮೇಲೆ ಧಾಳಿಯಿಡಲು ಬಂದ ರಾಯನನ್ನು ಎದುರಿಸಿ ಯುದ್ಧಮಾಡುವ ಬದಲು, ಹೇಡಿ

ಯಂತೆ ನಗರವನ್ನು ಶತ್ರುವಿನ ಪಾಲುಮಾಡಿ ತನ್ನ ಪರಿವಾರ ಸಮೇತ ಓಡಿ ಹೋಗುವುದನ್ನು ಕಂಡು ಅವನು ಹೇಸಿ ಆ ಹೇಡಿಯೊಂದಿಗೆ ಬಾಳುವುದಕ್ಕಿಂತ ಧೀರನಾಗಿ ಸಾಯುವುದು ಮೇಲೆಂದು ಅವನ ಬಳಿಯಿಂದ ಓಡಿಹೋಗಿ ತನ್ನ ಆಪ್ತ ಮಿತ್ರರನ್ನು ಕೂಡಿಸಿಕೊಂಡು ಸಲಬತ್‌ಖಾನನನ್ನು ಸೆರೆಯಿಂದ ಬಿಡುಗಡೆ ಮಾಡುವ ಪ್ರಯತ್ನದಲ್ಲಿ ತೊಡಗಿದ್ದನು. ಇಂತಿರುವಾಗಲೇ ರಾಯನು ಅಸದ್‌ಖಾನನ ಪಿತೂರಿಯಿಂದ ಸೆರೆಮನೆಯಲ್ಲಿದ್ದ ಸಲಬತ್‌ಖಾನನನ್ನು ಚಿತ್ರಹಿಂಸೆ ಕೊಟ್ಟು ಕೊಲ್ಲಿಸಿದ್ದನು. ಈ ಸುದ್ದಿಯನ್ನು ಕೇಳಿ ಷಂಷರ್‌ಖಾನನಿಗೆ ರಾಯನ ಮೇಲೆ ಪ್ರಚಂಡವಾದ ಸಿಟ್ಟು ಬಂದಿತ್ತು. ತನ್ನ ಒಡೆಯನನ್ನು ಅಕಾರಣವಾಗಿ ಹಿಂಸಿಸಿ ಕೊಲೆಮಾಡಿದ ರಾಯನ ಮೇಲೆ ಸೇಡು ತೀರಿಸಿಕೊಳ್ಳಲು ಅವನು ನಿರ್ಧರಿಸಿ ತನ್ನ ನಿರ್ಧಾರವನ್ನು ಕಾರ್ಯಗತಮಾಡಲು ಹೊಂಚುಹಾಕಿ ರಾಯನು ಹೋದೆಡೆಯಲ್ಲೆಲ್ಲಾ ಅವನನ್ನು ಹಿಂಬಾಲಿಸಿಕೊಂಡು ಹೋಗಿದ್ದನು. ಇಂದು ಬೇಟೆಯ ನೆಪದಲ್ಲಿ ಹೊರಗೆ ಹೊರಟ ರಾಯನು ಒಂಟಿಯಾಗಿ ಅವರ ಕೈಗೆ ಸಿಕ್ಕಿಬಿದ್ದುದು ರಾಯನ ದುರದೃಷ್ಟವೆಂದೇ ಹೇಳಬೇಕು.

ರಾಯನು ಹೇಗೆ ಸಲಬತ್‌ಖಾನನನ್ನು ಚಿತ್ರಹಿಂಸೆ ಕೊಟ್ಟು ಕೊಲ್ಲಿಸಿದ್ದನೋ ಅದೇ ರೀತಿ ರಾಯನಿಗೆ ಚಿತ್ರಹಿಂಸೆ ಕೊಟ್ಟು ಕೊಲ್ಲಲು ಷಂಷರ್‌ಖಾನನು ನಿರ್ಧರಿಸಿದ್ದನು.

ಈ ಎಲ್ಲ ಸಂಗತಿಯನ್ನು ಕೇಳಿ ರಾಯನ ಮೈ ಮುಳ್ಳಾಯಿತು. ಸಲಬತ್‌ಖಾನನ ಕೊಲೆಯ ಸೇಡಿಗಾಗಿ ಹಾತೊರೆಯುತ್ತಿರುವ ಷಂಷರ್‌ಖಾನನಿಂದ ತನಗೆ ಬಿಡುಗಡೆಯಿಲ್ಲ ಇವನ ಕೈಯಿಂದ ತನಗೆ ಮೃತ್ಯು ಸಿದ್ಧವೆಂದು ರಾಯನ ಜೀವ ತಲ್ಲಣಿಸಿತು. ಆ ಕ್ಷಣಕ್ಕೆ ಅವನಿಗೆ ತನ್ನ ಪ್ರೀತಿಪಾತ್ರರಾದವರ ನೆನಪಾಯಿತು! ತನ್ನ ಸ್ನೇಹಿತರ ನೆನಪಾಯಿತು! ಪ್ರೀತಿಯ ಅಪ್ಪಾಜಿ ತಿಮ್ಮರಸನ ನೆನಪಾಯಿತು. ತಿಮ್ಮರಸನು ತನ್ನ ಬಳಿಯಲ್ಲಿದ್ದಿದ್ದರೆ ತನಗೆ ಈ ಗಂಡಾಂತರ ಒದಗುತ್ತಿರಲಿಲ್ಲ. ಒಂಟಿಯಾಗಿ ಬೇಟೆಯಾಡಲು ಅವರೆಂದಿಗೂ ಅವಕಾಶ ಕೊಡುತ್ತಿರಲಿಲ್ಲ. ವಿಜಯೋನ್ಮತ್ತನಾಗಿದ್ದ ತಾನು ಸರಿಯಾದ ರಕ್ಷಣೆಯಿಲ್ಲದೆ ಈ ಕಾಡಿಗೆ ಬಂದು ಶತ್ರುಗಳ ಕೈಗೆ ಸಿಕ್ಕಿಬಿದ್ದನೆಂದು ತನ್ನ ದೌರ್ಭಾಗ್ಯವನ್ನು ಹಳಿದುಕೊಂಡು ಸರಿ

ತಪಿಸಿದನು. ಆ ಕ್ಷಣಕ್ಕೆ ತಿಮ್ಮರಸನು ಹೇಳಿದ ಎಲ್ಲ ಮಾತುಗಳು, ಯುದ್ಧ ವನ್ನು ವಿರೋಧಿಸಿ ಬಿಜಾಪುರದ ಸುಲ್ತಾನನೊಂದಿಗೆ ಸ್ನೇಹದಿಂದ ಇರುವಂತೆ ಹೇಳಿದ ಎಲ್ಲ ಮಾತುಗಳು ನೆನಪಿಗೆ ಬಂದವು. ತಾನು ತಿಮ್ಮರಸನ ಮಾತು ಕೇಳದೆ ಬಿಜಾಪುರದ ಸುಲ್ತಾನನ ಮೇಲೆ ಯುದ್ಧಕ್ಕೆ ಹೊರಟು ಯುದ್ಧದ ದೆಸೆಯಿಂದ ಸಲಬತ್‌ಖಾನನನ್ನು ಸೆರೆಯಲ್ಲಿಡಬೇಕಾಗಿ ಬಂದು, ಅಸದ್ ಖಾನನ ಪಿತೂರಿಗೆ ಬಲಿಯಾಗಿ ಸಲಬತ್‌ಖಾನನನ್ನು ಕೊಲ್ಲಿಸಬೇಕಾ ಯಿತು. ಈ ಕೊಲೆಯಿಂದ ತಾನು ಷಂಷರ್‌ಖಾನನ ಕೈಗೆ ಸಿಕ್ಕಿ ಸಾಯುವ ಹೊತ್ತು ಬಂದಿದೆ—ಎಂದು ತನ್ನ ದುರ್ವಿಧಿಗಾಗಿ ಹಳಿದುಕೊಂಡನು.

ಸಲಬತ್‌ಖಾನನನ್ನು ತಾನು ಹೇಗೆ ವಿಚಾರಣೆಯಿಲ್ಲದೆ ಕ್ರೂರವಾಗಿ ಶಿಕ್ಷಿಸಿ ಕೊಂದನೊ ಅದೇ ಬಗೆಯ ಶಿಕ್ಷೆಯನ್ನು ತಾನು ಅನುಭವಿಸಬೇಕಾಗಿ ರುವ ಸಂಗತಿಯನ್ನು ನೆನೆದು ರಾಯನ ಮುಖ ಬೆವರಿತು. ರಕ್ತ ಹೆಪ್ಪು ಗಟ್ಟಿತು.

ರಾಯನಿಗೆ ಸಾಯಲು ಅಂಜಿಕೆಯಿರಲಿಲ್ಲ. ಆದರೆ ತನಗೆ ಈಗ ಬರ ಲಿದ್ದ ಸಾವಿಗಾಗಿ ಅಂಜಿದ್ದ. ಚಕ್ರೇಶ್ವರನಾದ ತಾನು ದಕ್ಷಿಣಾಪಥದ ಏಕೈಕ ಸಾಮ್ರಾಟನಾದ ತಾನು, ಅರಿರಾಯಗಂಡನೆಂದು ಬಿರುದು ಹೊತ್ತ ತಾನು, ಒಬ್ಬ ಅನಾಮಧೇಯನ ಕೈಯಲ್ಲಿ ಅನಾಮಧೇಯ ಸ್ಥಳದಲ್ಲಿ ಕ್ರೂರ ರೀತಿಯಲ್ಲಿ ಕೊಲ್ಲಲ್ಪಡುವುದನ್ನು ನೆನೆದು ರಾಯನು ತತ್ತರಿಸಿದನು. ತನ್ನಂ ತಹ ವೀರನಿಗೆ ಯುದ್ಧರಂಗದಲ್ಲಿ ಸಾವು ಬಂದಿದ್ದರೆ ವೀರಸ್ವರ್ಗಕ್ಕೆ ಹೋಗ ಬಹುದಿತ್ತು. ಆದರೆ ಗವಿಯಲ್ಲಿ ಚಿತ್ರಹಿಂಸೆಗೆ ಒಳಗಾಗಿ, ನಾಯಿ ನರಿಗ ಳಿಗೂ ಕೀಳಾದ ಸಾವನ್ನಪ್ಪಿದರೆ ತನಗೆ ವೀರಮರಣವೂ ಇಲ್ಲ; ಸ್ವರ್ಗ ಸುಖವೂ ಇಲ್ಲ. ತನಗೆ ಎಂತಹ ಪಾಡು ಬಂತು ಎಂದು ದುಃಖಿಸಿದನು. ಪಂಪಾಪತಿಯ ದಯವಿದ್ದಂತೆ ಆಗಲಿ ಎಂದು ಕೊನೆಯ ಭಾರಿ ವಿರೂ ಪಾಕ್ಷನನ್ನು ನೆನೆದು ದೈವದ ಮೇಲೆ ಭಾರಹಾಕಿ, ನಿಶ್ಚಿಂತೆಯಿಂದ ನಿಂತನು.

ಅಷ್ಟರಲ್ಲಿ ಷಂಷರ್‌ಖಾನನು ಬಂದು ರಾಯನ ಮುಂದೆ ನಗುತ್ತಾ ನಿಂತುಕೊಂಡನು. ರಾಯನ ದುರವಸ್ಥೆಯನ್ನು ನೋಡಿ ಅವನಿಗೆ ಸಂತೋ ಷವಾಗಿತ್ತು. ರಾಯನು ಸಾಯುವ ಮುನ್ನ ಸಲಬತ್‌ಖಾನನ ಸಾವಿಗೆ ಪಶ್ಚಾತ್ತಾಪ ಪಡುವಂತೆ ಮಾಡುವುದೇ ಇದುವರೆಗೆ ರಾಯನನ್ನು ಸುಮ್ಮನೆ

ಬಿಟ್ಟ ಉದ್ದೇಶವಾಗಿತ್ತು. ರಾಯನ ಬಾಯಿಂದ ಒಂದು ಶಬ್ದ ಬರದೆ ಇರುವುದನ್ನು ಕಂಡು ರಾಯನನ್ನು ವಿಚಾರಿಸಿಕೊಳ್ಳಲು ಅವನ ಬಳಿಗೆ ಬಂದಿದ್ದನು.

ತನ್ನನ್ನು ಮುಟ್ಟಲು ಬರುತ್ತಿದ್ದ ಷಂಷರ್‌ಖಾನನನ್ನು ನೋಡಿ 'ನೀಚ, ದೂರ ಸರಿ !' ಎಂದು ಗರ್ಜಿಸಿದ ರಾಯ.

ಈ ಮಾತು ಕೇಳಿ ಷಂಷರ್‌ಖಾನನು ಗಹಗಹಿಸಿ ನಕ್ಕು ' ಸಾಮ್ರಾಟರನ್ನು ಮುಟ್ಟಿ ನಾನೇಕೆ ನನ್ನ ಕೈಯನ್ನು ಅಪವಿತ್ರಗೊಳಿಸಿಕೊಳ್ಳಲಿ? ಅವರನ್ನು ಮುಟ್ಟುವುದು ಕೈಯಲ್ಲಿ ಅಲ್ಲ—ಈ ಕತ್ತಿಯಲ್ಲಿ ' ಎಂದು ಕತ್ತಿಯ ಮೊನೆಯನ್ನು ರಾಯನ ಎದೆಯ ಮೇಲೆ ಇಟ್ಟು ಹೇಳಿದನು.

' ಹೇಡಿ, ದೂರ ಸರಿ. ಅಸಹಾಯಕನಾಗಿ ಕೈಸೆರೆ ಸಿಕ್ಕಿದವನ ಮೇಲೆ ನಿನ್ನ ಶೌರ್ಯ ಪ್ರದರ್ಶನವೆ ? ನಿನ್ನ ಧೈರ್ಯಕ್ಕೆ ಧಿಕ್ಕಾರ ! ನೀನು ವೀರನಾಗಿದ್ದರೆ ನನ್ನ ಕೈಗೆ ಕತ್ತಿಯನ್ನು ಕೊಟ್ಟು ಯುದ್ಧಮಾಡು ಹೇಡಿಯಂತೆ ಕತ್ತು ಹಿಸುಕಿ ಕೊಲ್ಲುವ ಯೋಚನೆ ಮಾಡಬೇಡ '

' ಸಾಮ್ರಾಟರು ಮಹಾ ಪ್ರತಾಪಶಾಲಿಗಳು ! ಅವರ ಕೈಗೆ ಕತ್ತಿ ಕೊಟ್ಟು ಧರ್ಮಯುದ್ಧ ಮಾಡಬೇಕಂತೆ, ಧರ್ಮಯುದ್ಧ ! ಸಾಮ್ರಾಟರು ಇತ್ತ ಲಾಲಿಸಬೇಕು. ಆ ದಿನ ಸೆರೆಮನೆಯಲ್ಲಿ ಸಲಬತ್‌ಖಾನರನ್ನು ಕೊಲ್ಲುವಂದು ಈ ಧರ್ಮಬುದ್ಧಿ ಎಲ್ಲಿ ಹೋಗಿತ್ತು ? ನಿಸ್ಸಹಾಯಕರಾದ ಅವರನ್ನು ಚಿತ್ರ ಹಿಂಸೆ ಕೊಟ್ಟು ಕೊಲ್ಲುವಾಗ ಮಹಾಪ್ರಭುಗಳ ಬುದ್ಧಿ ಎಲ್ಲಿ ಹೋಗಿತ್ತೊ ಕಾಣೆ' ಎಂದು ವ್ಯಂಗವಾಗಿ ನಕ್ಕು ಹೇಳಿದನು.

ರಾಯನು ಈ ಮಾತಿಗೆ ಏನು ಉತ್ತರ ಕೊಡಬೇಕೆಂದು ತೋರದಂತೆ ಕ್ಷಣಕಾಲ ಸುಮ್ಮನಿದ್ದು ಅನಂತರ ಹೇಳಿದನು.

' ಇಷ್ಟೆಲ್ಲ ಅಸದ್‌ಖಾನನ ಪಿತೂರಿಯಿಂದಾಯಿತು '

' ಅಸದ್‌ಖಾನನ ಪಿತೂರಿಯಿಂದಲೊ ? ಪಾಪ, ಆಗ ಸಾಮ್ರಾಟರ ವಿವೇಕ, ಧರ್ಮಬುದ್ಧಿ ಎಲ್ಲಿ ಹೋಗಿತ್ತೊ ! ಇದೆಲ್ಲ ಕಪಟ ನಾಟಕ ! ನನ್ನ ಮುಂದೆ ನಡೆಯುವುದಿಲ್ಲ! ನಿಮ್ಮನ್ನು ಬೇಗನೆ ಸಲಬತ್‌ಖಾನನ ಬಳಿಗೆ ಕಳುಹಿಸುತ್ತೇನೆ. ನೀವೇ ಅವರ ಬಳಿಗ ಹೋಗಿ ಏನು ಹೇಳಿಕೊಳ್ಳುವಿರೋ ಹೇಳಿಕೊಳ್ಳಿ !' ಎಂದು ಹೇಳಿ ರಾಯನ ಎದೆಯ ಮೇಲೆ ಖಡ್ಗದ ಮೊನೆ

ಯಿಂದ ಗಾಯಗೊಳಿಸಿ, ಅನಂತರ ಖಡ್ಗವನ್ನೆತ್ತಿ ರಾಯನ ಎದೆಗೆ ಗುರಿಯಿಟ್ಟನು. ಅದೃಷ್ಟವಶಾತ್ ಆ ಪೆಟ್ಟು ಜಾರಿ ಭುಜದ ಬಳಿ ಬಲವಾದ ಗಾಯವನ್ನು ಮಾಡಿತೇ ಹೊರತು, ರಾಯನ ಪ್ರಾಣವನ್ನು ಅಪಹರಿಸಲಿಲ್ಲ.

ರಾಯನು ಖಡ್ಗದ ಪೆಟ್ಟಿಗೆ 'ಹಾ' ಎಂದು ಚೀರಿ ತಲೆಯನ್ನು ಕೊಡವಿದನು. ಷಂಷರ್‌ಖಾನನು ರಾಯನನ್ನು ಕತ್ತಿಯ ಮೊನೆಯಿಂದ ಚುಚ್ಚಿ ಎಚ್ಚರಿಸಿದನು. ಅನಂತರ ಮನಸ್ಸು ಬಂದ ಕಡೆ ರಾಯನನ್ನು ಗಾಯಗೊಳಿಸಿ ರಕ್ತಾಭಿಷೇಕ ಮಾಡಿ ಗಲ್ಲಿಗೆ ಹಾಕಲು ಗಲ್ಲಿನ ಮರದ ಬಳಿಗೆ ಕರೆದುಕೊಂಡು ಹೋದನು.

ಇನ್ನೇನು ರಾಯನನ್ನು ಗಲ್ಲಿಗೇರಿಸಿ, ಅವನ ಅವತಾರವನ್ನು ಸಮಾಪ್ತಿಗೊಳಿಸಬೇಕೆನ್ನುವಷ್ಟರಲ್ಲಿ ಒಂದು ಅದ್ಭುತ ನಡೆಯಿತು. ಎಲ್ಲಿಂದಲೋ ಒಬ್ಬ ಸಂನ್ಯಾಸಿ ಅಲ್ಲಿ ಹಠಾತ್ತನೆ ಕಾಣಿಸಿಕೊಂಡು, ತನ್ನ ತ್ರಿಶೂಲದಿಂದ ರಾಯನ ಕತ್ತಿಗೆ ಬಿಗಿದಿದ್ದ ನೇಣಿನ ಹಗ್ಗವನ್ನು ಕತ್ತರಿಸಿದನು. ಅದನ್ನು ನೋಡಿ ದಿಗ್ಭ್ರಮೆಗೊಂಡ ಷಂಷರ್‌ಖಾನನು ಆ ಸಂನ್ಯಾಸಿಯ ಮೇಲೆ ಕೈ ಮಾಡಲು ತೊಡಗಬೇಕೆನ್ನುವಷ್ಟರಲ್ಲಿ, ಆ ಸಂನ್ಯಾಸಿ ಕೈಯಲ್ಲಿದ್ದ ಭಸ್ಮವನ್ನು ಊದಿ ರಾಯನನ್ನು ಹೊತ್ತುಕೊಂಡು ಹೊರಟನು. ಬೂದಿಯಿಂದ ದಟ್ಟವಾದ ಹೊಗೆ ಮೇಲೆದ್ದು, ಆ ಗುಹೆಯನ್ನೆಲ್ಲಾ ಆವರಿಸಿ, ಮುಚ್ಚಿಬಿಟ್ಟಿತು. ಮರುನಿಮಿಷದಲ್ಲಿ ಭಯಂಕರ ಆಸ್ಫೋಟನೆ ಕೇಳಿಸಿ ಅಲ್ಲಿದ್ದವರೆಲ್ಲಾ ಅಲ್ಲೇ ಸಮಾಧಿಯಾದರು.

ರಾಯನಿಗೆ ತಿಳಿವುಗೊಂಡು ಕಣ್ಣುಬಿಟ್ಟು ನೋಡಿದಾಗ ಅವನನ್ನು ಪರ್ಣಕುಟಿಯಲ್ಲಿ ಮಲಗಿಸಿ, ಒಬ್ಬ ಸಂನ್ಯಾಸಿಯು ಅವನ ಆರೈಕೆ ಮಾಡುತ್ತಾ ನಿಂತಿದ್ದನು. ಅವನಿಗೆ ಇದೆಲ್ಲವೂ ಕನಸಿನಲ್ಲಿ ನಡೆಯುತ್ತಿದ್ದಂತೆ ಭಾಸವಾಗಿತ್ತು.

ರಾಯನು ಎಚ್ಚರಗೊಂಡುದನ್ನು ಕಂಡು, ಆ ಸಂನ್ಯಾಸಿಗೆ ತನ್ನ ಪ್ರಯತ್ನವು ವಿಫಲವಾಗಲಿಲ್ಲವೆಂದು ಸಂತೋಷ ಉಂಟಾಯಿತು. ರಾಯನು ಸಾವಿನ ದವಡೆಯಿಂದ ಪಾರಾದನೆಂದು ಹರ್ಷಿಸಿದನು.

ಆ ಸಂನ್ಯಾಸಿ ಮಾಡಿದ ಸತತವಾದ ಆರೈಕೆ, ಉಪಚಾರಗಳಿಂದ ರಾಯನಿಗೆ ಹೋದ ಜೀವ ಮತ್ತೆ ಬಂದಿತ್ತು. ಕಾಡಿನಲ್ಲಿ ದೊರೆಯುವ

ನಾರುಬೇರುಗಳಿಂದ, ಆ ಸಂನ್ಯಾಸಿ ಸಂಜೀವಿನಿಯಂತಹ ಔಷಧವನ್ನು ತಯಾರಿಸಿ ರಾಯನ ಗಾಯಗಳಿಗೆಲ್ಲ ಬಳಿದಿದ್ದನು. ಅಲ್ಲದೆ ರಾಯನಿಗೆ ಹೋಗಿದ್ದ ಪ್ರಜ್ಞೆ ಮರಳಿ ಬರಲು, ಯಾವುದೋ ರಸವನ್ನು ಕುಡಿಸಿ, ಮೈಗೆಲ್ಲಾ ಬೂದಿಯಿಂದ ಕಾವುಗೊಡುತ್ತಾ ಕುಳಿತಿದ್ದನು. ರಾಯನು ರಕ್ತ ಸ್ರಾವದಿಂದ ತುಂಬಾ ಅಶಕ್ತನಾಗಿ, ಇಹಲೋಕದ ಮೇಲಿನ ಪರಿವೆಯಿಲ್ಲದೆ, ಜೀವ ಶವದಂತೆ ಬಿದ್ದಿದ್ದನು. ಅವನ ದೇಹದಲ್ಲಿ ಗುಟುಕು ಜೀವ ಮಾತ್ರ ಉಳಿದಿತ್ತು. ಇಂತಹ ವಿಷಮ ಪರಿಸ್ಥಿತಿಯಲ್ಲಿ ಆ ಸಂನ್ಯಾಸಿ ರಾಯನ ನೆರವಿಗೆ ಬಂದು, ಅವನನ್ನು ಗಲ್ಲಿನಿಂದ ಪಾರು ಮಾಡಿದುದಲ್ಲದೆ, ಅವನ ಗಾಯಗಳಿಗೆ ಚಿಕಿತ್ಸೆ ನಡೆಸಿ, ರಾಯನ ಪ್ರಾಣವನ್ನು ಉಳಿಸಿದ್ದನು. ಮುಖ್ಯ ರಾಯನ ಆಯಸ್ಸು ಗಟ್ಟಿಯಾಗಿತ್ತು. ಪಂಪಾಪತಿಯ ಕೃಪೆ ಅನಂತವಾಗಿತ್ತು. ಅಂತಹ ಸ್ಥಿತಿಯಲ್ಲೂ ರಾಯನು ಪಾರಾಗಿ ಜೀವದಿಂದ ಉಳಿದುಕೊಂಡಿದ್ದನು. ಇದು ಅವನ ಪುಣ್ಯದಿಂದ ಮಾತ್ರವೇ ಅಲ್ಲ. ಸಾಮ್ರಾಜ್ಯದ ಪ್ರಜಾಕೋಟಿಯ ಪುಣ್ಯದಿಂದ ಉಳಿದುಕೊಂಡಿದ್ದನು. ಅವನು ಮಾಡಿದ ದಾನ ಧರ್ಮಗಳು ಸಂನ್ಯಾಸಿಯ ರೂಪದಲ್ಲಿ ಬಂದು ಅವನನ್ನು ಕಾಪಾಡಿದ್ದವು.

ರಾಯನು ತನ್ನ ಸುಷುಪ್ತಿಯ ಮಂಪರದ ಸ್ಥಿತಿಯಿಂದ ಎಚ್ಚೆತ್ತು ಕೊಂಡು ನೋವು ನಲಿವುಗಳನ್ನು ಅರಿಯಬಲ್ಲ ಜಾಗ್ರತಾವಸ್ಥೆಗೆ ಬರಲು ಬಹಳ ಕಾಲ ಬೇಕಾಯಿತು. ರಾಯನನ್ನು ಆ ಸ್ಥಿತಿಗೆ ತರಲು ಆ ಸಂನ್ಯಾಸಿ ತನ್ನ ತಪಃಪ್ರಭಾವವನ್ನೆಲ್ಲಾ ವ್ಯಯಿಸಿದ್ದನು. ತನ್ನ ತಪಸ್ಸನ್ನು ಧಾರೆಯೆರೆದು ರಾಯನನ್ನು ಬದುಕಿಸಿದ್ದ. ಆ ಮಹಾತ್ಮನ ತಪಃ ಪ್ರಭಾವ ದಿಂದಲ್ಲದೆ ರಾಯನು ಉಳಿಯುವುದು ದುಸ್ತರವಾಗಿತ್ತು. ಹೀಗೆ ಸಾಮ್ರಾ ಜ್ಯದ ದೈವ ರಾಯನನ್ನು ರಕ್ಷಿಸಿತ್ತು.

ರಾಯನಿಗೆ ಈಗ ಸಂಪೂರ್ಣ ಪ್ರಜ್ಞೆ ಬಂದಿತ್ತು. ಅವನಿಗೆ ತನ್ನನ್ನು ಆರೈಕೆ ಮಾಡುತ್ತಿರುವ, ಸಂನ್ಯಾಸಿ ಯಾರು? ತಾನು ಇಲ್ಲಿಗೆ ಹೇಗೆ ಬಂದೆ? ತನ್ನನ್ನು ಕೊಲೆ ಮಾಡಲು ಬಂದ ಷಂಷರ್ ಖಾನ್ ಏನಾದನು? ಅವನಿಂದ ದುರ್ಭೇಧ್ಯವಾದ ಗುಹೆಯಿಂದ ತಪ್ಪಿಸಿಕೊಂಡ ಬಗೆ ಹೇಗೆ? ಇವೇ ಮೊದಲಾದ ಪ್ರಶ್ನೆಗಳಿಗೆ ಉತ್ತರ ತಿಳಿಯದೆ ಕುತೂಹಲಗೊಂಡು

ತನ್ನನ್ನೇ ಎವೆಯಿಕ್ಕದೆ ನೋಡುತ್ತಾ ಕುಳಿತಿದ್ದ ಆ ಸಂನ್ಯಾಸಿಯನ್ನು ನೋಡಿದನು.

ರಾಯನ ನೋಟದಲ್ಲಿದ್ದ ಕುತೂಹಲವನ್ನು ಅರಿತು ಈ ಸಂನ್ಯಾಸಿ ಮುಗುಳುನಕ್ಕನು. ಆ ನಗು ಬೆಳುದಿಂಗಳಂತೆ ಆಹ್ಲಾದಕರವಾಗಿತ್ತು.

'ಪ್ರಭು! ಈಗ ದೇಹದಲ್ಲಿ ನೋವು ಹೇಗಿದೆ? ಗಾಯಗಳು ಇನ್ನೂ ಉರಿಯುತ್ತಿವೆಯೇ?' ಎಂದು ಪ್ರೀತಿಯಿಂದ ಮೃದುವಾಗಿ ಪ್ರಶ್ನಿಸಿ, ರಾಯನ ತಲೆಯನ್ನು ನೇವರಿಸಿದನು.

ರಾಯನಿಗೆ ಆ ಸಂನ್ಯಾಸಿಯ ವಿಷಯದಲ್ಲಿ ವಿಶೇಷ, ಗೌರವ, ಭಯ ಭಕ್ತಿಗಳುಂಟಾಗಿದ್ದವು. ಸಾವಿನ ದವಡೆಯಲ್ಲಿದ್ದ ತನ್ನನ್ನು, ಇನ್ನು ಬದುಕುವುದಿಲ್ಲವೆಂದು ತಿಳಿದಿದ್ದ ತನ್ನನ್ನು ಉಳಿಸಿ ಕಾಪಾಡಿದ ಅವನು ಸಾಮಾನ್ಯ ಮನುಷ್ಯನಲ್ಲ—ಅವತಾರ ಪುರುಷ ಎಂದು ರಾಯನ ಭಾವನೆಯಾಗಿತ್ತು. ತನ್ನ ಮೇಲೆ ಕೃಪೆಯಿಟ್ಟು ಪಂಪಾಪತಿಯೇ ಈ ವೇಷದಲ್ಲಿ ಬಂದು ತನ್ನನ್ನು ಷಂಷರ್‌ಖಾನನ ಕರಾಳ ಮುಷ್ಟಿಯಿಂದ ಪಾರು ಮಾಡಿದನೆಂಬ ನಂಬಿಕೆ ದೃಢವಾಗಿತ್ತು. ಯಾರಿಗೂ ತಿಳಿಯದ ಅಗೋಚರ ಸ್ಥಳದಲ್ಲಿ, ಸಾಯಲು ಸಿದ್ಧನಾಗಿ, ಗಲ್ಲಿನ ಮರ ಹತ್ತಿದ್ದ! ತನ್ನನ್ನು ಒಮ್ಮೆಲೆ ಪಾರು ಮಾಡಬೇಕೆಂದರೆ ಅವನು ತ್ರಿಕಾಲ ಜ್ಞಾನಿಯೇ ಸರಿ. ಅಂತಲೇ ರಾಯನು ಎಚ್ಚರವಾದೊಡನೆಯೇ ಆ ಸಂನ್ಯಾಸಿಯನ್ನು ಮನಸ್ಸಿನಲ್ಲಿಯೇ ಸಾವಿರ ಬಾರಿ ವಂದಿಸಿದ್ದನು.

ರಾಯನ ಕುತೂಹಲವನ್ನು ಕಂಡು ಸಂನ್ಯಾಸಿ ಮೆಲ್ಲಗೆ ಹೇಳಿದನು. 'ಪಂಪಾಪತಿಯ ದಿವ್ಯಾನುಗ್ರಹದಿಂದಲೇ ನೀವು ಇಂದು ಉಳಿದುಕೊಂಡುದು. ಸಾಮ್ರಾಜ್ಯದ ಪುಣ್ಯ ವಿಶೇಷದಿಂದ, ನೀವು ಮಾಡಿದ ದಾನ ಧರ್ಮಗಳಿಂದ ಜೀವಂತರಾಗಿ ಉಳಿದುಕೊಂಡಿರಿ' ಎಂದು ಹೇಳಿ ರಾಯನು ವಿಪತ್ತಿನಿಂದ ಹೇಗೆ ಪಾರಾದನೆಂಬ ಸಂಗತಿಯನ್ನು ಸವಿಸ್ತಾರವಾಗಿ ತಿಳಿಸಿದನು.

ಅನಂತರ ಗಂಭೀರವಾಣಿಯಲ್ಲಿ ಸಂನ್ಯಾಸಿ ಮತ್ತೆ ಹೇಳಿದನು.

'ಅಂದು ವಿಜಯ ದಶಮಿಯ ದಿನ, ಪ್ರಭುಗಳು ನನ್ನ ಮಾತನ್ನು ಸಾಮಾನ್ಯ ಬಡಜೋಗಿಯ ಮಾತೆಂದು ಉಪೇಕ್ಷೆ ಮಾಡಿದಿರಿ. ಶಾಂತಿ

ಸಂದೇಶವನ್ನು ಸಾರುವ ಬದಲು ಬಿಜಾಪುರದ ಮೇಲೆ ಯುದ್ಧವನ್ನು ಘೋಷಿಸಿದಿರಿ. ಆದರಂತೆ ಜನತೆಯ ಇಷ್ಟದ ವಿರುದ್ಧ ಬಿಜಾಪುರದ ಸುಲ್ತಾನರ ಮೇಲೆ ದಂಡೆತ್ತಿ ಹೋದಿರಿ. ರಾಯಚೂರಿನ ಯುದ್ಧದಲ್ಲಿ ಅವನನ್ನು ಸದೆ ಬಡಿದು ಸೋಲಿಸಿದಿರಿ. ಅನಂತರವಾದರೂ ಪ್ರಭುಗಳು ದೊರೆತ ವಿಜಯದಿಂದ ತೃಪ್ತಿ ಹೊಂದಿ, ಸುಲ್ತಾನರೊಂದಿಗೆ ಗೌರವಪೂರ್ಣವಾದ ಒಪ್ಪಂದ ಮಾಡಿಕೊಂಡು ಎರಡು ರಾಷ್ಟ್ರಗಳ, ಸ್ನೇಹ, ಶಾಂತಿ, ನೆಮ್ಮದಿಗಳಿಗೆ ಅಡಿಪಾಯ ಹಾಕುವಿರೆಂದು ಸಾಮ್ರಾಜ್ಯದ ಜನತೆ ನಂಬಿತ್ತು. ಆದರೆ ಜನತೆಯ ಅಭೀಷ್ಟವನ್ನು ತಿರಸ್ಕರಿಸಿ ಸೋತು ಶರಣಾಗಿ, ಸ್ನೇಹ ಭಿಕ್ಷೆಗೆ ಬಂದಿದ್ದ ಸುಲ್ತಾನರನ್ನು ಅಪಮಾನ ಮಾಡಿ ಕಳುಹಿದಿರಿ. ಅವರನ್ನು ತಿರಸ್ಕಾರವಾಗಿ ಕಂಡು ಆದರಂತೆ ನಡೆಸಿಕೊಂಡಿರಿ. ಇಷ್ಟೇ ಸಾಲದೆಂಬಂತೆ, ತುಂಬಿದ ಸಭೆಯಲ್ಲಿ, ಸುಲ್ತಾನರ ಆತ್ಮಗೌರವಕ್ಕೆ ಬಗೆಯುವಂತಹ ವರ್ತನೆಯನ್ನು ಅಪೇಕ್ಷಿಸಿದಿರಿ! ಪ್ರಭುಗಳ ಕೋರಿಕೆಯನ್ನು ನಡೆಸದಿದ್ದ ಸುಲ್ತಾನರ ಮೇಲೆ ಆಗ್ರಹಗೊಂಡು, ಬಲಾತ್ಕಾರ ಮಾಡಲು ಬಿಜಾಪುರದ ಮೇಲೆ ದಂಡೆತ್ತಿ ಹೋಗಿ, ಆ ಸುಂದರ ನಗರವನ್ನು ಹಾಳುಗೆಡಹಿ ಬಂದಿರಿ. ಅಸದ್‌ಖಾನನ ಮೋಸದ ಮಾತನ್ನು ನಂಬಿ, ವೀರನೂ, ನಿಸ್ಪೃಹನೂ ಆದ ಸಲಬತ್‌ಖಾನನನ್ನು ವಿಚಾರಣೆಯಿಲ್ಲದೆ ಕೊಲ್ಲಿಸಿದಿರಿ. ಅಸದ್‌ಖಾನನ ಮೋಸ ಬಯಲಾದ ಮೇಲೆ ಸೇಡು ತೀರಿಸಿಕೊಳ್ಳಲು ಗುಲ್ಬರ್ಗದ ಮೇಲೆ ದಾಳಿಯಿಟ್ಟಿರಿ. ಇಂದು ಸಲಬತ್‌ಖಾನನ ಕಿಂಕರನೊಬ್ಬನ ಸೇಡಿಗೆ ಬಲಿಯಾಗಿ, ಪ್ರಾಣಕ್ಕೆ ಗಂಡಾಂತರ ತಂದುಕೊಂಡಿದ್ದಿರಿ! ಇವುಗಳೆಲ್ಲ ಯಾವುದರಿಂದ? ಏತಕ್ಕಾಗಿ ಉಂಟಾಯಿತು? ಪ್ರಭುಗಳು ಅಂದು ಪ್ರಜಾಕೋಟಿಗೆ ಶಾಂತಿ ಸಂದೇಶವನ್ನು ಕೊಡದೆ, ಯುದ್ಧದ ಘೋಷಣೆ ಮಾಡಿದುದೇ ಇಷ್ಟೆಲ್ಲಾ ವಿಪತ್ತುಗಳಿಗೆ ನಾಂದಿಯಾಯಿತು. ಪ್ರಭುಗಳು ಮೊದಲಿನಿಂದ ಕಡೆಯವರೆಗೂ ಒಂದಾದ ಮೇಲೆ ಒಂದರಂತೆ ತಪ್ಪು ಮಾಡುತ್ತಲೇ ಬಂದಿದ್ದೀರಿ. ಮೇಲಿಂದ ಮೇಲೆ ದೊರೆತ ವಿಜಯ ತಮ್ಮ ವಿವೇಕವನ್ನು ಮರೆಸಿತು. ತಿಮ್ಮರಸರ ವಿವೇಕವಾಣಿಗೆ ಪ್ರಭುಗಳು ಕಿವಿಗೊಡದಷ್ಟು ಅಹಂಕಾರ ಸ್ವಪತ್ರಿಷ್ಠೆಗಳು ಬೆಳೆದವು. ಇವು ವಿಚಾರ ದೃಷ್ಟಿಯ ಮೇಲೆ ಪರೆ ಎಳೆದು, ಅನೇಕ ಅವಿವೇಕದ ಕೃತ್ಯಗಳಿಗೆ ಇಂಬು

ೂಟ್ಟಿತು....ಇದುವರೆಗೆ ಆದುದಕ್ಕೆ ಈಗ ಚಿಂತಿಸಿ ಫಲವಿಲ್ಲ. ಇನ್ನಾದರೂ ್ರಭುಗಳು ಯುದ್ಧವನ್ನು ಸಾಕು ಮಾಡಿ, ಜನತೆಗೆ ಶಾಂತಿಯ ಸಂದೇಶ ನ್ನು ದಯಪಾಲಿಸಿ, ಇದುವರೆಗೂ ಕೈಗೊಂಡಿದ್ದ ಮಾರಣ ಹೋಮಕ್ಕೆ ೊನೆತಂದು, ಎರಡು ರಾಷ್ಟ್ರಗಳಿಗಿರುವ ಹಗೆತನ ದ್ವೇಷಗಳನ್ನು, ಸ್ನೇಹ ್ರೀತಿಗಳಿಂದ ಅಳಿಸಿಬಿಡಿ. ಬಿಜಾಪುರದ ಸುಲ್ತಾನರೊಂದಿಗೆ ಗೌರವ ೂರ್ಣವಾದ ಒಪ್ಪಂದವನ್ನು ಮಾಡಿಕೊಳ್ಳಿ. ಇದೇ ಬದುಕುವ ದಾರಿ. ದರಿಂದ ಎರಡು ರಾಷ್ಟ್ರಗಳ ಜನತೆಯ ಉತ್ಕರ್ಷವಾಗುವುದು. ಜಗತ್ಕ ್ಯಾಣವಾಗುವುದು ಖಂಡಿತ. ಪ್ರಭುಗಳು ಮಹಾ ಜನತೆಗೆ ಅಭಯ ಸ್ತನೀಡಿ ಶಾಂತಿದೂತರಾಗಿ ಚಿರಕಾಲ ಬಾಳಿ. ಭಗವಂತನ ಕೃಪೆ ಮ್ಮ ಮೇಲೆ ಅನಂತವಾಗಿರಲಿ.' ಎಂದು ಹೇಳಿ ತನ್ನ ಮಾತನ್ನು ನಿಲ್ಲಿಸಿ ನು.

ಅನಂತರ ತನ್ನದೆನ್ನುವ, ದಂಡಕಮಂಡಲಗಳನ್ನು ಕೈಗೆತ್ತಿಕೊಳ್ಳುತ್ತಾ ಪ್ರಭು, ನಾನಿನ್ನು ಹೊರಡುತ್ತೇನೆ. ಇನ್ನು ನಿಮಗೆ ಜೀವ ಭಯವಿಲ್ಲ. ಮ್ಮ ಮೇಲೆ ಪಂಪಾಪತಿಯ ಕೃಪೆ ಅನಂತವಾಗಿದೆ. ನಿಮ್ಮನ್ನು ಅರಿಸಿ ೊಂಡು ನಿಮ್ಮ ಸಂಗಡಿಗರು ಇನ್ನು ಕೊಂಚ ಹೊತ್ತಿನಲ್ಲಿಯೇ ಬಂದು ಮ್ಮನ್ನು ಒಯ್ಯುತ್ತಾರೆ. ಈ ಬಗ್ಗೆ ನಿಮಗೆ ಸಂಶಯಬೇಡ. ನಿಮ್ಮ ್ನಸಿಂಹಾಸನಕ್ಕೆ ಒದಗಿದ್ದ ಎರಡನೆಯ ಗಂಡಾಂತರ ಹೀಗೆ ಭಗವಂತನ ಯೆಯಿಂದ ನಿವಾರಿಸಲ್ಪಟ್ಟಿತು' ಎಂದು ಹೇಳಿ ಆ ಸಂನ್ಯಾಸಿ ತನ್ನ ಾಲ ಬಳಿಯಿದ್ದ ರಾಯನನ್ನು ಆಶೀರ್ವದಿಸಿ ಅವನನ್ನು ಬೀಳ್ಕೊಂಡು ೊರಟುಹೋದನು.

ರಾಯನು ದಿಗ್ಭ್ರಮೆಯಿಂದ ಅವನು ಹೊರಟುಹೋಗುವುದನ್ನೇ ೋಡುತ್ತಿದ್ದು ಅನಂತರ ಪರ್ಣಕುಟಿಯನ್ನು ನೋಡಿದನು. ಅದು ಬರಿ ಾಗಿ ಕಂಡಿತು. ಅಂತೆಯೇ ಅವನ ಮನಸ್ಸು, ಹೃದಯ ಬರಿದಾಗಿ ಂಡಿತು. ಅವನು ಹಾಗೆಯೇ ಮಲಗಿ ದೂರದ ದಿಗಂತವನ್ನೇ ನೋಡು ್ತಿರುವಾಗ ದೂರದಲ್ಲಿ ಖರಪುಟ ಧ್ವನಿ ಕೇಳಿಸಿತು. ರಾಯನು ಚಕಿತ ಾಗಿ ಅತ್ತ ಕಡೆ ನೋಡಿದಾಗ ಅವರು ತಾನಿರುವಲ್ಲಿಗೇ ಬರುತ್ತಿರುವುದು ಕಾಣಿಸಿತು.

ಆ ಸಂನ್ಯಾಸಿ ಹೇಳಿದ ಮಾತು ನಿಜವಾಗಿತ್ತು. ಅವರು ರಾಯನನ್ನು ಅರಸುತ್ತ ಬಂದಿದ್ದವರು ರಾಯನ ಸಂಗಡಿಗರೇ ಆಗಿದ್ದರು.

## ೧೫

ಶಾಂತಿವಾದಿಯು ಸಂದೇಶದಂತೆ ಕೃಷ್ಣದೇವರಾಯನು ಬಿಜಾಪುರದ ಸುಲ್ತಾನ ಅದಿಲ್‌ಷಹನೊಂದಿಗೆ ಗೌರವಪೂರ್ಣವಾದ ಒಪ್ಪಂದ ಮಾಡಿಕೊಳ್ಳಲು ತಿಮ್ಮರಸನನ್ನು ಅಲ್ಲೇ ಬಿಟ್ಟು ತಾನು ರಾಜಧಾನಿಗೆ ಹಿಂದಿರುಗಿದನು.

ರಾಜಧಾನಿಯಲ್ಲಿ ರಾಜವೈದ್ಯರು ಮಾಡಿದ ಸಂತತವಾದ ಔಷಧೋಪಚಾರ ಹಾಗೂ ಆರೈಕೆಗಳಿಂದ ಕೃಷ್ಣದೇವರಾಯನ ಗಾಯಗಳು ವಾಸಿಯಾದವು. ಆದರೂ ರಾಯನಿಗೆ ಮೊದಲಿನ ಆರೋಗ್ಯ ಉಂಟಾಗಲು ಅನೇಕ ತಿಂಗಳ ವಿಶ್ರಾಂತಿ ಅಗತ್ಯವಾಗಿತ್ತು. ರಾಯನು ನಾಗಲಾಪುರದಲ್ಲಿ ತನ್ನ ಪ್ರಿಯತಮೆ ಚಿನ್ನಾದೇವಿಗಾಗಿ ಕಟ್ಟಿಸಿಕೊಟ್ಟಿದ್ದ ಅರಮನೆಯಲ್ಲಿ ವಿಶ್ರಾಂತಿಸುಖವನ್ನು ಅನುಭವಿಸುತ್ತಾ ಇದ್ದನು. ಹೀಗಿರುವಲ್ಲಿ ಒಂದು ದಿನ ಗೋವೆಯಿಂದ ಬಂದಿದ್ದ ರಾಜದೂತನು ಸಂತೋಷದ ವಾರ್ತೆಯನ್ನು ತಂದಿದ್ದನು.

ಗೋವೆಯನ್ನು ಆಕ್ರಮಿಸಿಕೊಂಡು ಪ್ರಬಲನಾಗಲು ಪ್ರಯತ್ನಿಸಿದ ದ್ರೋಹಿ ಅಸದ್‌ಖಾನನ ಮೇಲೆ ದಂಡೆತ್ತಿ ಹೋಗಿದ್ದ ಗೋವಿಂದರಾಜನು ಸಕಾಲದಲ್ಲಿಯೇ ಅವನ ಮೇಲೆ ಬಿದ್ದಿದ್ದನು. ಗೋವೆಯ ಪೋರ್ಚುಗೀಸರ ನೆರವಿಗೆ ಬಂದ ರಾಯನ ಸೈನ್ಯವನ್ನು ಕಂಡು ಅಸದ್‌ಖಾನನಿಗೆ ಹೆದರಿಕೆಯುಂಟಾಗಿ ಗೋವೆಯನ್ನು ಬಿಟ್ಟು ಬಹು ದೂರ ಓಡಿದ್ದನು. ಅವನನ್ನು ಬೆನ್ನಟ್ಟಿ ಹೋಗಿದ್ದ ಗೋವಿಂದರಾಜನು ಅಸದ್‌ಖಾನನ ಸೈನ್ಯವನ್ನು [illegible]ಗಟ್ಟಿ ಸದೆಬಡಿದಿದ್ದರೂ ಅವನನ್ನು ಜೀವಂತವಾಗಿ ಕೈಸೆರೆ ಹಿಡಿಯಲು ಸಮರ್ಥನಾಗಿರಲಿಲ್ಲ. ರಣರಂಗದಿಂದ ಹೇಡಿಯಂತೆ ತಲೆತಪ್ಪಿಸಿಕೊಳ್ಳಲೆತ್ನಿಸಿದ ಅಸದ್‌ಖಾನನು ಗೋವಿಂದರಾಜನ ಕತ್ತಿಗೆ ತನ್ನ ತಲೆಯನ್ನೇ ತೆರಬೇಕಾಯಿತು. ಹೀಗೆ ಆ ಸ್ವಾಮಿ ದ್ರೋಹಿಯ ಕಥೆ ಪೂರೈಸಿತ್ತು.